ಶ್ರೀ ಶೇಷಾಚಲ ಗ್ರಂಥಮಾಲೆ, ಆನಂದವನ

# ಭಯಂಕರ ಸೇಡು!

[ಐತಿಹಾಸಿಕ ಕಥೆ]

ಲೇಖಕ:

ನಾಗೇಶ

ಪ್ರಕಾಶಕ:

ಭಿ. ಪ. ಕಾಳೆ,

ಮ್ಯಾ. ಶ್ರೀ ಶೇಷಾಚಲ ಗ್ರಂಥಮಾಲೆ,

ಆನಂದವನ(ಅಗಡಿ)

ಅಕ್ಟೋಬರ ೧೯೩೪

೧॥ ರೂ.



# ಮುನ್ನುಡಿ

ವಾಙ್ಮಯವು ರಾಷ್ಟ್ರಕ್ಕೆ ಸಂಜೀವಿನಿಯಂತಿರುವದು. ವಾಙ್ಮಯದ ಬೆಳವಣಿಗೆಯಾದಂತೆ ರಾಷ್ಟ್ರವು ಅಭ್ಯುದಯ ಹೊಂದುತ್ತ ನಡೆಯುವದು. ವಾಙ್ಮಯದ ಅಭ್ಯುದಯಕ್ಕಾಗಿ ಯತ್ನಿಸುವದರಲ್ಲಿಯೆ ಉದಯೋನ್ಮುಖ ರಾಷ್ಟ್ರದ ನಿಜವಾದ ಪುರುಷಾರ್ಥವಿರುತ್ತದೆ. ಮನುಷ್ಯನ ವಿಚಾರಗಳ ಉತ್ಕ್ರಾಂತಿಗೆ ಸದ್ಯದ ಸ್ಥಿತಿಯಲ್ಲಿ ವಾಙ್ಮಯದಂತಹ ಉತ್ತಮವಾದ ಸಾಧನವು ಬೇರೊಂದಿರಲಾರದು. ಭರತವರ್ಷದ ಅರ್ವಾಚೀನ ಇತಿಹಾಸದ ಒಂದೊಂದೇ ಓಲೆಗಳನ್ನು ನೋಡತೊಡಗಿದರೆ ಅವುಗಳಲ್ಲಿ ಬಹುತರವಾಗಿ ಒಡಕು, ನಾಡಹಗೆತನ, ಜಡಸ್ವಾರ್ಥ, ಆತ್ಮಸುಖಪರಾಯಣತೆ, ಕರ್ತವ್ಯ ಪರಾಙ್ಮುಖತೆ, ಅನಿಯಮಿತತನ, ಸಮಯನಿಷ್ಠಾವಿಹೀನತೆ ಮೊದಲಾದ ನೋಟಗಳು ಕಂಗೊಳಿಸುತ್ತವೆ. ಈ ಕಾರಣಗಳಿಂದ ಸ್ವತಂತ್ರ ಭಾರತವು ಪಾರತಂತ್ರ್ಯಪಂಕದಲ್ಲಿ ಸಿಲುಕಿತು. ಪಾರತಂತ್ರ್ಯದಲ್ಲಿ ಸಿಲುಕಿದ ರಾಷ್ಟ್ರವು ತೇಜೋಹೀನವಾಗುವದೆಂಬದರಲ್ಲಿ ಸಂದೇಹವೇನು? ತೇಜೋಹೀನವಾದ ಹಿಂದುಸ್ತಾನವು ಸದ್ಯದ ಸ್ವಾತಂತ್ರ್ಯ-ಸುಧಾರಣೆಗಳ ಯುಗದಲ್ಲಿ ಸಹ ರಾಜಕೀಯ, ಧಾರ್ಮಿಕ, ಔದ್ಯೋಗಿಕ ವಿಷಯಗಳಲ್ಲಿ ಅಧಃಪಾತಹೊಂದಿರುವದು. ಅವನತಿ ಹೊಂದಿದ ರಾಷ್ಟ್ರವು ಅಭ್ಯುದಯ ಹೊಂದಲಿಕ್ಕೆ ದೇಶದಲ್ಲಿ ಐಕ್ಯ, ಸ್ವದೇಶ ಪ್ರೀತಿ, ಕರ್ತವ್ಯನಿಷ್ಠೆ ಮೊದಲಾದ ಸದ್ಗುಣಗಳು ನೆಲೆಗೊಳ್ಳಬೇಕಾಗುವವು. ಈ ಗುಣಗಳು ಜನಾಂಗದಲ್ಲಿ ನೆಲೆಗೊಳ್ಳುವಂತೆ ಮಾಡುವ ಸಾಧನಗಳಲ್ಲಿ ವಾಙ್ಮಯವೊಂದಾಗಿರುವದೆಂದು ಹೇಳಬಹುದು. ನೀತಿ ಸಂವರ್ಧಕವೂ ರಾಷ್ಟ್ರಧರ್ಮಪರಿಪೋಷಕವೂ ಆದ ವಾಙ್ಮಯದ ಅಭಿವೃದ್ಧಿಯಾಗಿರುವದರಿಂದಲೆ ಜನಾಂಗವು ಅಭ್ಯುದಯ ಹೊಂದುವದೆಂಬದು ನಿರ್ವಿವಾದ ಮಾತಾಗಿರುವದು.

ಭಾರತವರ್ಷದ ಮೇಲೆ ರಾಜಕೀಯ, ಧಾರ್ಮಿಕ, ಔದ್ಯೋಗಿಕ ದಾಳಿಗಳು ಅನೇಕವಾಗಿ ಮಾಡಲ್ಪಟ್ಟವು. ಪ್ರತಿಯೊಂದು ದಾಳಿಯ ಪ್ರತಿಕಾರಕ್ಕಾಗಿ ಹಿಂದು ಜನಾಂಗವು ಪರಾಕಾಷ್ಠೆಯ ಪ್ರಯತ್ನ ಮಾಡಿದ ದೃಶ್ಯಗಳಾದರೂ ಅಲ್ಲಲ್ಲಿ ಕಾಣುತ್ತವೆ. ಹೀಗಿದ್ದರೂ ಹಿಂದುಗಳ ಪಾಲಿಗೆ ಅಪಯಶವು ಬಂದ ಉದಾಹರಣೆಗಳೇ ಬಹಳವಿರುವವು. ಈ ಎಲ್ಲ ಸ್ಥಿತಿರೀತಿಗಳನ್ನು ನೋಡಲು, ಹಿಂದುಗಳಲ್ಲಿ ಅನೇಕ ಬಗೆಯ ದೋಷಗಳಿರಬಹುದೆಂದು ತರ್ಕಿಸಲಿಕ್ಕೆ ಮಾರ್ಗವಿರುವದು. ರಾಜಕೀಯ, ಔದ್ಯೋಗಿಕ, ಧಾರ್ಮಿಕಬಾಬುಗಳ ಪ್ರತಿಕಾರಕ್ಕಾಗಿ ದೇಶದಲ್ಲಿ ಐಕ್ಯವೂ, ಶೂರತನವೂ, ಸ್ವಾಭಿಮಾನವೂ, ಸ್ವದೇಶ ಪ್ರೀತಿಯೂ, ಶುದಿ ಸಂಘಟನ-ಹಿಂದುಕರಣಗಳೂ ಸಾಧನವಾಗಿರುವವು. ಸದ್ಯಕ್ಕೆ ಈ ಬಗೆಯ ಪ್ರಯತ್ನಗಳು ನಡೆದು ಅಲ್ಪಮಟ್ಟಿಗಾದರೂ ಆಗಲೊಲ್ಲದೇಕೆ, ಫಲದ್ರೂಪವಾಗತೊಡಗಿರುವವೆಂದು ಸ್ವಾಭಿಮಾನಪೂರ್ವಕವಾಗಿ ಹೇಳಬಹುದು. ಈ ವಿಧದ ಪ್ರಯತ್ನಗಳು ಕೆಲವು ಶತಕಗಳ ಹಿಂದೆ ಒಳ್ಳೆಯ ರಭಸದಿಂದ ನಡೆದಿದ್ದರೆ ಹಿಂದು ದೇಶವು ಸದ್ಯದ ಪರಿಸ್ಥಿತಿಗಿಂತ ಭಿನ್ನವಾಗಿರುತ್ತಿತ್ತು. ಧಾರ್ಮಿಕ ವಿಷಯದಲ್ಲಿ ಸನಾತನ ಧರ್ಮಿಯರು ಅಂಧಶ್ರದ್ಧೆಯುಳ್ಳವರಿರುವದರಿಂದ ಆಗ ಧಾರ್ಮಿಕ ಚಲನವಲನಕ್ಕೆ ಆಸ್ಪದವು ದೊರೆಯದೆ, ದೇಶವು ಅನೇಕ ವಿಧದ ಆಪತ್ತುಗಳಿಗೀಡಾಯಿತು.

ಪರಕೀಯರಿಂದ ರಾಜಕೀಯ ಔದ್ಯೋಗಿಕ ಧಾರ್ಮಿಕ ದಾಳಿಗಳು ಮಾಡಲ್ಪಟ್ಟಾಗ ಬಹುತರವಾಗಿ ಹಿಂದುಗಳೇ ಪರಾಭವ ಹೊಂದಿದ ಕಾರಣವೇನಿರಬಹುದೆಂದು ಕ್ಷಣಮಾತ್ರ ವಿಚಾರಿಸಿದರೆ, ಹಿಂದುಗಳಲ್ಲಿ ರಾಷ್ಟ್ರಧರ್ಮಪರಿಪೋಷಕವಾದ ಗುಣಗಳ ಅಭಾವವೇ ಕಾರಣವೆಂದು ಉತ್ತರವು ಹೊರಡುವದು. ಶ್ರೀ ವಿದ್ಯಾರಣ್ಯ, ಛತ್ರಪತಿ ಶಿವಾಜಿ ಮಹಾರಾಜ ಮೊದಲಾದ ದಿವ್ಯ ವಿಭೂತಿಗಳು ರಾಷ್ಟ್ರವನ್ನು ಜಾಗೃತ ಪಡಿಸಿ ಸ್ವರಾಜ್ಯಸಂಸ್ಥಾಪನೆ ಮಾಡಿದರೂ, ಅವರ ಸ್ವರಾಜ್ಯಗಳು ಚಿರಂತನವಾಗಿ ಬಾಳದ್ದಕ್ಕೆ ಇದೇ ಕಾರಣವೆಂದು ಸ್ಪಷ್ಟವಾಗಿ ಕಾಣುವದು. ರಾಷ್ಟ್ರಾಭಿಮಾನಿಗಳಾದ ತೇಜಸ್ವಿಗಳ ಸಾಹಸವು ರಾಷ್ಟ್ರಘಾತಕಿಗಳ ಕೃಷ್ಣಕೃತಿಯಿಂದ ವ್ಯರ್ಥವಾಗಿ ಹೋದ ದೃಶ್ಯಗಳು ಹಿಂದುಸ್ಥಾನದ ಅರ್ವಾಚೀನ ಇತಿಹಾಸದಲ್ಲಿ ಹೇರಳವಾಗಿ ದೊರೆಯುವವು. ಜನಾಂಗದಲ್ಲಿ ನೀತಿಯೂ, ರಾಷ್ಟ್ರಧರ್ಮವೂ, ಕರ್ತವ್ಯಜಾಗ್ರತೆಯೂ ನೆಲೆಗೊಳ್ಳಲಿಕ್ಕೆ ಬೇಕಾಗುವಂತಹ ಸಾಧನಗಳಲ್ಲಿ ವಾಙ್ಮಯವೊಂದು ಅತ್ಯುತ್ತಮವಾದ ಸಾಧನವಾಗಿರುವದು. ಧರ್ಮನೀತಿ ಪ್ರಚುರ

ವಾದ ವಾಙ್ಮಯವೂ ಅದೇ ಬಗೆಯ ಶಿಕ್ಷಣವೂ ರಾಷ್ಟ್ರದ ಏಳ್ಗೆ ಮಾಡುವವು. ಆ ಬಗೆಯ ವಾಙ್ಮಯವೂ, ಆ ಬಗೆಯ ಶಿಕ್ಷಣವೂ ಎಷ್ಟೋ ಅವಾಂತರ ಕಾರಣಗಳಿಂದ ಮೊದಲು ರೂಢವಾಗಿರಲಿಲ್ಲ; ಸದ್ಯಕ್ಕಾದರೂ ಇರುವದಿಲ್ಲ. ರಾಷ್ಟ್ರಧರ್ಮ ಪರಿಪೋಷಕವಾದ ವಾಙ್ಮಯದ ವಿಸ್ತಾರವಾಗಿ ಅದೇ ತರಹದ ಶಿಕ್ಷಣವು ರೂಢವಾಗುವ ವರೆಗೆ ರಾಷ್ಟ್ರವು ಹೊಂದತಕ್ಕಷ್ಟು ಅಭ್ಯುದಯ ಹೊಂದಲಾರದು. ಜಡಸ್ವಾರ್ಥ, ದೇಶದ್ರೋಹ, ಕರ್ತವ್ಯಪರಾಙ್ಮುಖತೆ ಮೊದಲಾದ ರಾಷ್ಟ್ರವಿಘಾತಕ ಗುಣಗಳು ಅನೇಕ ಶತಕಗಳಿಂದ ನಮ್ಮ ಜನಾಂಗದಲ್ಲಿ ನೆಲೆಗೊಂಡಿರುವವು. ಅಂತಹ ದುರ್ಗುಣಗಳ ಪ್ರಮಾಣವು ಕಡಿಮೆಯಾಗಲಿಕ್ಕೆ ರಾಷ್ಟ್ರಧರ್ಮ ಪರಿಪೋಷಕವಾದ ವಾಙ್ಮಯವು ಸಹಾಯ ವಾಗದಿರದು. ರಾಷ್ಟ್ರೀಯ ಶಿಕ್ಷಣದ-ವಾಙ್ಮಯದ-ಅಭಾವಕ್ಕಾಗಿ ದೇಶವು ಮತ್ತಿಷ್ಟು ಅಧೋಗತಿಯನ್ನು ಹೊಂದಿರುವದೆಂದು ಹೇಳಿದರೆ ಬಹುಶಃ ತಪ್ಪಾಗಲಿಕ್ಕಿಲ್ಲ.

ಕಾಲಾಚಾಂದನೆಂಬ ತೇಜಸ್ವಿಯಾದ ತರುಣನು ಧರ್ಮದ ಅಂಧ ಶ್ರದ್ಧೆಯ ಹಿಂದುಗಳಿಂದ ಅಪಮಾನಿತನಾಗಿ ಯವನ ಧರ್ಮವನ್ನು ಸ್ವೀಕರಿಸಿ, ತನಗಾದ ಅಪಮಾನದ ಸೇಡನ್ನು ಎಷ್ಟು ಭಯಂಕರವಾದ ರೀತಿಯಿಂದ ತೀರಿಸಿಕೊಂಡನೆಂಬದರ ಅದ್ಭುತವಾದ ದೃಶ್ಯವು ಈ ಕಥಾನಕದಲ್ಲಿ ಕಾಣುವದು. ವ್ರಜಬಾಲೆ, ಭೂಪಬಾಲೆ, ಕರೀಮುಶಹ, ದೀನಕೃಷ್ಣ, ಗದಾಧರ ಮೊದಲಾದ ತೇಜಸ್ವಿಗಳಾದ ತರುಣ ತರುಣಿಯರು ತಮ್ಮ ಸದ್ಗುಣಗಳನ್ನು ಪ್ರಕಟ ಗೊಳಿಸಿ ಸುಕೀರ್ತಿವಂತರಾಗಿರುವರು. ರಾಜಾಮುಕುಂದದೇವನು ವಿಷಯ ಲಾಲಸೆಗೊಳಗಾಗಿ ಕರ್ತವ್ಯಪರಾಙ್ಮುಖನಾದುದರಿಂದ ರಾಷ್ಟ್ರದ ಹಾನಿಯಾ ಯಿತು. ಜನಾರ್ದನ ಹರಿಕೀರ್ತನ ಭೃಗುರಾಮ ಮೊದಲಾದ ರಾಷ್ಟ್ರಘಾತಕಿ ಗಳು ಜಡಸ್ವಾರ್ಥಕ್ಕೊಳಪಟ್ಟು ಮಾಡಿದ ಕಾರಸ್ಥಾನಗಳು ದೇಶದ ಹಾನಿಗೆ ಹೇಗೆ ಕಾರಣವಾದವೆಂಬದು ಇತಿಹಾಸಜ್ಞರಾದ ವಾಚಕ ಮಹಾಶಯರಿಗೆ ಅರಿಯದಿಲ್ಲ. ರಾಷ್ಟ್ರ ಧರ್ಮದ ಮಹತಿಯು ಬಹಳವಿರುತ್ತದೆ. ನಿಜವಾದ ರಾಷ್ಟ್ರಧರ್ಮಿಯಿಂದಲೆ ದೇಶದ ನಿಜವಾದ ಕಲ್ಯಾಣವು ಸಾಧಿಸುವದು. ರಾಷ್ಟ್ರ ಧರ್ಮ ಪರಿಪೋಷಕವೂ ನೀತಿಸಂವರ್ಧಕವೂ ಆಗಬೇಕೆಂಬ ಉದ್ದೇಶದಿಂದಲೆ ಈ ಚಿಕ್ಕ ಕಥಾನಕವನ್ನು ಬರೆದಿರುವೆನು. ಈ ಉದ್ದೇಶವು ಎಷ್ಟರಮಟ್ಟಿಗೆ ಸಾಧ್ಯವಾಗಿರುವದೆಂಬದನ್ನು ವಿಮರ್ಶಿಸುವ ಭಾರವು ವಾಚಕವೃಂದವನ್ನೆ ಅವಲಂಬಿಸಿರುವದು. ಈ ಕಥೆಯು ಜನಾಂಗದ ರಾಜಕೀಯ ಧಾರ್ಮಿಕ

ದೃಷ್ಟಿಯನ್ನು ಅಲ್ಪವುಟ್ಟಿಗಾದರೂ ಸಂಪಡಿಸಿದರೆ ನನ್ನ ಶ್ರಮದ ಸಾರ್ಥಕತೆ ಯಾಗುವದು.

ಮಹಾರಾಷ್ಟ್ರ ಭಾಷೆಯೊಳಗಿನ ಎರಡು ಕಥೆಗಳು ಈ ಕಥಾನಕವನ್ನು ಬರೆಯಲಿಕ್ಕೆ ಮೂಲಧನವಾದ್ದರಿಂದ ಆ ಕಥೆಗಳ ಲೇಖಕ ಪ್ರಕಾಶಕ ಮಹಾಶಯರ ಉಪಕಾರವನ್ನು ಕೃತಜ್ಞತೆಯಿಂದ ಸ್ಮರಿಸುವೆನು. ಈ ಕಥೆಯನ್ನು 'ಶ್ರೀ ಶೇಷಾಚಲ ಗ್ರಂಥಮಾಲೆ'ಯಲ್ಲಿ ಪ್ರಕಟಿಸಲಿಕ್ಕೆ ಆನಂದದಿಂದ ಒಪ್ಪಿದ್ದಕ್ಕಾಗಿ ಗ್ರಂಥಮಾಲೆಯ ಚಾಲಕರಾದ ಶ್ರೀಯುತ ಭಿ. ಪ. ಕಾಳೆಯವರಿಗೆ ಉಪಕೃತನಾಗಿರುವೆನು; ಹಾಗು ಇದನ್ನು ಬರೆಯಲಿಕ್ಕೆ ಸೂಚನೆಗಳನ್ನು ಮಾಡಿದ ನನ್ನ ಸನ್ಮಿತ್ರರೂ ಕನ್ನಡ ಸಾಹಿತ್ಯ ಪ್ರೇಮಿಗಳೂ ಆದ ಶ್ರೀಯುತ ಹುಚ್ಚಾಚಾರ್ಯ ಮೊರಬ ಪೋಸ್ಟ ಮಾಸ್ತರ ಮುಂಡರಗಿ ಈ ಮಹಾಶಯರಿಗೆ ತುಂಬಾ ಋಣಿಯಾಗಿರುವೆನು. ಕೊನೆಗೆ ಸಾಹಿತ್ಯ ಯಶವನ್ನು ಪ್ರಾಪ್ತಮಾಡಿ ಕೊಡುವ ಸದ್ಗುರುವನ್ನು ಅನನ್ಯಭಾವದಿಂದ ಪ್ರಾರ್ಥಿಸಿ, ವಿಶ್ರಮಿಸುವೆನು.

ಬನ್ನಿಕೊಪ್ಪ, ತಾ|| ೮ ೩-೩೪

ಕನ್ನಡಿಗರ ವಿಧೇಯ,
ನಾಗೇಶ.

## ಅರ್ಪಣ ಪತ್ರಿಕೆ.

ಸದ್ಗುರೂ!



ನಿನ್ನ ಸನ್ನಿಧಿಗಿದು!!

ಸದ್ಗುರುವಿನ ಅಡಿಯಾಳು,

ನಾಗೇಶ.

# ಪರಿವಿಡಿ.

# ಭಯಂಕರ ಸೇಡು!

## ವಿಚಿತ್ರ ಭವಿಷ್ಯ!

"ಗದಾಧರ!"

"ಯಾಕೆ ಕಾಲಾಚಾಂದ?"

"ಗುರಿ ಹೊಡೆಯುವದರಲ್ಲಿ ನೀನು ನಿನ್ನೆ ವಿಜಯಿಯಾಗಿರುವದರಿಂದ ಬಹಳೇ ಉನ್ಮತ್ತನಾದಂತೆ ತೋರುವೆ."

"ನಾನು ಉನ್ಮತ್ತನಾಗಿಲ್ಲ; ವಿಜಯಾನಂದವುಳ್ಳವನಾಗಿರುವೆನು."

"ನಿನ್ನಿನ ಪ್ರಸಂಗದಿಂದ ನನಗಿಂತಲೂ ನೀನು ವಿಕ್ರಮಶಾಲಿಯೆಂದು ತಿಳಿದುಕೊಂಡಂತೆ ಕಾಣುತ್ತದೆ."

"ಯಾಕೆ ತಿಳಿದುಕೊಳ್ಳಬಾರದು?"

"ನೀನು ಬುದ್ಧಿಗೇಡಿಯಿರುವೆ."

"ಅದೇಕೆ?"

"ನಿನಗಿಂತ ನಾನು ಹೆಚ್ಚು ಪರಾಕ್ರಮಿಯಿರುವೆನು."

"ನಿನ್ನೆ ಎಲ್ಲ ವಿಷಯಗಳ ಪರೀಕ್ಷೆಯಾಗಿರುವದು."

"ಬೇಟೆಗೆ ಹೋದಾಗ ನನ್ನ ಬಾಣವು ಹುಲಿಗೆ ತಗಲಲಿಲ್ಲ; ನಿನ್ನ ಬಾಣವು ತಗಲಿತು. ಇಷ್ಟು ಮಾತಿಗಾಗಿ ನೀನು ನಿನ್ನ ಶೂರತನದ ಹೆಮ್ಮೆಯನ್ನು ಮೆರೆಯಿಸತೊಡಗಿರುವೆ."

"ಹುಲಿಯ ಬೇಟೆಯ ಸುದ್ದಿಯು ಒಂದು ಕಡೆಗಿರಲಿ; ವನವರಾಹದ ಬೇಟೆಯಲ್ಲಿ ನೀನು ಪೂರ್ಣ ಹತಾಶನಾಗಿದ್ದಿಲ್ಲವೆ?"

"ನಿನ್ನೆ ಯಾವಕಾರಣದಿಂದಲೋ ಏನೋ, ಬೇಟೆಯಲ್ಲಿ ನನಗೆ ಯಶವು ಲಭಿಸಲಿಲ್ಲವೆಂಬದು ನಿಜವು."

"ನಾನು ಯಶಸ್ವಿಯಾದೆನೆಂದೇ ವಿಜಯಾನಂದವಾಗಿದೆ. ಆನಂದ ಮನಸ್ಕನಿಗೆ ಉನ್ಮತ್ತನೆಂದು ಹೆಸರಿಡುವದು ಎಲ್ಲಿಯ ನ್ಯಾಯ?"

"ಆನಂದಮದದಿಂದ ನೀನು ನನಗಿಂತ ಹೆಚ್ಚು ಪರಾಕ್ರಮಿಯೆಂದು ತಿಳಿದಂತೆ ಕಾಣುವದು. ಗದಾಧರ, ಯವನರು ಯಾರನ್ನು ಕಂಡರೆ ಹೆಚ್ಚು ಹೆದರುತ್ತಾರೆ?"

"ನನಗಿಂತ ನಿನಗೆ ಹೆಚ್ಚಾಗಿ ಅಂಜುವದು ನಿಜವು."

"ಇಷ್ಟರಿಂದ ಯಾರು ಸಮರ್ಥರೆಂಬದು ನಿನಗೆ ತಿಳಿಯುವದಿಲ್ಲವೇನು?"

"ಹಿಂದಿನ ವಿಷಯಕ್ಕಿಂತಲೂ ನಿನ್ನಿನ ವಿಷಯವು ಹೊಸದಿರುವದೆಂಬದನ್ನು ನೀನು ಮರೆತಂತೆ ಕಾಣುತ್ತದೆ."

"ಗದಾಧರ!"

"ಮತ್ತೇನು ಕಾಲಾಚಾಂದ?"

"ನೀನು ಹೀಗೆ ಗರ್ವಿಷ್ಠನಾಗಬೇಡ."

"ನಿಜಸ್ಥಿತಿಯನ್ನು ಹೇಳಿದರೆ ಗರ್ವಿಷ್ಠನೆನ್ನುವಿಯಾ?"

"ಹಿಂದಿನ ವಿಷಯಗಳನ್ನು ಇಬ್ಬರೂ ಮರೆಯೋಣ ಇಂದು ನನ್ನ ನಿನ್ನ ಶೂರತನದ ನಿರ್ಣಯವಾಗಿ ಹೋಗಲಿ."

"ಯಾರು ಬೇಡವೆನ್ನುವರು?"

"ನೀನು ನಿನ್ನ ತಂಡವನ್ನು ತೆಗೆದುಕೊಂಡು ಬಾ; ನಾನಾದರೂ ನನ್ನ ತಂಡವನ್ನು ತರುವೆನು. ಮಲ್ಲಯುದ್ಧದಲ್ಲಿ ನಮ್ಮ ನಿಮ್ಮ ಪರಾಕ್ರಮವನ್ನು ಒರೆಗೆ ಹಚ್ಚೋಣ."

"ತಂಡ ತಂಡಕ್ಕೆ ಮಲ್ಲಯುದ್ಧವು ನಡೆದರೆ ನನ್ನ ನಿನ್ನ ಕಲಿತನದ ಪರೀಕ್ಷೆಯೇನಾದಂತಾಯಿತು?"

"ತಂಡದ ನಾಯಕರಾದ ನಾವು ಕಣ್ಣು ಮುಚ್ಚಿಕೊಂಡು ಕುಳಿತುಕೊಳ್ಳುವೆವೇನು?"

"ಕಾಲಾಚಾಂದ, ಇಂದಿನ ಪರೀಕ್ಷೆಯು ಪರಿಣಾಮವಾದರೂ ನಿಜವೆ?"

"ಓಹೋ! ಇಂದಿನ ಕಾಳಗದಲ್ಲಿ ಜಯಶಾಲಿಗಳಾದವರೇ ಹೆಚ್ಚಿನ ಕಲಿಗಳು."

ಗದಾಧರನೂ ಕಾಲಾಚಾಂದನೂ ಓರಿಗೆಯವರು. ಅವರ ವಯಸ್ಸು ಈಗ ಹದಿನಾಲ್ಕು-ಹದಿನೈದರೊಳಗಿರಬಹುದು. ಇಬ್ಬರೂ ಬಂಗಾಲಿಗಳು. ವೀರಜಾವನ ಗ್ರಾಮವು ಕಾಲಾಚಾಂದನ ತವರೂರು ಇವನ ತಂದೆಯಾದ ನಯನಚಾಂದನು ಗೌಡ ಸುಲತಾನನಲ್ಲಿ ಸರದಾರ ನಿದ್ದನು. ಆ ನಯನಚಾಂದನು ಈಗ ಜೀವಂತವಿದ್ದಿಲ್ಲ; ಕಾಲಾಚಾಂದನ ತಾಯಿಯಾದ ಹರಸುಂದರಿಯು ಜೀವದಿಂದಿದ್ದಳು. ವೀರಜಾವನಲ್ಲಿ ಕಾಲಾಚಾಂದನ ಮನೆತನವು ಒಳ್ಳೇ ಶ್ರೀಮಂತಿಕೆಯದೆಂದು ಹೆಸರಾಗಿತ್ತು.

ಗದಾಧರನು ಕಾಲಾಚಾಂದನ ಬಾಲಮಿತ್ರನು. ಬಂಗಾಲದೊಳಗಿನ ಸಾಂತೋಡೆಯು ಅವನ ಜನ್ಮಗ್ರಾಮವು. ಇವನ ಅಣ್ಣನಾದ ಶಕ್ತಿಧರನು ಗೌಡ ಸುಲತಾನನಲ್ಲಿ ಸೇವಾವೃತ್ತಿಯನ್ನು ಕೈಕೊಂಡಿದ್ದನು. ವೀರಜಾವ ನದಲ್ಲಿ ಗದಾಧರನ ತಂದೆಯ ಆಸ್ತಿಯು ಬಹಳವಿತ್ತು. ಆ ಆಸ್ತಿಯು ವ್ಯವಸ್ಥೆಗಾಗಿ ಒಬ್ಬ ಗುಮಾಸ್ತನು ವೀರಜಾವನದಲ್ಲಿರುತ್ತಿದ್ದನು. ಸದ್ಯ ದಲ್ಲಿದ್ದ ಗುಮಾಸ್ತನು ವಿದ್ವಾಂಸನಿದ್ದುದರಿಂದ ಗದಾಧರನ ತಂದೆಯು ಅವನನ್ನು ಆ ಗುಮಾಸ್ತನಲ್ಲಿ ವಿದ್ಯಾಭ್ಯಾಸಕ್ಕಾಗಿ ಕಳಿಸಿದ್ದನು.

ಕಾಲಾಚಾಂದ-ಗದಾಧರರು ಒಂದು ಗಳಿಗೆ ಸಹ ಒಬ್ಬರನ್ನೊಬ್ಬರು ಅಗಲಿ ಇರುತ್ತಿದ್ದಿಲ್ಲ. ಅವರಿಬ್ಬರೂ ಈಗ ವಿದ್ಯಾಭ್ಯಾಸವನ್ನು ತೀರ ದುರ್ಲಕ್ಷಿಸಿದ್ದರು. ಕುದುರೆಯೇರುವದು, ಬೇಟೆಯಾಡುವದು, ಮಲ್ಲ ಕಾಳಗಮಾಡುವದು, ಗಿರಿವನಗಳಲ್ಲಿ ತಿರುಗಾಡುವದು ಮೊದಲಾದ ಕೆಲ ಸಗಳಲ್ಲಿ ಅವರು ಕಾಲ ಕಳೆಯಹತ್ತಿದ್ದರು. ಗಟ್ಟಿಗರಿಂದ ಹೊಡೆಯು ಲಸಾಧ್ಯವಾದ ಹುಲಿಯನ್ನು ಇವರು ನಿರ್ಭಯದಿಂದ ಹೊಡೆದು ಒರು ತ್ತಿದ್ದರು. ಎಂಥ ಎಟ್ಟಿ ಕುದುರೆಯನ್ನಾದರೂ ಇವರು ಸಹಜವಾಗಿ ಹಾದಿಗೆ ತರುತ್ತಿದ್ದರು. ಇಬ್ಬರೂ ಶೂರರು; ಧೈರ್ಯಶಾಲಿಗಳು. ಶಕ್ತಿ-ಸಾಹಸಗಳಲ್ಲಿ ಕಾಲಾಚಾಂದನು ಗದಾಧರನಿಗಿಂತ ಶ್ರೇಷ್ಠನಾಗಿದ್ದನು ಸಾಂತೋಡೆಯ ಜಹಾಗೀರದಾರನ ಮಗನಾದ ಗದಾಧರನು ಶ್ರೀಮಂತಿಕೆ ಯಲ್ಲಿ ಕಾಲಾಚಾಂದನಿಗಿಂತಲೂ ವರಿಷ್ಠನಿದ್ದನು.

ಗದಾಧರ ಕಾಲಾಚಾಂದರು ತಮ್ಮ ಓರಿಗೆಯ ಕೆಲವು ಹುಡುಗರನು

ತಮ್ಮ ಕೈಯೊಳಗೆ ತೆಗೆದುಕೊಂಡು, ಅವರಿಗೆ ಕುದುರೆ ಹತ್ತುವದು ದಾಂಡ ಪಟ್ಟಿಯಾಡುವದು ಖಡ್ಗವನ್ನು ಪ್ರಯೋಗಿಸುವದು ಮೊದಲಾದ ಯುದ್ಧೋಪಯುಕ್ತವಾದ ಕಲೆಗಳನ್ನು ಕಲಿಸಲಾರಂಭಿಸಿದ್ದರು. ಅವರಿಬ್ಬರೂ ತಮ್ಮ ತಮ್ಮ ತಂಡದ ಸೇನಾಪತಿಗಳಾಗಿದ್ದರು. ಆಗ ಬಂಗಾಲದಲ್ಲಿ ಯವನರು ರಾಜ್ಯಕರ್ತರಾಗಿದ್ದರು. ನೋಡಿದಲ್ಲಿ ಅವರ ಅತ್ಯಾಚಾರಗಳು ನಡೆಯುತ್ತಿದ್ದವು. ಬಾಲಸೇನಾಪತಿಗಳಾದ ಕಾಲಾಚಾಂದ-ಗದಾಧರರ ಅಂಜಿಕೆಯಿಂದ ಯವನರು ವೀರಜಾವನದಲ್ಲಿ ಹೆಜ್ಜೆಯನ್ನಿಡುತ್ತಿದ್ದಿಲ್ಲ

ಕಾಲಾಚಾಂದನು ಎಷ್ಟೇ ಉಡಾಳನಾಗಿದ್ದರೂ ಧರ್ಮದಲ್ಲಿ ವಿಶ್ವಾಸವುಳ್ಳವನಿದ್ದನು. ಅವನು ಸ್ನಾನ-ಸಂಧ್ಯೆ, ದೇವಪೂಜೆ ಮೊದಲಾದ ಧಾರ್ಮಿಕ ಕರ್ಮಗಳನ್ನು ಒಳ್ಳೇ ಭಕ್ತಿಯಿಂದ ಮಾಡುತ್ತಿದ್ದನು. ಸಂಧ್ಯಾದಿ ಕಾರ್ಯಗಳಲ್ಲಿ ತೊಡಗಿದಾಗ ಅವನು ಒಬ್ಬ ಋಷಿಕುಮಾರನಂತೆ ಒಪ್ಪುತ್ತಿದ್ದನು. ಧರ್ಮಾಚರಣೆಯಲ್ಲಿ ಮಗನು ನಿಷ್ಠೆಯುಳ್ಳವನಾಗಿದ್ದನ್ನು ನೋಡಿ ಹರಸುಂದರಿಗೆ ಮಹದಾನಂದವಾಗುತ್ತಿತ್ತು. ಪಂಡಿತ ಕುಲತಿಲಕರಾದ ಸಾಯನಾಚಾರ್ಯರ ವಂಶದಲ್ಲಿ ಜನಿಸಿದ ಕಾಲಾಚಾಂದನು ಧರ್ಮಶ್ರದ್ಧೆಯುಳ್ಳವನಾಗಿದ್ದುದರಲ್ಲಿ ವಿಸ್ಮಯವಿಲ್ಲ. ಗದಾಧರನಾದರೂ ಇವನಂತೆಯೆ ಸ್ವಧರ್ಮಾಭಿಮಾನಿಯಾಗಿದ್ದನು.

ಯವನರ ಎಷ್ಟೋ ಅನ್ಯಾಯಗಳನ್ನು ಕಣ್ಣಾರೆ ನೋಡುತ್ತಿದ್ದ ಕಾಲಾಚಾಂದ ಗದಾಧರರ ಅಂತಃಕರಣವು ಅತ್ಯಂತ ಸಂತಪ್ತವಾಗಿತ್ತು ಅತ್ಯಾಚಾರಿಗಳಾದ ಯವನರನ್ನು ಹೊಡೆದೋಡಿಸಿ ಮಾತೃಭೂಮಿಯನ್ನು ಪಾರತಂತ್ರ್ಯದಿಂದ ಬಿಡುಗಡೆ ಮಾಡುವದಕ್ಕಾಗಿಯೇ ತಮ್ಮ ಆಯುಷ್ಯವನ್ನು ವೆಚ್ಚಮಾಡಬೇಕೆಂದು ಅವರು ಈಗಿನಿಂದಲೇ ನಿರ್ಧರಿಸಿಕೊಂಡಿದ್ದರು. ಅವರಿಬ್ಬರೂ ಸಚ್ಚರಿತರು; ಅಧರ್ಮಾಚರಣೆಯನ್ನೊಂದೂ ಮಾಡುತ್ತಿರಲಿಲ್ಲ; ಎರಡನೆಯವರ ಅಧರ್ಮಾಚರಣೆಯನ್ನಾದರೂ ಅವರು ಸಹಿಸುತ್ತಿದ್ದಿಲ್ಲ

ಗದಾಧರ-ಕಾಲಾಚಾಂದರು ಜೀವದ ಗೆಳೆಯರಾಗಿದ್ದರೂ, ಎಷ್ಟೋ ಸಾರೆ ಪರಸ್ಪರರಲ್ಲಿ ಹೊಡೆದಾಟ-ಬಡಿದಾಟಗಳಾಗುತ್ತಿದ್ದವು. ಒಮ್ಮೊಮ್ಮೆ ಅವರಿಬ್ಬರ ತಂಡಗಳ ನಡುವೆಯಾದರೂ ಕಾಳಗವು ನಡೆಯುತ್ತಿತ್ತು

ಆದರೂ ಅವರವರಲ್ಲಿಯ ಪ್ರೇಮವು ಮಾತ್ರ ಆ ಹೊಡೆದಾಟಬಡಿದಾಟಗಳಿಂದ ಕಡಿಮೆಯಾಗುತ್ತಿದ್ದಿಲ್ಲ; ಆ ಪ್ರಸಂಗವು ತೀರಿದ ಮೇಲೆ ಇಬ್ಬರೂ ನಗುತ್ತ ಕೆಲೆಯುತ್ತ ವೇಳೆಗಳೆಯುತ್ತಿದ್ದರು.

ಕಾಲಾಚಾಂದನು ಗದಾಧರನಿಗಿಂತ ಹಟ್ಟಾಭಿಮಾನಿಯೂ ಅಪಮಾನವನ್ನು ಸಹಿಸದವನೂ ಆಗಿದ್ದನು. ಕುದುರೆ ಹತ್ತುವದರಲ್ಲಿ, ಬೇಟೆಯಲ್ಲಿ, ಮಲ್ಲಯುದ್ಧದಲ್ಲಿ ಒಮ್ಮೆಯಾದರೂ ಗದಾಧರನಿಗಿಂತ ಹಿಂದಾದನೆಂದರೆ, ಅವನ ಮನಸ್ಸು ಬಹಳೇ ಕುದಿಯುತ್ತಿತ್ತು. ಮುನ್ನಾ ದಿವಸದ ಹುಲಿಯ ಬೇಟೆಯಲ್ಲಿ ಗುರಿ ತಪ್ಪಿದ್ದರಿಂದಲೂ, ವರಾಹದ ಬೇಟೆಯಲ್ಲಿ ಹತಾಶನಾದ್ದರಿಂದಲೂ ಅವನ ಮನಸ್ಸು ಉದ್ವಿಗ್ನವಾಗಿತ್ತು. ಗದಾಧರನು ಅವನಿಗೆ ಪ್ರತಿಸ್ಪರ್ಧಿಯಂತಿದ್ದದರಿಂದ ಪ್ರತಿಯೊಂದು ಕಾರ್ಯದಲ್ಲಿ ತನ್ನ ಮಿತ್ರನಿಗಿಂತ ಶ್ರೇಷ್ಠನೆನಿಸಿಕೊಳ್ಳಬೇಕೆಂದು ಅವನ ಉತ್ಕಟೇಚ್ಛೆಯಿತ್ತು. ಒಮ್ಮೆ ಗದಾಧರನೊಡನೆ ಮಲ್ಲಯುದ್ಧಮಾಡಿ ತಮ್ಮಿಬ್ಬರ ಪರಾಕ್ರಮವನ್ನು ಒರೆಗೆ ಹಚ್ಚಿಬಿಡಬೇಕೆಂದು ಕಾಲಾಚಾಂದನು ನಿಶ್ಚಯಿಸಿಕೊಂಡನು. ಗದಾಧರನಾದರೂ ಅವನ ಬಯಕೆಯಂತೆ ನಡೆಯಲೊಪ್ಪಿದನು.

ಸಂಧ್ಯಾಕಾಲದ ಸಮಯವಾಗಿತ್ತು. ಮಲ್ಲಯುದ್ಧದ ಕಣದಲ್ಲಿ ಗದಾಧರ-ಕಾಲಾಚಾಂದರು ತಮ್ಮ-ತಮ್ಮ ಜನರೊಡನೆ ಕಾದಾಟವನ್ನು ಪ್ರಾರಂಭಿಸಿದ್ದರು. ಕಾಳಗವು ಒಳ್ಳೇ ನಿಕರಕ್ಕೆ ಬಂದಿತ್ತು. ಎರಡೂ ಬಣದವರು ಹಿಂಜರಿಯದೆ ಕಾದತೊಡಗಿದ್ದರು. ಕಾಲಾಚಾಂದ-ಗದಾಧರರ ಮಲ್ಲಯುದ್ಧವು ಪ್ರೇಕ್ಷಣೀಯವಾಗಿತ್ತು. ಯುದ್ಧದ ನಿರ್ಣಯವಾಗಬೇಕಾದರೆ ಇನ್ನೂ ಬಹಳ ವೇಳೆಯು ಬೇಕೆಂದು ಪ್ರೇಕ್ಷಕರು ಮಾತಾಡತೊಡಗಿದ್ದರು. ಅಷ್ಟರಲ್ಲಿ ಇಬ್ಬರು ಸೇವಕರು ಅಲ್ಲಿಗೆ ಬಂದು, ಅವ್ವನವರು ಕರೆಯುತ್ತಾರೆಂದು ಕಾಲಾಚಾಂದನಿಗೆ ಹೇಳಿದರು. ತಾಯಿಯ ನಿರೋಪವನ್ನು ಕೇಳಿದೊಡನೆಯೆ ಕಾಲಾಚಾಂದನು ನಿರುತ್ಸಾಹಿಯಾದನು ನಿಕರಕ್ಕೆ ಬಂದ ಕಾಳಗವನ್ನು ನಿಲ್ಲಿಸಬೇಕಾಯಿತೆಂದು ಅವನು ಖೇದಗೊಂಡನು. ಮಾತೃಭಕ್ತನಾದ ಕಾಲಾಚಾಂದನು ತಾಯಿಯ ಆಜ್ಞೆಯನ್ನು ಎಂತಹ ಪ್ರಸಂಗದಲ್ಲಿಯೂ ಮೀರುತ್ತಿದ್ದಿಲ್ಲ. ಅಂತೆಯೆ ಅವನು

ಹರ್ಷೇಯು ಕದನವನ್ನು ಬಿಟ್ಟು ಸೇವಕರೊಡನೆ ಮನೆಗೆ ಬಂದನು. ಗದಾಧರನಾದರೂ ಅವನ ಬೆನ್ನು ಬಿಟ್ಟಿದ್ದಿಲ್ಲ.

ಹರಸುಂದರಿಯು ಅಧ್ಯಾತ್ಮ ವಿಚಾರದಲ್ಲಿ ಬಹಳ ಮನಸ್ಸು ಹಾಕುತ್ತಿದ್ದಳು. ಸಾಧು-ಸತ್ಪುರುಷರು, ಯತಿಗಳು ಮೊದಲಾದವರ ಮೇಲೆ ಅವಳ ಭಕ್ತಿಯು ಬಹಳ. ಸಾಧುಸಂತರ ದರ್ಶನದಿಂದ ಅವಳು ಆನಂದಗೊಳ್ಳುತ್ತಿದ್ದಳು ಯಾವನೊಬ್ಬ ಯತಿಯು ಅವಳ ದೃಷ್ಟಿಗೆ ಬಿದ್ದರೆ ಅವನನ್ನು ಮನೆಗೆ ಕರೆದೊಯ್ದು ವೇದಾಂತ ಶ್ರವಣ ಮಾಡುತ್ತಿದ್ದಳು. ವೀರಜಾವನದಲ್ಲಿ ಒಬ್ಬ ಯತಿಯು ಬಂದಿರುವನೆಂಬದು ಹರಸುಂದರಿಗೆ ಪುರಜನರ ಮುಖಾಂತರವಾಗಿ ತಿಳಿಯಿತು. ಕೂಡಲೆ ಅವಳು ಆ ಯತಿಯ ಬಳಿಗೆ ಹೋಗಿ, ಮನೆಗೆ ದಯಮಾಡಿ ಸಬೇಕೆಂದು ಬೇಡಿಕೊಂಡಳು. ಯತಿಯಾದರೂ ಹರಸುಂದರಿಯು ವಿನಂತಿಯನ್ನು ಮನ್ನಿಸಿ, ಅವಳ ಮನೆಗೆ ಬಂದನು.

ಯತಿಯು ಹರಸುಂದರಿಗೆ ಅನೇಕ ಬಗೆಯ ಧರ್ಮಗಳನ್ನು ಉಪದೇಶಿಸಿ, ಅಧ್ಯಾತ್ಮ ವಿಚಾರವನ್ನಾದರೂ ತಿಳಿಸಿದನು. ಪಾರಮಾರ್ಥದಲ್ಲಿ ಆಸಕ್ತಳಾಗಿದ್ದ ಹರಸುಂದರಿಯು ಯೋಗ್ಯನಾದ ಆ ಯತಿಯ ಉಪದೇಶಾಮೃತವನ್ನು ಪಾನಮಾಡಿ, ತಾನು ಕೃತಾರ್ಥಳಾದೆನೆಂದು ಭಾವಿಸಿದಳು. ಕೆಲವು ವೇಳೆಯ ವರೆಗೆ ಉಪದೇಶ ಮಾಡಿದ ಮೇಲೆ ಯತಿಯು ಹರಸುಂದರಿಯನ್ನು ಕುರಿತು ಕೇಳಿದನು. "ಅಮ್ಮಾ, ನಿಮಗೆ ಒಬ್ಬ ಮಗನಿರುವನಲ್ಲವೆ?"

ಅಪರಿಚಿತನಾದ ಯತಿಯು ತನಗೆ ಒಬ್ಬ ಮಗನಿರುವನೆಂಬ ಸಂಗತಿಯನ್ನು ಗುರುತಿಸಿದ್ದರಿಂದ ಹರಸುಂದರಿಗೆ ಸೋಜಿಗವಾಯಿತು. ತಪಸ್ಸಿದ್ಧಿಯನ್ನು ಹೊಂದಿದ ಈ ಯತಿಯು ತ್ರಿಕಾಲಜ್ಞಾನಿಯಿರಬಹುದೆಂದು ಅವಳು ಭಾವಿಸಿದಳು. ಆಗ ಅವಳು ಯತಿಯನ್ನು ಕುರಿತು—"ಮಹಾರಾಜ, ನನಗೆ ಒಬ್ಬ ಮಗನಿರುವದು ನಿಜವು."ಎಂದು ಹೇಳಿದಳು. ತ್ರಿಕಾಲಜ್ಞಾನಿಯಾದ ಯತಿಗೆ ತನ್ನ ಮಗನನ್ನು ತೋರಿಸಿ ಅವನ ಭವಿಷ್ಯವನ್ನು ತಿಳಿದುಕೊಳ್ಳಬೇಕೆಂದು ಹರಸುಂದರಿಯು ಕುತೂಹಲವುಳ್ಳವಳಾದಳು.

ಕೂಡಲೆ ಅವಳು ಕಾಲಾಚಾಂದನನ್ನು ಹುಡುಕಿ ತರುವದಕ್ಕಾಗಿ ಸೇವಕ ರನ್ನು ಕಳುಹಿಸಿದಳು.

ಕಾಲಾಚಾಂದನು ಮನೆಗೆ ಬಂದ ಕೂಡಲೆ, ಹರಸುಂದರಿಯು ಗುರುಮಹಾರಾಜರಿಗೆ ನಮಸ್ಕಾರ ಮಾಡಬೇಕೆಂದು ಅವನಿಗೆ ಹೇಳಿದಳು. ಕಾಲಾಚಾಂದನು ನಮಸ್ಕಾರ ಮಾಡಿದೊಡನೆಯೆ ಗದಾಧರನೂ ಯತಿಯ ಪಾದಗಳಿಗೆ ಶಿರಬಾಗಿದನು. ಹರಸುಂದರಿಯು ಯತಿಗೆ ತನ್ನ ಮಗನನ್ನು ತೋರಿಸಿ:—"ಮಹಾರಾಜರೆ, ನನ್ನ ಕಾಲಾಚಾಂದನ ದೈವದಲ್ಲೇನಿರುವ ದೆಂಬದನ್ನು ಹೇಳಿರಿ."

"ಅಮ್ಮಾ, ಕಾಲಾಚಾಂದನ ದೈವದಲ್ಲಿ ಏನಿರುವದೆಂಬದು ನನಗೆ ಹೇಗೆ ಗೊತ್ತಾಗಬೇಕು? ನಾನು ಜ್ಯೋತಿಷಿಯಲ್ಲ."ಎಂದು ಆ ಯತಿಯು ಹೇಳಿದನು.

"ಗುರುಮಹಾರಾಜ, ಜ್ಯೋತಿಷಿಗಳಾಗದಿದ್ದರೇನಾಯಿತು? ನೀವು ತಪಸ್ಸಿದ್ಧಿಯನ್ನು ಪಡೆದವರಿರುವಿರಿ. ತ್ರಿಕಾಲಜ್ಞಾನಿಗಳಾದ ನಿಮಗೆ ಈ ಮಾತು ಅಸಾಧ್ಯವಿರುವದೆ?"

"ಗುರುಗಳೆ!" ಕಾಲಾಚಾಂದನು ಆವೇಶಯುಕ್ತವಾದ ವಾಣಿ ಯಿಂದ:—"ಭಾರತಮಾತೆಯು ಪಾರತಂತ್ರ್ಯ ಶೃಂಖಲೆಗಳಿಂದ ಬಂಧಿಸ ಲ್ಪಟ್ಟಿರುವಳು. ನನ್ನಿಂದ ಮಾತೃಭೂಮಿಯ ಸೇವಯು ಘಟಿಸಬಹುದೆ? ನನ್ನ ಮಾತೆಯನ್ನು ದಾಸ್ಯಸಂಕಟದಲ್ಲಿ ಕೆಡಹಿದ ಯವನರನ್ನು ಸ್ವದೇಶದಿಂದ ಹೊರಗೆ ಹಾಕುವೆನೆ? ಆರ್ಯ ಭೂಮಾತೆಯ ಸೇವೆಯಲ್ಲಿ ದೇಹವನ್ನು ಸವಿಸಬೇಕಂದು ನಾನು ದೃಢಸಂಕಲ್ಪ ಮಾಡಿಕೊಂಡಿರುವೆನು. ನನ್ನ ಈ ಹೆಬ್ಬಯಕೆಯು ಪೂರ್ಣವಾದೀತೆ?"

ಕಾಲಾಚಾಂದನ ಮುಖವನ್ನು ಯತಿಯು ಚನ್ನಾಗಿ ದಿಟ್ಟಿಸಿ ನೋಡಿ ದನು. ಅವನ ತೇಜಸ್ವಿಯಾದ ಮುಖವನ್ನು ನೋಡಿ ಯತಿಯು ಆನಂದ ಬಟ್ಟನು. ಆಗ ಅವನು ಸಂಭ್ರಮದಿಂದ ಹರಸುಂದರಿಯನ್ನು ಕುರಿತು:- "ಅಮ್ಮಾ, ಈ ನಿನ್ನ ಕುಮಾರನು ಅಸಾಧಾರಣನಿರುವನು. ತೇಜಸ್ವಿಯೂ ಅನುಪಮ ಶಕ್ತಿಶಾಲಿಯೂ ಆದ ನಿನ್ನ ಪುತ್ರನು ಅದ್ವಿತೀಯ ಶಸ್ತ್ರಕುಶಲ

ನಾಗುವನು. ದೃಢನಿಶ್ಚಯುದವನೂ ಕಟ್ಟಾಭಿಮಾನಿಯೂ ಆದ ಇವನಿಂದ ಎಂತಹ ಕಾರ್ಯಗಳಾದರೂ ಈಡೇರುವವು.''

''ಗುರುಗಳೇ, ಈ ಸಂಗತಿಗಳಲ್ಲದೆ, ಕಾಲಾಚಾಂದನ ದೈವದಲ್ಲಿ ಮತ್ತೇನಿರುವದು?'' ಎಂದು ಹರಸುಂದರಿಯು ಆತುರತೆಯಿಂದ ಕೇಳಿದಳು.

''ಅಮ್ಮಾ, ಎಲ್ಲ ಸಂಗತಿಗಳನ್ನು ಹೇಳುತ್ತೇನೆ; ಸಮಾಧಾನ ಗೊಳ್ಳಿರಿ.'' ಎಂದು ಸಂನ್ಯಾಸಿಯು ನುಡಿದು, ಕಾಲಾಚಾಂದನ ಮುಖವನ್ನು ಮತ್ತಿಷ್ಟು ಪರೀಕ್ಷಿಸಿ:-''ಈ ನಿನ್ನ ಕುಮಾರನು ಮಹಾ ಯಶಸ್ವಿಯಾ ಗುವನು. ಇವನಲ್ಲಿ ರಾಜಯೋಗವು ಸ್ಪಷ್ಟವಾಗಿ ಕಾಣುತ್ತದೆ.''

ಯತಿಯು ಹೀಗೆ ನುಡಿಯುತ್ತಿರಲು ಕಾಲಾಚಾಂದನು ನಡುವೇ ಬಾಯಿ ಹಾಕಿ: —''ಮಹಾರಾಜ, ನಾನು ವಂಗ ಭೂಮಿಗೆ ಅರಸನಾ ಗುವೆನೆ? ಯವನರನ್ನು ಜಯಿಸುವೆನೆ? ಮಾತೃಭೂಮಿಯನ್ನು ಬಂಧ ವಿಮೋಚನಗೊಳಿಸುವೆನೆ? ಹೇಳಿರಿ, ಎಲ್ಲ ಸಂಗತಿಗಳನ್ನು ವಿಶದವಾಗಿ ಹೇಳಿರಿ.''

''ಮಹಾರಾಜರೆ, ನನ್ನ ಬಾಲ ಮಿತ್ರನಾದ ಕಾಲಾಚಾಂದನು ಭಾಗ್ಯ ಶಾಲಿಯಾಗುವನೆಂಬದನ್ನು ಕೇಳಿ ಅತ್ಯಾನಂದವಾಯಿತು. ಅವನ ಭವಿಷ್ಯವನ್ನೆಲ್ಲ ಹೇಳಿರಿ.''

ಗದಾಧರನು ಹೀಗೆ ನುಡಿದ ಕೂಡಲೆ, ಯತಿಯು ಅವನ ಮುಖ ವನ್ನು ನೋಡಿ ನಿಟ್ಟುಸಿರಬಿಟ್ಟು:—''ಬಾಲಕನೆ, ನೀನಾದರೂ ಪರಾಕ್ರಮಿ ಯಿರುವೆ; ತೇಜಸ್ವಿಯಿರುವೆ; ಸ್ವಧರ್ಮಾಭಿಮಾನಿಯಿರುವೆ; ಸ್ವದೇಶನಿಷ್ಠ ನಿರುವೆ; ಆದರೆ ಮಾಡುವದೇನು? ನಿನ್ನ ಇಚ್ಛೆಯಂತೆ ಕಾರ್ಯಗಳಾಗುತ್ತ ಹೋಗುವದಿಲ್ಲ.''

''ಮಹಾರಾಜರೆ, ನನ್ನ ದೈವದಲ್ಲಿದ್ದಂತಾಗಲಿ. ಈಶಸಂಕಲ್ಪ ವನ್ನು ತಪ್ಪಿಸುವರಾರು? ನನ್ನ ಮಿತ್ರನು ಅಭ್ಯುದಯ ಹೊಂದಿದರೆ ಸಾಕು. ಒಬ್ಬ ತೇಜಸ್ವಿಯಾದ ಪುರುಷನಿಂದ ದೇಶಕ್ಕೆ ದೇಶವೆ ಸುಖಸಾಮ್ರಾಜ್ಯದಲ್ಲಿ ಲೋಲಾಡುವದು. ದೇಶದಲ್ಲಿ ಎಲ್ಲರೂ ದೈವಶಾಲಿಗಳಿರುವದಿಲ್ಲ. ನನ್ನ ಮಿತ್ರ ನಾದ ಕಾಲಾಚಾಂದನ ದೈವದಲ್ಲೇನಿರುವದೆಂಬದನ್ನಿಷ್ಟು ಹೇಳಿಬಿಡಿರಿ.''

ಗದಾಧರನು ಹೀಗೆ ನುಡಿದ ಕೂಡಲೆ, ಯತಿಯು ಕಾಲಾಚಾಂದನನ್ನು ಸಮೀಪದಲ್ಲಿ ಕರೆದು:—"ಕುಮಾರ, ನೀನು ನಿಜವಾಗಿ ಭಾಗ್ಯಶಾಲಿಯು. ನಿನ್ನ ಪ್ರಾಕ್ತನವು ಚನ್ನಾಗಿರುವದರಿಂದಲೆ............"

"ಮಹಾರಾಜರೆ, ಅಷ್ಟಕ್ಕೆ ಸುಮ್ಮನಾದಿರಿ?"

ಕಾಲಾಚಾಂದನು ಹೀಗೆ ನುಡಿದ ಕೂಡಲೆ ಸಂನ್ಯಾಸಿಯು ಅವನ ಹಸ್ತವನ್ನು ಕೈಯಲ್ಲಿ ತೆಗೆದುಕೊಂಡು ಕೈಯೊಳಗಿನ ರೇಷೆಗಳನ್ನು ನೋಡಿದನು; ಮುಖವನ್ನು ಚನ್ನಾಗಿ ಪರೀಕ್ಷಿಸಿದನು.

"ಯೋಗಿವರ್ಯರೇ, "ಹರಸುಂದರಿಯು ಉತ್ಕಂಠೆಯಿಂದ:-"ನನ್ನ ಕುಮಾರನಿಗೆ ಭಾಗ್ಯೋದಯವು ಎಂದು ಆಗುವದು?"

"ಮಾತೆ!" ಯತಿಯು ಕಾಲಾಚಾಂದನ ಕೈಯನ್ನು ಬಿಟ್ಟು ಕುಳಿತ ಸ್ಥಳದಿಂದೆದ್ದು ನಿಂತನು. ಆಗ ಹರಸುಂದರಿಯು ವಿಸ್ಮಯಗೊಂಡಳು. ಯತಿಯ ಮುಖಚಿಹ್ನವು ಉಗ್ರರೂಪ ಹೊಂದಿದ್ದನ್ನು ನೋಡಿದ ಮೇ-ಲಂತು ಅವಳು ಬಳಿತಾಗಿ ಗಾಬರಿಯಾದಳು.

"ಮಹಾರಾಜರೆ, ಎದ್ದು ನಿಂತಿರೇಕೆ? ನನ್ನ ಕುಮಾರನ ಭವಿಷ್ಯವನ್ನು ಸಂಪೂರ್ಣವಾಗಿ ಹೇಳಿ, ಇವನನ್ನು ಆಶೀರ್ವದಿಸಿರಿ."

"ಅಮ್ಮಾ! ಈ ನಿನ್ನ ಕುಮಾರನಿಗೆ ವಿಷ ಹಾಕಿ ಕೊಲ್ಲಿರಿ!" ಎಂದು ಸಂನ್ಯಾಸಿಯು ತ್ವೇಷದಿಂದ ನುಡಿದು, ಹರಸುಂದರಿಯ ಮನೆಯಿಂದ ಹೊರಬಿದ್ದನು. ಅವನ ವಿಚಿತ್ರ ಭವಿಷ್ಯವನ್ನು ಕೇಳಿ ಹರಸುಂದರಿಯು ಮನಸ್ಸು ಅತ್ಯಂತ ಖಿನ್ನವಾಯಿತು.

ಯತಿಯು ಮನೆಯಿಂದ ಹೊರಬಿದ್ದ ಕೂಡಲೆ ಗದಾಧರನು ಅವನ ಬೆನ್ನ ಹತ್ತಿದನು. ಅವನು ಸ್ವಲ್ಪ ಅಂತರದ ಮೇಲೆ ಯತಿಯನ್ನು ಕಂಡು ವಿನಯದಿಂದ ಕೈ ಜೋಡಿಸಿ:— "ಗುರುಮಹಾರಾಜರೆ, ಭವಿಷ್ಯವನ್ನು ಪೂರ್ಣವಾಗಿ ಹೇಳದೆ ಹೊರಟಿರಲ್ಲ? ಎಲ್ಲ ಸಂಗತಿಗಳನ್ನು ಹೇಳಬೇಕೆಂದು ನನ್ನ ಪ್ರಾರ್ಥನೆಯುಂಟು."

"ಕುಮಾರ!" ಯತಿಯು ಕ್ಲೇಶಯುಕ್ತ ಧ್ವನಿಯಿಂದ:—"ನಾನು ಎಲ್ಲ ಸಂಗತಿಗಳನ್ನು ಹೇಳಬೇಕಾಗಿಲ್ಲ; ದೈವವು ಎಲ್ಲವನ್ನು ಮಾಡಿಯೋ

ತೋರಿಸುವದು,"

ಯತಿಯು ಹೀಗೆ ಗದಾಧರನಿಗೆ ಹೇಳಿ, ಎತ್ತೋ ಹೊರಟು ಹೋದನು. ಗದಾಧರನು ಮೋರೆ ಸಪ್ಪಗೆ ಮಾಡಿಕೊಂಡು ಮನೆಗೆ ಬಂದನು.

ಯತಿಯ ವಿಚಿತ್ರ ಭವಿಷ್ಯದಿಂದ ಹರಸುಂದರಿ-ಕಾಲಾಚಾಂದ-ಗದಾಧರರ ಮನಸ್ಸು ಹೇಗಾಗಿರಬಹುದು?

---

## ನನಗೆ ವ್ರಜಬಾಲೆಯೇ ಬೇಕು!

ಶ್ರೀಪುರವು ವೀರಜಾವನದ ಸಮೀಪದಲ್ಲಿತ್ತು. ಅಲ್ಲಿಯ ರಾಧಾಮೋಹನನು ಗದಾಧರನ ತಂದೆಯ ಸ್ನೇಹಿತನಾಗಿದ್ದನು. ದೊಡ್ಡ ಜಹಾಗೀರದಾರನಾದ ಅವನೊಡನೆ ಶರೀರಸಂಬಂಧ ಮಾಡಬೇಕೆಂದು ರಾಧಾಮೋಹನನ ಬಯಕೆಯಿತ್ತು. ಈ ವಿಷಯದಲ್ಲಿ ಅವನು ಗದಾಧರನ ತಂದೆಯನ್ನು ಕಂಡು ತನ್ನ ಅಭಿಪ್ರಾಯವನ್ನು ತಿಳಿಸಿದ್ದನು. 'ಗದಾಧರನು ನಿನ್ನ ಪುತ್ರಿಯರಲ್ಲಿ ಯಾವಳೊಬ್ಬಳನ್ನಾದರೂ ವರಿಸಲೊಪ್ಪಿದರೆ ಆಗಬಹುದೆ'ಂದು ಗದಾಧರನ ತಂದೆಯು ರಾಧಾಮೋಹನನಿಗೆ ಹೇಳಿದ್ದನು.

ರಾಧಾಮೋಹನನಿಗೆ ಇಬ್ಬರು ಬಾಲಿಕೆಯರಿದ್ದರು. ಇಬ್ಬರೂ ಲಾವಣ್ಯವತಿಯರು. ಹಿರಿಯ ಮಗಳ ಹೆಸರು ಭೂಪಬಾಲೆ; ಚಿಕ್ಕವಳಿಗೆ ವ್ರಜಬಾಲೆಯೆನ್ನುತ್ತಿದ್ದರು. ಇಬ್ಬರು ಕುಮಾರಿಯರೂ ಚೆಲುವೆಯರಾಗಿದ್ದರೂ ಚಿಕ್ಕವಳಾದ ವ್ರಜಬಾಲೆಯು ಮುಂದೆ ಭೂಪಬಾಲೆಯು ಕುರೂಪಿಯಾಗಿ ಕಾಣುತ್ತಿದ್ದಳು. ರಾಧಾಮೋಹನನು ಬಡವನಾಗಿದ್ದರೂ ಈ ಎರಡು ಕನ್ಯಾರತ್ನಗಳ ಸಲುವಾಗಿ ದೊಡ್ಡ ದೊಡ್ಡ ಶ್ರೀಮಂತ ತರುಣರು ಅವನೊಡನೆ ನಮ್ರಭಾವದಿಂದ ನಡೆಯುತ್ತಿದ್ದರು. ಚಿಕ್ಕವಳಾದ ವ್ರಜಬಾಲೆಯನ್ನು ಸಂಪಾದಿಸಬೇಕೆಂದು ಬಹಳ ಜನರು ತಮ್ಮ ಯೋಗ್ಯತೆಯಂತೆ ಸಾಹಸ ಮಾಡಲಾರಂಭಿಸಿದ್ದರು.

ಹೆಚ್ಚು ವಯಸ್ಸಿನವಳಾದ ಭೂಪಬಾಲೆಯ ವಿವಾಹ ಮಾಡಿದ ಹೊರತು ಚಿಕ್ಕವಳಾದ ವ್ರಜಬಾಲೆಯ ವಿವಾಹ ಮಾಡುವಂತಿದ್ದಿಲ್ಲ ವ್ರಜಬಾಲೆಗೆ ಬೇಕಾದಂತಹ ಶ್ರೀಮಂತ ವರಗಳು ಲಭಿಸುವವೆಂದು

ರಾಧಾಮೋಹನನ ಮನವರಿಕೆಯಾದ್ದರಿಂದ, ಭೂಪಬಾಲೆಯನ್ನು ಗದಾಧರನಿಗೆ ಕೊಡಬೇಕೆಂದು ಅವನ ಆಲೋಚನೆಯಿತ್ತು. ನಿರ್ಜರಾಂಗನೆಯಂತಿದ್ದ ವ್ರಜಬಾಲೆಯನ್ನು ಬಿಟ್ಟು, ಭೂಪಬಾಲೆಯನ್ನು ವರಿಸಲಿಕ್ಕೆ ಗದಾಧರನು ಒಪ್ಪಲಿಕ್ಕಿಲ್ಲೆಂಬದು ರಾಧಾಮೋಹನನಿಗೆ ಗೊತ್ತಿದ್ದರೂ, ಈ ವಿಷಯದಲ್ಲಿ ಕೈಲಾದಷ್ಟು ಯತ್ನಮಾಡಬೇಕೆಂದು ಯೋಚಿಸಿಕೊಂಡಿದ್ದನು.

ಗದಾಧರನು ಶ್ರೀಪುರದ ಉಮೇಶಚಂದ್ರನ ಮನೆಗೆ ಮೇಲಿಂದ ಮೇಲೆ ಬರುತ್ತಿದ್ದನು. ಉಮೇಶಚಂದ್ರನ ಪುತ್ರಿಯೂ ವ್ರಜಬಾಲೆಯೂ ಜೀವದ ಗೆಳತಿಯರು. ಉಮೇಶಚಂದ್ರನ ಪುತ್ರಿಯ ಹೆಸರು ಉಷಾಸುಂದರಿ. ಗದಾಧರನು ಉಮೇಶಚಂದ್ರನ ಮನೆಗೆ ಹೋದಾಗ ವ್ರಜಬಾಲೆಯು ಉಷಾಸುಂದರಿಯೊಡನೆ ಮಾತನಾಡುತ್ತ ಕುಳಿತಿದ್ದಳು. ಗದಾಧರನು ಸ್ವರ್ಗೀಯ ಸುಂದರಿಯಾದ ವ್ರಜಬಾಲೆಯನ್ನು ನೋಡಿದೊಡನೆಯೆ ದಂಗು ಬಡೆದನು! 'ಇಂತಹ ರಮಣೀರತ್ನವನ್ನು ವರಿಸುವಂತಹ ಭಾಗ್ಯಶಾಲಿಯು ಯಾವನಿರಬಹುದೆ'ಂದು ಅವನು ಉದ್ಗಾರ ತೆಗೆದನು.

ಗದಾಧರನೇನು ಸಾಧಾರಣ ಪ್ರತಿಯ ತರುಣನಿದ್ದಿಲ್ಲ. ವ್ರಜಬಾಲೆಯಂತಹ ಕುಮಾರಿಯರ ಮನಸ್ಸನ್ನು ಸಹಜವಾಗಿ ಆಕರ್ಷಿಸುವಂತಹ ತೇಜಸ್ವಿಯಾಗಿದ್ದನು. ಗದಾಧರನನ್ನು ನೋಡಿದ ಕೂಡಲೆ ವ್ರಜಬಾಲೆಯ ಮನಸ್ಸು ಒಂದು ವಿಧವಾಗಿತ್ತು. ಅವನ ಉದ್ಗಾರವನ್ನು ಕೇಳಿದ ಮೇಲಂತೂ ಅದು ಮತ್ತಿಷ್ಟು ವಿಕಾರ ವಶವಾಯಿತು. ಆಗ ಅವಳು ತನ್ನ ನೇತ್ರಬಾಣಗಳನ್ನು ಗದಾಧರನ ಮೇಲೆ ಎಸೆಯುತ್ತ:—"ಇಂತಹ ಪುರುಷಸಿಂಹನಿಗೆ ಮಾಲೆಯನ್ನು ಹಿಡಿದ ಕುಮಾರಿಯೇ ಭಾಗ್ಯವತಿಯು!"

ಗದಾಧರನು ವ್ರಜಬಾಲೆಯ ಮುಖದಿಂದ ಹೊರಟ ಉದ್ಗಾರವನ್ನು ಕೇಳಿ ಸಂಭ್ರಮಗೊಂಡನು; ನೋಜಿಗಗೊಂಡನು; ಕಕ್ಕಾವಿಕ್ಕಿಯಾಗಿ ಅವಳ ಮುಖವನ್ನು ನೋಡಲಾರಂಭಿಸಿದನು. ಅಪರಿಚಿತಳಾದ ಈ ಕನ್ಯೆಯು ಸ್ತ್ರೀ ಜನೋಚಿತವಾದ ಲಜ್ಜೆಯನ್ನು ಬಿಸುಟಿ ಹೀಗೆ ಮಾತಾಡಿದ್ದನ್ನು ನೋಡಿ, ಈ ಕುಮಾರಿಯು ಒಳ್ಳೇ ಧೈರ್ಯದವಳೂ ಕಟ್ಟುನಿಟ್ಟಿನ ಸ್ವಭಾವದವಳೂ ಇರುವಳೆಂದು ಗದಾಧರನು ತಿಳಿದನು. ವ್ರಜಬಾಲೆಯು

ಮಾತು ಕೇಳಿಯಂತು ಉಷಾಸುಂದರಿಗೆ ಬಹಳೇ ಆಶ್ಚರ್ಯವಾಯಿತು. ಆಗ ಅವಳು ಖೊಳ್ಳನೆ ನಕ್ಕಳು. ಅವಳ ನಗುವನ್ನು ನೋಡಿ ವ್ರಜ ಬಾಲೆಗೆ ಸ್ವಲ್ಪ ಸಿಟ್ಟು ಬಂತು.

"ಉಷಾಸುಂದರಿ! ನೀನು ಅವರಾಡಿದ ಮಾತಿಗೆ ನಗಲಿಲ್ಲ. ನನ್ನ ಮಾತಿಗೇ ಬಹಳ ನಗೆ ಬಂದಿತೇನು? ಪುರುಷರು ಬೇಕಾದಂತಹ ಮಾತು ಗಳನ್ನಾಡಿದರೂ ಅವು ಹಾಸ್ಯಾಸ್ಪದವಲ್ಲವೆಂದು ನಿನ್ನ ತಿಳುವಳಿಕೆಯಿದ್ದಂತೆ ಕಾಣುತ್ತದೆ."

"ನಾನು ವಸ್ತುಸ್ಥಿತಿಯನ್ನು ಹೇಳಿದೆನು. ನನ್ನ ಬಾಯಿಂದ ಹೊರಟ ಉದ್ಗಾರವಾದರೂ ನನಗೆ ತಿಳಿಯದೆ ಹೊರಬಿತ್ತು." ಎಂದು ಗದಾಧರನು ನಗುತ್ತ ನುಡಿದನು.

"ನೀವು ಅಷ್ಟು ದೇಹಭಾನವಿಲ್ಲದವರಾಗಿದ್ದರಿ!" ಎಂದು ಗದಾ ಧರನ ಮಾತಿಗೆ ವ್ರಜಬಾಲೆಯು ಮಾರ್ಮಿಕವಾದ ಮಾತಿನಿಂದ ಉತ್ತರ ವಿತ್ತು, ನಸುನಗುತ್ತ:—"ನೀವು ಹೇಗೆ ವಸ್ತುಸ್ಥಿತಿಯನ್ನು ತಿಳಿಸಿದಿರೋ, ಅದರಂತೆ ನಾನಾದರೂ ತಿಳಿಸಿದೆನು. ನನ್ನ ಮುಖದಿಂದ ಅನುಚಿತ ಭಾಷ ಣವು ಹೊರಟಿಲ್ಲ. ನನ್ನಂತಹ ಗಟ್ಟಿಮುಟ್ಟಾದ ಮನೋಭಾವದವಳನ್ನು ಸಹಜ ವಿಕಾರವಶ ಮಾಡುವಂತಹ ನೀವು, ಪೊಳ್ಳು ಮನಸ್ಸಿನ ತರುಣಿಯು ರನ್ನು ಹಾ ಹಾ ಅನ್ನುವಷ್ಟರಲ್ಲಿ ಕೈವಶಪಡಿಸಿಕೊಳ್ಳುವಿರೆಂಬದರಲ್ಲಿ ಸಂದೇಹವಿಲ್ಲ. ನಿಮ್ಮಲ್ಲಿರುವ ತೇಜಸ್ವಿತೆಯೇ ಅಂತಹ ಅಭೂತಪೂರ್ವ ವಿರುವದು. ಅಂತೆಯೇ ನಿಮ್ಮ ಕೊರಳಿಗೆ ಮಾಲೆ ಹಾಕುವ ಕನ್ನಿಕೆಯು ಮಹಾ ಭಾಗ್ಯಶಾಲಿನಿಯೆಂದು ನಾನು ನುಡಿದೆನು."

ವ್ರಜಬಾಲೆಯು ಎಷ್ಟು ಸುಂದರಿಯೋ ಅಷ್ಟೇ ಲಜ್ಜಾಸಂಕೋಚ ವಿರಹಿತಳೂ, ಗಟ್ಟಿಮುಟ್ಟಾದ ಮನಸ್ಸಿನವಳೂ ಇರುವಳೆಂದು ಗದಾಧರನು ತಿಳಿದನು. ವ್ರಜಳ ಉಳಿದ ಸ್ವಭಾವಗಳ ವಿಷಯಕ್ಕೆ ಆಲೋಚಿಸುವಷ್ಟು ಮನಸ್ಸಿನ ಸ್ಥೈರ್ಯವು ಅವನಲ್ಲಿದ್ದಿಲ್ಲ; ಅವನು ಆ ಮನೋಹರೆಯ ದಿವ್ಯ ಲಾವಣ್ಯವನ್ನು ಕಣ್ಣು ತುಂಬ ನೋಡುವದರಲ್ಲಿ ಮಗ್ನನಾಗಿದ್ದನು. ವ್ರಜಬಾಲೆಯೂ ಒಳಿಯಲ್ಲಿದ್ದ ಉಷಾಸುಂದರಿಯೂ ತನ್ನ ಅನುಚಿತ ವರ್ತ

ನದ ಬಗ್ಗೆ ಹೇರಿಡಬಹುದೆಂಬ ವಿಚಾರವು ಸಹ ಅವನಲ್ಲಿ ಹುಟ್ಟಲಿಲ್ಲ.

"ಅಣ್ಣಾ," ಉಷಾಸುಂದರಿಯು ಗದಾಧರನನ್ನು ಕುರಿತು ನಗುತ್ತ ನಗುತ್ತ:—"ಈ ವ್ರಜಳ ಸ್ಪಷ್ಟೋಕ್ತಿಗಾಗಿ ನಿನಗೆ ವಿಸ್ಮಯವಾಗಿರಬಹುದಲ್ಲವೆ? ಇವಳ ಸ್ವಭಾವವೇ ಅಂತಹವಿರುವದು. ಇವರು ಅರಿಯದವರು; ಇವರು ಪರಕೀಯರು; ಇಂತಹ ಮಾತುಗಳನ್ನಾಡಬೇಕು; ಇಂತಹ ಮಾತುಗಳನ್ನಾಡಬಾರದು; ಮೊದಲಾದ ವಿಷಯಗಳು ಇವಳಿಗೆ ಗೊತ್ತೇ ಇಲ್ಲ. ಇವಳ ಸ್ವಭಾವವೇ ಇಂತಹ ನಿಷ್ಠುರವಿರುವದು. ಸೌಂದರ್ಯ ವೊಂದಿರದಿದ್ದರೆ ಇವಳನ್ನು ಯಾರೂ ಮಾತಾಡಿಸುತ್ತಿದ್ದಿಲ್ಲವೆಂದು ನನ್ನ ಅಭಿಪ್ರಾಯವು."

ಉಷಾಸುಂದರಿಯ ಮಾತುಗಳಿಂದ ವ್ರಜಬಾಲೆಯು ಸಿಟ್ಟಿಗೆದ್ದಳು. ಗದಾಧರನೇ ಮುಂಚಿತವಾಗಿ ಅಸಭ್ಯತನದ ಮಾತುಗಳನ್ನಾಡಿದ್ದರೂ, ಅವನ ಮಾತುಗಳನ್ನುಪೇಕ್ಷಿಸಿ, ತನ್ನ ಮಾತಿಗೆ ಮಹತ್ವ ಕೊಟ್ಟು ಮಾತನಾಡುವ ಉಷಾಸುಂದರಿಯ ವಿಷಮಭಾವವನ್ನು ನೋಡಿ ವ್ರಜಬಾಲೆಯು ತಿರಸ್ಕಾರಗೊಂಡಳು. ಅವಳು ತಿರಸ್ಕಾರ-ಸಂತಾಪಗಳ ಭರದಲ್ಲಿ ಉಷಾಸುಂದರಿಯನ್ನು ಕುರಿತು:—"ಉಷಾಸುಂದರಿ, ನೀನು ತೀರ ಅನುಚಿತ ಮಾತುಗಳನ್ನಾಡಿದೆ. ಸ್ತ್ರೀಯರೆಂದರೆ ನೀನು ಏನೆಂದು ತಿಳಿದಿರುವೆ? ನೀನು ಸಜಾತಿಯವಳಿದ್ದು ಹೀಗೆ ಮಾತನಾಡಬೇಕೆ? ನಾವು ಯಾವ ವಿಧದ ಸ್ವಾತಂತ್ರ್ಯವಿಲ್ಲದವರೆಂದು ನಿನ್ನ ಭಾವನೆಯಿದ್ದಂತೆ ಕಾಣುವದು. ಪುರುಷರು ಬೇಕಾದ ಹಾಗೆ ವರ್ತಿಸಲಿಕ್ಕೆ ಸ್ವತಂತ್ರರಿರುವರೆಂದೂ, ಸ್ತ್ರೀಯರು ಕೇವಲ ಸೂತ್ರದ ಗೊಂಬೆಗಳಂತಿರಬೇಕೆಂದೂ ನಿನ್ನ ಅಭಿಪ್ರಾಯವಿದ್ದಂತೆ ತೋರುವದು. ನಾನು ನಿನ್ನ ಈ ಅಭಿಪ್ರಾಯಕ್ಕೆ ವಿರುದ್ಧವಾಗಿ ನಡೆದದ್ದರಿಂದ ನೀನು ನನ್ನ ನಿರ್ಭರ್ತ್ಸನೆಯನ್ನು ಮಾಡಿದೆಯಲ್ಲವೆ? ನನ್ನ ಮಾತುಗಳಲ್ಲಿ ಯಾವ ದೋಷ ಕಂಡೆಯೆಂಬದನ್ನು ಹೇಳಬಾರದೆ? ಪುರುಷರು ತಮ್ಮ ಮನಸ್ಸಿನ ವಿಕಾರಗಳನ್ನು ನಿಯಂತ್ರಣಗೊಳಿಸಲಿಕ್ಕೆ ಹೇಗೆ ಅಸಮರ್ಥರಾಗುವರೋ, ಅದರಂತೆ ಸ್ತ್ರೀ ಜನೋಚಿತವಾದ ವಿಕಾರಗಳನ್ನು ತಡೆಯುವದು ಸ್ತ್ರೀಯರಾದ ನಮಗೆ ಹೇಗೆ ಸಾಧ್ಯವಾಗುವದು?"

"ವ್ರಜಬಾಲೆ, ತಿಳಿದೆನು; ನಿನ್ನ ಮನಸ್ಸಿನ ಒಲವನ್ನು ತಿಳಿದೆನು. ನೀನು ನನ್ನ ಅಣ್ಣನ ಮೇಲೆ ದಾಳಿ ಮಾಡಿ ವಿಜಯಶಾಲಿಯಾಗಬೇಕೆಂದು ಯತ್ನಿಸಿರುವೆ!" ಎಂದು ಗಹಿಗಹಿಸಿ ನಗುತ್ತ ಉಷಾಸುಂದರಿಯು ನುಡಿದು, ಗದಾಧರನನ್ನು ಕುರಿತು: —"ಅಣ್ಣಾ, ನೀನು ಶೂರನಿರುವೆ; ಧೀರನಿರುವೆ; ಸಾಹಸಿಯಿರುವೆ; ಪ್ರಭಾವಶಾಲಿಯಿರುವೆ. ನೀನು ಈ ಬಡಬ್ರಾಹ್ಮಣನ ಪುತ್ರಿಗೆ ಸೋಲಲಾರಿಯೆಂದು ನಾನು ತಿಳಿದುಕೊಂಡಿರುವೆನು. ದೊಡ್ಡ ಜಹಾಗೀರದಾರನಾದ ನಿನ್ನಂತಹ ಶ್ರೀಮಂತ ತರುಣನಿಗೆ ಈ ವ್ರಜಳಿಗಿಂತ ಶ್ರೇಷ್ಠರಾದ ಕನ್ನಿಕೆಯರು ಅನಾಯಾಸವಾಗಿ ವಶರಾಗುವರು. ಈ ಚಂಡಿ ಹುಡುಗೆಯ ಮುಖವನ್ನು ಸಹ ನೀನು ನೋಡಬೇಡ."

"ತಂಗೀ, ಉಷಾಸುಂದರಿ, ಇದೇನು ವಿಷಯವು ಹೊರಟಿತು? ನಾನು ಒಂದು ಉದ್ದೇಶದಿಂದ ಇಲ್ಲಿಗೆ ಬಂದಿರುವೆನು. ಈಗ ಇಲ್ಲಿ ಬೇರೆ ಪ್ರಸ್ತಾಪವೇ ನಡೆಯಿತಲ್ಲ?"

"ನೀನು ಯಾವ ಉದ್ದೇಶದಿಂದ ಇಲ್ಲಿಗೆ ಬಂದಿರುವೆ?"

"ರಾಧಾಮೋಹನರು ಬಂದು ಹೋಗಬೇಕೆಂದು ಪತ್ರ ಬರೆದದ್ದರಿಂದ ವೀರಜಾವನದಿಂದ ಇಲ್ಲಿಗೆ ಬಂದೆನು. ನಾನು ಈಗ ಅವರ ಭೆಟ್ಟಿಗೆ ಹೋಗಬೇಕಾಗಿತ್ತು. ಉಮೇಶಚಂದ್ರನನ್ನು ಕಂಡು ಹೋಗಬೇಕೆಂದು ಇಲ್ಲಿಗೆ ಬಂದೆನು."

"ನೀನು ಬಂದ ಉದ್ದೇಶವೂ ನಡೆದ ಪ್ರಸ್ತಾಪವೂ ಒಂದೇ ಇದ್ದರೂ ಇರಬಹುದಾಗಿದೆ. ಅಣ್ಣಾ, ಇವಳೇ ನೋಡು ಆ ರಾಧಾಮೋಹನರ ಪುತ್ರಿಯು! ಇವಳಿಗೆ ವ್ರಜಬಾಲೆಯೆನ್ನುವರು. ಭೂಪಬಾಲೆಯೆಂಬ ಇನ್ನೊಬ್ಬ ಮಗಳು ಅವರಿಗಿರುವಳು. ಅವಳು ಈ ವ್ರಜಬಾಲೆಗಿಂತ ಹಿರಿಯಳು; ರೂಪದಲ್ಲಿ ಕಿರಿಯಳು."

ಗದಾಧರನ ಮನಸ್ಸು ಒಂದು ಅಜ್ಞಾತವಿಕಾರದಿಂದ ಅಲ್ಲೋಲ-ಕಲ್ಲೋಲವಾಗತೊಡಗಿತು. ವ್ರಜಬಾಲೆಯ ಮನಸ್ಸಾದರೂ ವಿಚಿತ್ರವಾದ ಸ್ಥಿತಿಯನ್ನು ಹೊಂದಿತ್ತು. ಅವರೀರ್ವರೂ ಒಬ್ಬರನ್ನೊಬ್ಬರು ಕಣ್ತುಂಬ ನೋಡಲಾರಂಭಿಸಿದ್ದರು. ಈ ಹುಚ್ಚಾಟವನ್ನು ನೋಡಿ

ಉಷಾಸುಂದರಿಯು ಬಿದ್ದು ಬಿದ್ದು ನಗತೊಡಗಿದಳು. ಆಗ ಮಾತ್ರ ವ್ರಜ ಬಾಲೆಯು ಮುಖಬಾಗಿಸಿದಳು. ಗದಾಧರನಾದರೂ ತನ್ನ ಮನಸ್ಸಿನ ಮೇಲೆ ಸದಸದ್ವಿವೇಕವನ್ನು ಪ್ರಸ್ಥಾಪಿಸಿಕೊಂಡನು. ಆಗ ಅವನು ಉಷಾಸುಂದರಿಯನ್ನು ಕುರಿತು:—"ಉಷೆ, ಉಮೇಶಚಂದ್ರರು ಮನೆ ಯಲ್ಲಿಲ್ಲವೇನು?"

"ಇಲ್ಲ; ಅವರು ಇದೀಗ ಹೊರಗೆ ಹೋದರು."

"ನಾನು ರಾಧಾಮೋಹನರಿಗೆ ಭೆಟ್ಟಿಯಾಗಿ ಬರುವೆನು."

"ಮನೆಯನ್ನು ತೋರಿಸಲಿಕ್ಕೆ ಬರಲೇನು?" ವ್ರಜಬಾಲೆಯು ತಡ ವರಿಸುತ್ತ ನುಡಿದಳು. ಆಗ ಉಷಾಸುಂದರಿಯು ಅವಳನ್ನು ಕುರಿತು:— "ಹೋಗವ್ವಾ! ನೀನು ತೋರಿಸದಿದ್ದರೆ ಈ ಶ್ರೀಪುರ ಪಟ್ಟಣದಲ್ಲಿ ಇವನಿಗೆ ನಿನ್ನ ಮನೆಯೇ ಸಿಗಲಿಕ್ಕಿಲ್ಲ." ಎಂದು ಮಾರ್ಮಿಕ ವಾಣಿಯಿಂದ ನುಡಿದು:—"ವ್ರಜ, ನೀನು ಒಮ್ಮೆಲೆ ಹೀಗೆ ಭಾವನಾವಶಳಾಗುವದು ಒಳಿತಲ್ಲ. ಸಹಜ ವಿಕಾರವಶವಾಗುವ ಈ ಗುಣದಿಂದ ನಿನ್ನ ನಿಜವಾದ ಯೋಗ್ಯತೆಗೆ ಕುಂದು ಬರುವದು."

ಉಷಾಸುಂದರಿಯು ಹೀಗೆ ನುಡಿದ ಕೂಡಲೆ ವ್ರಜಬಾಲೆಯು ಸುಮ್ಮನೆ ಕುಳಿತಳು. ಉಷಾಸುಂದರಿಯು ವ್ರಜಬಾಲೆಗಿಂತ ಒಂದೆರಡು ವರ್ಷ ಹಿರಿಯಳಾಗಿದ್ದಳು. ಅವಳು ಒಳ್ಳೇ ಜಾಣಾಕ್ಷಳೂ ಸದಸದ್ವಿ ವೇಕ ಬುದ್ಧಿಯುಳ್ಳವಳೂ ಆಗಿದ್ದಳು. ಅವಳು ಹೇಳಿಕೊಳ್ಳುವಂಥ ರೂಪ ವತಿಯಲ್ಲದಿದ್ದರೂ ತೀರ ಕುರೂಪಿಯಾಗಿದ್ದಿಲ್ಲ. ಅವಳಲ್ಲಿದ್ದ ಸದ್ಗುಣ ಗಳು ಮಾತ್ರ ಅವರ್ಣನೀಯವಿದ್ದವು; ಆದರೆ ಅವಳ ಗುಣಗಳ ಸಾರ್ಥ ಕತೆಯಾಗುವಂತಿದ್ದಿಲ್ಲ. ಉಷಾಸುಂದರಿಯು ಭಾಗ್ಯಹೀನಳು. ಇಷ್ಟು ಚಿಕ್ಕ ವಯಸ್ಸಿನಲ್ಲೇ ಅವಳು ಪತಿಯನ್ನು ಕಳೆದುಕೊಂಡಿದ್ದಳು. ಅವಳ ಲ್ಲಿದ್ದ ಅನುಪಮವಾದ ಸದ್ಗುಣ ಪರಿಚಯವುಳ್ಳ ಜನರು 'ವಿಧಾತನು ಕ್ರೂರ ನೆ'ಂದು ಉದ್ಗಾರ ತೆಗೆಯುತ್ತಿದ್ದರು. ಉಷಾಸುಂದರಿಯು ಈಗ ಹದಿ ನೆಂಟು ವರ್ಷದವಳಿರಬಹುದು. ಅವಳು ಪರಿಕೆಯ ತಾರುಣ್ಯದವಳಿದ್ದರೂ ಆ ತಾರುಣ್ಯದ ಸಾರ್ಥಕತೆಯೇನು? ಇಷ್ಟು ಚಿಕ್ಕ ವಯಸ್ಸಿನಲ್ಲಿ ತನಗೊದಗಿ

ಗಿದ ದುರವಸ್ಥೆಯಿಂದ ಅವಳು ಐಹಿಕ ವಿಷಯದಲ್ಲಿ ತೀರ ಅನಾಸಕ್ತಳಾಗಿದ್ದಳು. ಅವಳ ಮನಸ್ಸು ಈಗ ಹೆಚ್ಚಾಗಿ ವಿರಕ್ತತೆಯನ್ನು ಹೊಂದಿತ್ತು. ಸಾಧುಸಂತರ ಸೇವೆಯಲ್ಲಿಯೂ ದೇವತಾರಾಧನೆಯಲ್ಲಿಯೂ ತನ್ನ ಆಯುಷ್ಯವನ್ನು ಕಳೆಯಬೇಕೆಂದು ಅವಳು ದೃಢಸಂಕಲ್ಪ ಮಾಡಿಕೊಂಡಿದ್ದಳು. ಅವಳು ಹೀಗೆ ವಿರಕ್ತಿಯನ್ನು ಹೊಂದಿದ್ದರೂ ವ್ರಜಬಾಲೆಯಂತಹ ಗೆಳತಿಯರನ್ನೂ ಗದಾಧರನಂತಹ ಬಂಧು ಜನರನ್ನೂ ಬಹಳವಾಗಿ ಪ್ರೀತಿಸುತ್ತಿದ್ದಳು. ಗದಾಧರನು ಅವಳ ದೂರಿನ ಆಪ್ತನಾಗಿದ್ದರೂ ಅವನನ್ನು ಉಷಾಸುಂದರಿಯು ಒಡಹುಟ್ಟಿದವನಂತೆ ಭಾವಿಸಿದ್ದಳು.

ಉಷಾಸುಂದರಿಯು ಸಿಟ್ಟು ಮಾಡಿದ್ದರಿಂದ ವ್ರಜಬಾಲೆಯು ಮನಸ್ಸು ಬಿಗಿ ಹಿಡಿದು ಸುಮ್ಮನೆ ಕುಳಿತಳು. ಗದಾಧರನೊಡನೆ ಎರಡು ಏಕಾಂತ ಭಾಷಣಗಳನ್ನಾಡಬೇಕೆಂಬ ಉದ್ದೇಶದಿಂದಲೇ, ಅವನನ್ನು ತನ್ನ ಮನೆಗೆ ಕರದೊಯ್ಯಬೇಕೆಂದು ವ್ರಜಳು ಮನಸ್ಸು ಮಾಡಿದ್ದಳು. ಉಷಾಸುಂದರಿಯ ಮಾತಿನಿಂದ ಅವಳು ನಿರುಪಾಯಳಾದಳು. ಅನಂತರದಲ್ಲಿ ಗದಾಧರನು ಅಲ್ಲಿಂದ ಹೊರಡಲನುವಾದನು. ಆಗ ಉಷಾಸುಂದರಿಯು ಅವನನ್ನು ಕುರಿತು—"ಅಣ್ಣಾ, ನೀನು ಹೊರಗಿಂದ ಹೊರಗೇ ವೀರಜಾವನಕ್ಕೆ ಹೋಗದೆ, ಮನೆಗೆ ಬಾ." ಎಂದು ಹೇಳಿದಳು.

"ನಾನು ಬರುವವರೆಗೆ ನೀವು ಇಲ್ಲಿಯೇ ಇರುವಿರೇನು?"

"ನಾನಂತೂ ಇಲ್ಲಿಯೇ ಇರುವೆನು. ಈ ಚಂಚಲ ವೃತ್ತಿಯ ಪಕ್ಷಿಯು ನೀನು ಬರುವ ವರೆಗೆ ಇಲ್ಲಿರುವದೋ, ಹಾರಿ ಹೋಗುವದೋ ಎಂಬದನ್ನು ನಾನು ಏನು ಹೇಳಲಿ?" ಉಷಾಸುಂದರಿಯು ನಗುತ್ತ ಗದಾಧರನಿಗೆ ಹೇಳಿದಳು.

"ಇದು ಹಾರಿ ಹೋಗುವ ಪಕ್ಷಿಯಿರಬಹುದೆಂದು ನೀವು ತಿಳಿಯುತ್ತೀರೇನು?" ಎಂದು ನೇತ್ರಕಟಾಕ್ಷಗಳನ್ನು ಬೀರುತ್ತ ವ್ರಜಬಾಲೆಯು ಹಸನ್ಮುಖಿಯಾಗಿ ನುಡಿಯಲು, ಗದಾಧರನು:—"ಉಷಾಸುಂದರಿಯ ಮಾತಿಗೆ ನಾನು ಅಷ್ಟೊಂದು ಮಹತ್ವ ಕೊಡುವದಿಲ್ಲ. ಬೆದರಿ ಹಾರಿ ಹೋಗುವ ಪಕ್ಷಿಗಳ ಸ್ಥಿತಿ-ರೀತಿಗಳೇ ಬೇರೆಯಾಗಿರುವವು."

ಗದಾಧರನು ರಾಧಾಮೋಹನನ ಮನೆಗೆ ಬಂದನು. ಆಗ ರಾಧಾಮೋಹನನು ಉಮೇಶಚಂದ್ರನೊಡನೆ ಮಾತನಾಡುತ್ತ ಕುಳಿತಿದ್ದನು. ತನ್ನ ಪತ್ರದ ಮೇರೆಗೆ ಹೊರಟು ಬಂದ ಗದಾಧರನ ನಿಗರ್ವ ಸ್ವಭಾವವನ್ನು ಅವನು ಮನಸ್ವೀಯಾಗಿ ಹೊಗಳಿದನು. ಕೆಲವು ವೇಳೆಯ ವರೆಗೆ ಕ್ಷೇಮ ಸಮಾಚಾರದ ಮಾತುಗಳು ಜರುಗಿದ ಮೇಲೆ ಉಮೇಶಚಂದ್ರನು ಮುಖ್ಯ ವಿಷಯದ ಎಳೆ ತೆಗೆದನು. ಅವನು ಗದಾಧರನನ್ನು ಕುರಿತು—"ಗದಾಧರ, ನಿನ್ನ ತಂದೆಯವರು ಈ ರಾಧಾಮೋಹನರ ಪರಮ ಸ್ನೇಹಿತರು. ರಾಧಾಮೋಹನರು ಬಡವರಾಗಿದ್ದರೂ ಶ್ರೀಮಂತರಾದ ನಿನ್ನ ತಂದೆಯವರು ಇವರೊಡನೆ ನಿರ್ವ್ಯಾಜ ಪ್ರೇಮದಿಂದ ನಡೆಯುತ್ತಲಿರುವರು. ಸ್ನೇಹಕ್ಕೆ ಬಡತನ-ಶ್ರೀಮಂತಿಕೆಗಳು ಅಡ್ಡ ಬರುವದಿಲ್ಲ."

"ಉಮೇಶಚಂದ್ರರೆ, ಗದಾಧರನ ತಂದೆಯವರು ನಿಸ್ಪೃಹವೃತ್ತಿಯವರಿರುವದರಿಂದ ಸ್ನೇಹವು ನೆಲಸಿರುವದು. ಜಗತ್ತಿನಲ್ಲಿ ಎಲ್ಲ ಶ್ರೀಮಂತರೂ ಹೀಗೆಯೆ ಇರುವದಿಲ್ಲ. ತಮಗಿಂತ ಕಡಿಮೆ ತರಗತಿಯ ಜನರೊಡನೆ ಸ್ನೇಹ ಬೆಳೆಯಿಸುವದೆಂದರೆ, ತಮ್ಮ ದೊಡ್ಡಸ್ತಿಕೆಗೆ ಕುಂದು ಬರುವದೆಂದು ಅವರು ಭಾವಿಸುತ್ತಾರೆ." ಎಂದು ರಾಧಾಮೋಹನನು ವಸ್ತುಸ್ಥಿತಿಯನ್ನು ನಿವೇದಿಸಿದನು.

"ನಿಮ್ಮ ಮಾತು ನಿಜವು. ಬಹು ಜನ ಧನಿಕರು ಇದೇ ಸ್ವಭಾವದವರಿರುತ್ತಾರೆ." ಎಂದು ಉಮೇಶಚಂದ್ರನು ನುಡಿದು, ಗದಾಧರನನ್ನು ಕುರಿತು:—"ಗದಾಧರ, ರಾಧಾಮೋಹನರು ನಿಮ್ಮ ಮನೆತನದ ಸ್ನೇಹ ಸಂಬಂಧವನ್ನು ಸ್ಥಿರವಾಗಿ ಕಾಯ್ದುಕೊಳ್ಳಬೇಕೆಂದು ಇಚ್ಛೆಯುಳ್ಳವರಾಗಿರುವರು."

"ಅದಕ್ಕಾಗಿ ನನಗೇನು ಮಾಡಬೇಕೆನ್ನುವಿರಿ?" ಎಂದು ಗದಾಧರನು ಉಮೇಶಚಂದ್ರನನ್ನು ಕೇಳಿದನು.

"ನಿಮ್ಮ ಮನೆತನದ ಸ್ನೇಹ ಸಂಬಂಧವು ಸ್ಥಿರವಾಗಬೇಕಾದರೆ ಶರೀರ ಸಂಬಂಧವನ್ನು ಮಾಡಬೇಕಾಗುವದೆಂದು ಅವರಿಗೆ ತಿಳಿದದ್ದರಿಂದ ಅವರು ಈ ವಿಷಯವಾಗಿ ನಿನ್ನ ತಂದೆಯವರ ಅಭಿಪ್ರಾಯ ಕೇಳಿದರು.

ನಿನ್ನ ತಂದೆಯವರು ನಿನ್ನ ಮೇಲೆಯೇ ಭಾರ ಹಾಕಿರುತ್ತಾರೆ.'' ಎಂದು ಉಮೇಶಚಂದ್ರನು ನುಡಿದು ರಾಧಾಮೋಹನನನ್ನು ಕುರಿತು—''ರಾಧಾಮೋಹನರೆ, ಇವನ ತಂದೆಯವರ ಪತ್ರವನ್ನು ತೋರಿಸಿರಿ,'' ಎಂದು ಹೇಳಿದನು. ಕೂಡಲೆ ರಾಧಾಮೋಹನನಾದರೂ ಆ ಪತ್ರವನ್ನು ಗದಾಧರನ ಕಡೆಗೆ ಕೊಟ್ಟನು. ಪತ್ರದೊಳಗಿನ ಸಂಗತಿಗಳನ್ನು ಓದಿದೊಡನೆಯೆ ಗದಾಧರನು ಹಿರಿಹಿರಿ ಹಿಗ್ಗಿದನು. 'ವೈದ್ಯ ಹೇಳಿದ್ದೂ ಹಾಲೋಗರ; ರೋಗಿ ಬಯಸಿದ್ದೂ ಹಾಲೋಗರ' ಎಂಬಂತೆ ಅವನ ಸ್ಥಿತಿಯಾಯಿತು. ವ್ರಜಬಾಲೆಯು ರಾಧಾಮೋಹನನ ಪುತ್ರಿಯೆಂಬದು ಉಷಾಸುಂದರಿಯ ಮುಖಾಂತರವಾಗಿ ಗದಾಧರನಿಗೆ ತಿಳಿದಿತ್ತು. ಅದೇ ಕನ್ನಿಕೆಯನ್ನು ಕೊಡುವದಕ್ಕಾಗಿ ರಾಧಾಮೋಹನನು ಅನುಸಂಧಾನ ನಡೆಯಿಸಿದ್ದರಿಂದ ಅವನಿಗೆ ಆನಂದವು ಆಗಬಾರದೇಕೆ? ಪತ್ರವೋದುವದಾದ ಮೇಲೆ ಅವನು ಉಮೇಶಚಂದ್ರನ ಮುಖದ ಕಡೆಗೆ ನೋಡಲಾರಂಭಿಸಿದನು. ಹೃದ್ಗತವು ಲಜ್ಜಾವಿಶೇಷಕ್ಕಾಗಿ ಅವನಿಂದ ಹೊರಬೀಳಲಾರದಾಗಿತ್ತು. ಉಮೇಶಚಂದ್ರನಿಗೆ ಅವನ ಅಭಿಪ್ರಾಯವು ಮುಖಲಕ್ಷಣಗಳಿಂದಲೇ ತಿಳಿಯಿತು. ಆಗ ಅವನು ಗದಾಧರನನ್ನು ಕುರಿತು: ''ರಾಧಾಮೋಹನರ ಕುಮಾರಿಯರೆಂದರೆ, ಪ್ರತ್ಯಕ್ಷ ನಿಜರಾಂಗನೆಯರೇ! ಅವರನ್ನು ವರಿಸುವ ಭಾಗ್ಯವು ನಿಮ್ಮಂತಹ ದೊಡ್ಡ ಮನೆತನದ ತರುಣರಿಗೇ ಲಭಿಸುವದಲ್ಲದೆ, ಯಃಕಶ್ಚಿತ ಜನರಿಗೆ ಈ ಮಾತು ಎಂದೂ ಸಾಧ್ಯವಿಲ್ಲ.''

''ನೀವು ನನ್ನ ತಂದೆಯವರ ಸ್ಥಳದಲ್ಲಿರುವಿರಿ. ಅವರು ನನ್ನ ಮೇಲೆ ಎಷ್ಟು ಪ್ರೇಮವುಳ್ಳವರಿರುವರೋ, ನೀವಾದರೂ ಅಷ್ಟೇ ಪ್ರೇಮವನ್ನು ನನ್ನಲ್ಲಿರಿಸಿರುವಿರಿ. ನಿಮ್ಮ ಮನಸ್ಸಿಗೆ ಯೋಗ್ಯ ಕಂಡಂತೆ ಮಾಡಿರಿ.''

''ಉಮೇಶಚಂದ್ರರೇ, ಗದಾಧರನು ಕನ್ಯೆಯನ್ನು ನೋಡಿದಂತೆ ಕಾಣುವದಿಲ್ಲ. ಈಗಲೆ ಕರೆಯುವೆನು.'' ಎಂದು ರಾಧಾಮೋಹನನು ಹೇಳಿ:—''ಭೂಪಬಾಲೆ, ಬಾರಮ್ಮಾ ಇಲ್ಲಿ.''

ರಾಧಾಮೋಹನನು ಕೂಗಿದೊಡನೆಯೆ ಭೂಪಬಾಲೆಯು ಅಲ್ಲಿ

ಬಂದು ಅವನತ ಮುಖಿಯಾಗಿ ನಿಂತಳು. ಗದಾಧರನು ಭೂಪಬಾಲೆಯನ್ನು ಚನ್ನಾಗಿ ನಿರೀಕ್ಷಿಸಿದನು; ಅವಳು ವ್ರಜಬಾಲೆಯ ಚಲುವಿಕೆಯ ಪಾಸಂಗಕ್ಕಾದರೂ ಹತ್ತುವದಿಲ್ಲವೆಂದು ಗದಾಧರನು ತಿಳಿದನು. ವ್ರಜಬಾಲೆಯನ್ನು ಕೊಡುವದಕ್ಕಾಗಿ ರಾಧಾಮೋಹನನು ಆತುರನಾಗಿರುವನೆಂದು ಗದಾಧರನು ತಿಳಿದಿದ್ದನು. ವ್ರಜಬಾಲೆಯ ಪ್ರತಿಯಾಗಿ ಭೂಪಬಾಲೆಯು ಬಂದ ಕೂಡಲೆ ಅವನ ಆನಂದವು ಮಾಯವಾಯಿತು. ಆಗ ಅವನು ನಿದಾಕ್ಷಿಣ್ಯದಿಂದ ರಾಧಾಮೋಹನನನ್ನು ಕುರಿತು:—"ನಿಮಗೆ ಇಬ್ಬರು ಕನ್ನಿಕೆಯರಿರುವರೆಂದು ಕೇಳಿರುವೆನು. ಇನ್ನೊಬ್ಬಳೆಲ್ಲಿ?"

"ಅವಳು ತನ್ನ ಗೆಳತಿಯರ ಮನೆಗೆ ಹೋಗಿರಬಹುದು."

"ನೀವು ವ್ರಜಬಾಲೆಗೆ ವರನನ್ನು ಗೊತ್ತು ಮಾಡಿರುವಿರೇನು?"

"ಇಲ್ಲ."

"ಅದೇಕೆ?"

"ಹಿರಿಯಳಾದ ಈ ಭೂಪಬಾಲೆಯ ವಿವಾಹವಾಗದೆ ಚಿಕ್ಕವಳ ವಿವಾಹವನ್ನು ಮಾಡುವದು ಹೇಗೆ?"

"ನೀವು ನಮ್ಮ ಮನೆತನದೊಡನೆ ಶರೀರ ಸಂಬಂಧ ಮಾಡುವ ಇಚ್ಛೆಯಿಂದ ನನ್ನ ತಂದೆಯವರೊಡನೆ ಪತ್ರವ್ಯವಹಾರ ನಡೆಯಿಸಿದ್ದಿರಲ್ಲವೆ?"

"ಈ ಮಾತನ್ನು ನಾನು ಮೊದಲೇ ಹೇಳಿರುವೆನು."

"ನೀವು ಹಾಗೆ ಮನಃಪೂರ್ವಕವಾಗಿ ಇಚ್ಛಿಸುತ್ತಿದ್ದರೆ ಈ ಭೂಪಬಾಲೆಗೆ ಮತ್ತೊಂದು ವರ ನೋಡಿರಿ."

"ಅದೇಕೆ?" ವಿಸ್ಮಯದಿಂದ ರಾಧಾಮೋಹನನು ನುಡಿದು:—"ನಾನು ಇವಳಿಗೆ ಮತ್ತೊಂದು ವರನನ್ನು ನೋಡಿದರೆ ನಿಮ್ಮ ಮನೆತನದ ಶರೀರಸಂಬಂಧವೇನು ಮಾಡಿದಂತಾಯಿತು?"

"ನನಗೆ ವ್ರಜಬಾಲೆಯೇ ಬೇಕು!" ಗದಾಧರನು ಹೀಗೆ ನುಡಿದ ಕೂಡಲೆ ರಾಧಾಮೋಹನ-ಉಮೇಶಚಂದ್ರರು ವಿಸ್ಮಿತರಾದರು. ರಾಧಾಮೋಹನನು ಗದಾಧರನನ್ನೊಮ್ಮೆ ಉಮೇಚಂದ್ರನನ್ನೊಮ್ಮೆ ಕಕ್ಕಾವಿಕ್ಕಿ

ಯಾಗಿ ನೋಡಲಾರಂಭಿಸಿದನು. ಆಗ ಉಮೇಶಚಂದ್ರನು ಗದಾಧರನನ್ನು ಕುರಿತು:—"ಗದಾಧರ, ಪ್ರತ್ಯಕ್ಷವಾಗಿ ನಿಂತುಕೊಂಡ ಕನ್ನಿಕೆಯನ್ನು ಅಪೇಕ್ಷಿಸದೆ, ಅಜ್ಞಾತಳಾಗಿದ್ದ ವ್ರಜಬಾಲೆಯನ್ನು ಇಚ್ಛಿಸುವ ನಿನ್ನ ಧೈರ್ಯ ವನ್ನು ನೋಡಿ, ನನಗೆ ಆಶ್ಚರ್ಯವಾಗುತ್ತದೆ."

"ಹೇಗಿದ್ದರೂ ನನಗೆ ವ್ರಜಬಾಲೆಯೇ ಬೇಕು." ಎಂದು ಗದಾಧ ರನು ಸ್ಪಷ್ಟವಾಗಿ ನುಡಿದು:—"ನೀವು ನನಗೆ ಕನ್ನಿಕೆಯನ್ನು ಕೊಡ ಬೇಕಾಗಿದ್ದರೆ ವ್ರಜಬಾಲೆಯನ್ನು ಕೊಡಿರಿ. ಈ ಭೂಪಬಾಲೆಗೆ ಮತ್ತೊಬ್ಬ ವರನನ್ನು ನೋಡಿರಿ."

"ಭೂಪಬಾಲೆಯ ವಿವಾಹವಾಗುವ ವರೆಗೆ ವ್ರಜಳ ವಿವಾಹದ ಪ್ರಸ್ತಾಪವನ್ನು ತೆಗೆಯುವಂತಿಲ್ಲ." ಎಂದು ರಾಧಾಮೋಹನನು ನುಡಿದ ಕೂಡಲೆ, ಗದಾಧರನು ಸ್ಪಷ್ಟೋಕ್ತಿಯಿಂದ:—"ಅಲ್ಲಿಯ ವರೆಗೆ ನಾನು ಆತ್ಮಸಂಯಮನ ಮಾಡುವೆನು."

"ಎಲ್ಲರೂ ವ್ರಜಬಾಲೆಯನ್ನು ಬಯಸಹತ್ತಿದರೆ ಭೂಪಬಾಲೆಗೆ ವರನು ದೊರೆಯುವ ಬಗೆ ಹೇಗೆ?" ಎಂದು ರಾಧಾಮೋಹನನು ನಿಟ್ಟು ಸಿರು ಬಿಟ್ಟು ನುಡಿದು, ಗದಾಧರನನ್ನು ಕುರಿತು:—"ಗದಾಧರ, ಭೂಪ ಬಾಲೆಯು ವ್ರಜಳಷ್ಟು ಚಲುವೆಯಾಗಿರದಿದ್ದರೂ ಕುರೂಪಿಯಲ್ಲ. ಗುಣ ದಿಂದ ಇವಳು ವ್ರಜಬಾಲೆಗಿಂತ ಎಷ್ಟೋ ಪಾಲು ಶ್ರೇಷ್ಠಳಿರುವಳೆಂದು ನಾನು ಸತ್ಯವನ್ನು ಸ್ಮರಿಸಿ ಹೇಳುವೆನು."

"ಗದಾಧರ," ಉಮೇಶಚಂದ್ರನು ಗದಾಧರನಿಗೆ ಉಪದೇಶಪರ ವಾದ ಮಾತುಗಳನ್ನು ಹೇಳತೊಡಗಿದನು: "ರಾಧಾಮೋಹನರು ತಮಗೆ ವರನು ದೊರೆಯಬೇಕೆಂಬ ಉದ್ದೇಶದಿಂದ ಏನಾದರೊಂದು ಹೇಳುತ್ತಿ ರುವರೆಂದು ನೀನು ತಿಳಿದಿದ್ದೆಯಾಗಿದ್ದೀತು. ನೀನು ನನ್ನ ಆಪ್ತಕೋಟಿ ಯೊಳಗಿನವನಿರುವೆಯಾದ್ದರಿಂದ ನಾನೇನೂ ನಿನ್ನನ್ನು ಮೋಸಗೊಳಿಸುವ ಮಾತನ್ನಾಡುವದಿಲ್ಲ. ತಿರುಗಿ ಕೇಳಿದರೆ ರಾಧಾಮೋಹನರೇ ನನಗೆ ಪರಕೀ ಯರು. ವ್ರಜಬಾಲೆಯು ಸೌಂದರ್ಯದ ಖ್ಯಾತಿಯನ್ನು ಕೇಳಿರುವೆಯಾದ್ದ ರಿಂದ ನೀನು ಅವಳನ್ನು ಇಚಿಸುತ್ತಲಿರುವೆ. 'ಭಾರ್ಯಾ ರೂಪವತೀ

ಶತ್ರು' ಎಂಬ ನೀತಿಯನ್ನು ನೀನು ಕೇಳಿಲ್ಲವಾಗಿ ತೋರುತ್ತದೆ. ವ್ರಜ ಬಾಲೆಯು ನಿಜವಾಗಿ ಅದ್ವಿತೀಯ ರೂಪವತಿಯಿರುವಳು. ಅವಳು ಸ್ವೇಚ್ಛಾಪ್ರವೃತ್ತಳೂ, ದುರಭಿಮಾನಿಯೂ, ಲಜ್ಜಾಭಯ ವಿರಹಿತಳೂ ಆಗಿರುವಳು. ಸ್ತ್ರೀ ಧರ್ಮ-ಸತೀ ಧರ್ಮ ಮೊದಲಾದ ಅಬಲಾ ಜನೋಚಿತವಾದ ಸದ್ಗುಣಗಳು ಅವಳಲ್ಲಿ ಕಂಡು ಬರುವದಿಲ್ಲ. ಅವಳು ದುರ್ಮಾರ್ಗಿಯಾಗಿರದಿದ್ದರೂ ಸಾಧ್ವಿಯರಿಗೆ ಶೋಭಿಸುವ ಗುಣಗಳು ಅವಳಲ್ಲಿ ಕಂಡುಬರುವದಿಲ್ಲ. ನಾನು ಹೇಳುವ ಮಾತಿನಿಂದ ರಾಧಾಮೋಹನರಿಗೆ ಸಿಟ್ಟು ಬಂದರೂ ಚಿಂತೆಯಿಲ್ಲವೆಂದು ನಿನಗೆ ವಸ್ತುಸ್ಥಿತಿಯನ್ನು ತಿಳಿಸಿರುವೆನು. ಭೂಪಬಾಲೆಯು ರೂಪದಲ್ಲಿ ವ್ರಜಬಾಲೆಗಿಂತ ಎಷ್ಟೋ ಪಾಲು ಹಿಂದಿದ್ದರೂ ಗುಣದಿಂದ ಅಷ್ಟೇ ಪಟ್ಟು ವರಿಷ್ಠಳಿರುವಳು. ನೀನು ಸದಸದ್ವಿವೇಕ ಬುದ್ಧಿಗೆ ಸ್ಥಳವಿತ್ತು ಯೋಗ್ಯ ಕಂಡಂತೆ ವರ್ತಿಸು.''

ಗದಾಧರನು ಉಮೇಶಚಂದ್ರನ ಮಾತುಗಳನ್ನು ಕೇಳುತ್ತ ತಟಸ್ಥನಾಗಿ ಕುಳಿತಿದ್ದನು. ಅವನ ಮನಸ್ಸಿನಲ್ಲಿ ಅನೇಕ ವಿಧದ ವಿಚಾರ ತರಂಗಗಳು ಹುಟ್ಟಲಾರಂಭಿಸಿದ್ದವು. ಅವನು ವ್ರಜಬಾಲೆಯನ್ನು ಪ್ರತ್ಯಕ್ಷವಾಗಿ ನೋಡಿದ್ದರಿಂದ ಅವನ ಮನಸ್ಸು ಆ ಲಾವಣ್ಯಲತಿಕೆಯಲ್ಲಿ ಪೂರ್ಣವಾಗಿ ಲೀನವಾಗಿತ್ತು. ಇವನಿಗೆ ಸೌಂದರ್ಯಕ್ಕಿಂತ ಗುಣಗಳ ಬೆಲೆಯು ಹೆಚ್ಚಾಗಿ ತೋರಲಿಲ್ಲ. ಉಮೇಶಚಂದ್ರನ ಮಾತಿಗೆ ಏನು ಉತ್ತರವೀಯಬೇಕೆಂದು ಅವನು ವಿಚಾರ ಮಾಡಲಾರಂಭಿಸಿದ್ದನು. ಆಗ ರಾಧಾಮೋಹನನು ಅವನನ್ನು ಕುರಿತು:—''ಗದಾಧರ, ನೀನು ವ್ರಜಬಾಲೆಯನ್ನು ಪ್ರತ್ಯಕ್ಷವಾಗಿ ಕಾಣದೆ ಅವಳನ್ನು ಬಯಸುವದನ್ನು ನೋಡಿ, ವಿಸ್ಮಯವೆನಿಸುತ್ತದೆ.''

''ನಾನು ಉಮೇಶಚಂದ್ರರ ಮನೆಯಲ್ಲಿ ಇದೀಗ ಅವಳನ್ನು ಕಂಡಿರುವೆನು.''

''ಅಂತೆಯೆ ಇವನು ವ್ರಜಬಾಲೆಯನ್ನು ಬಯಸುತ್ತಲಿರುವನು.''

ಉಮೇಶಚಂದ್ರನು ಹೀಗೆ ನುಡಿದ ಮೇಲೆ ರಾಧಾಮೋಹನನು

ಗದಾಧರನನ್ನು ಕುರಿತು:—"ಗದಾಧರ, ನೀನು ಭೂಪಬಾಲೆಯನ್ನು ವರಿಸಲೊಪ್ಪಿದರೆ, ಬೇಗನೆ ವಿವಾಹ ಸಮಾರಂಭವು ನೆರವೇರಿಸಲ್ಪಡುವದು; ವ್ರಜಬಾಲೆಯೇ ಬೇಕೆಂದು ನಿನ್ನ ಹಟವಿದ್ದರೆ ಭೂಪಬಾಲೆಯ ವಿವಾಹವಾಗುವ ವರೆಗೆ ಇಲ್ಲವೆ ಇವಳಿಗೆ ವರನು ದೊರೆಯುವ ವರೆಗೆ ತಡೆಯು ಬೇಕಾಗುವದು."

"ನಾನು ಹಟಹಿಡಿದು ನಿಮ್ಮ ಕನ್ನಿಕೆಯನ್ನು ವರಿಸಲೆತ್ನಿಸಿಲ್ಲ."

"ಗದಾಧರ, ಒಬ್ಬಳನ್ನು ನಿನಗೆ ಕೊಡಬೇಕೆಂದು ನಾನು ನಿರ್ಧರಿಸಿಕೊಂಡೇ ನಿನ್ನನ್ನು ಕರೆಯಿಸಿರುವೆನು. ನೀನು ಭೂಪಬಾಲೆಯನ್ನು ವರಿಸಲೊಪ್ಪಿದ್ದರೆ ತಿಂಗಳೊಪ್ಪತ್ತಿನಲ್ಲಿಯೆ ವಿವಾಹಕಾರ್ಯವನ್ನು ಜರುಗಿಸಿ ಬಿಡಲಿಕ್ಕೆ ಬರುವಂತಿತ್ತು."

"ನಾನು ಭೂಪಬಾಲೆಯನ್ನು ವರಿಸಲೊಪ್ಪಬೇಕೆಂದು ನಿಮ್ಮ ಆಗ್ರಹವಿರುವದಲ್ಲವೆ?"

"ಆಗ್ರಹವಿಲ್ಲ." ಎಂದು ರಾಧಾಮೋಹನನು ಗದಾಧರನಿಗೆ ಹೇಳಿ: "ಉಮೇಶಚಂದ್ರ, ಕನ್ಯಾ-ವರಗಳ ವಿಷಯದಲ್ಲಿ ಆಗ್ರಹದಿಂದ ಪ್ರಯೋಜನವಾಗುವದೇನು?"

"ನೀವು ವ್ರಜಬಾಲೆಗೆ ಬೇರೆ ವರನನ್ನು ನಿಯಮಿಸಿದ್ದರೆ ಆ ಮಾತಿಗೆ ನನ್ನ ಪ್ರತಿಬಂಧವಿಲ್ಲ."

"ವ್ರಜಬಾಲೆಗೆ ವರಗಳೇನು ಕಡಿಮೆ?" ಎಂದು ಉಮೇಶಚಂದ್ರನು ಗದಾಧರನಿಗೆ ಹೇಳಿದನು. ಆಗ ರಾಧಾಮೋಹನನು ಅವನನ್ನು ಕುರಿತು:—"ಗದಾಧರ, ನೀನು ಭೂಪಬಾಲೆಯನ್ನು ವರಿಸಲಿಕ್ಕೆ ಸಮ್ಮತಿಸುವದಿಲ್ಲವಷ್ಟೆ?"

"ನನಗೆ ವ್ರಜಬಾಲೆಯೇ ಬೇಕು!" ಎಂದು ಗದಾಧರನು ನುಡಿದು, ಸ್ಪಷ್ಟೋಕ್ತಿಯಿಂದ:—"ನಿಮ್ಮ ಮನಸ್ಸಿದ್ದರೆ ನನಗೆ ಅವಳನ್ನು ಕೊಡಿರಿ. ನನಗೇನೂ ಭೂಪಬಾಲೆಯು ಬೇಕಾಗಿಲ್ಲ."

ಗದಾಧರನು ಹೀಗೆ ನುಡಿಯುವಷ್ಟರಲ್ಲಿ ಅಲ್ಲಿಗೆ ವ್ರಜಬಾಲೆಯೂ ಉಷಾಸುಂದರಿಯೂ ಬಂದರು. ಆಗ ಉಷಾಸುಂದರಿಯು ಗದಾಧರ

ನಿಗೆ:—"ಅಣ್ಣಾ, ಈ ಪಕ್ಷಿಯು ಪಂಜರದೊಳಗೆ ಸಿಲುಕುವಂತಹದಲ್ಲ ನಾನು ಎಷ್ಟು ಪ್ರತಿಬಂಧ ಮಾಡಿದರೂ ಬಾಗದೆ ಓಡಿ ಬಂತು."

"ಗದಾಧರ, ಇವಳೇ ವ್ರಜಬಾಲೆಯು." ಎಂದು ಉಮೇಶ ಚಂದ್ರನು ಗದಾಧರನಿಗೆ ವ್ರಜಬಾಲೆಯನ್ನು ತೋರಿಸಿದನು.

"ಅಪ್ಪಾ, ಇವರು ಸ್ವಾವಲಂಬಿಗಳಿರುವರು. ಜನರು ಪರಿಚಯ ಮಾಡಿಕೊಡುವದಕ್ಕಿಂತ ಮುಂಚಿತವಾಗಿಯೇ ಪರಸ್ಪರರು ಸ್ನೇಹವುಳ್ಳವ ರಾಗಿರುವರು" ಎಂದು ಉಷಾಸುಂದರಿಯು ಉಮೇಶಚಂದ್ರನಿಗೆ ಹೇಳಿದಳು.

ರಾಧಾಮೋಹನನಿಗೆ ಇವರ ಭಾಷಣಗಳ ಕಡೆಗೆ ಲಕ್ಷ್ಯವಿದ್ದಿಲ್ಲ ಅವನು ವಿಚಾರ ತಂದ್ರಿಯಲ್ಲಿ ಲೀನತೆಯನ್ನು ಹೊಂದಿದ್ದನು. ಶ್ರೀಮಂತರ ಮನೆತನಗಳಿಗೆ ತನ್ನ ಇಬ್ಬರೂ ಕನ್ನಿಕೆಯರನ್ನು ಕೊಡಬೇಕೆಂದು ಅವನ ಯತ್ನವಿತ್ತು. ವ್ರಜಬಾಲೆಗೆ ಅಂತಹ ಮನೆತನಗಳು ದೊರೆಯುವಂತಿದ್ದವು. ಸಾಧಾರಣ ತರಗತಿಯವಳಾದ ಭೂಪಬಾಲೆಯನ್ನು ಮಾತ್ರ ಯಾವ ಧನಿಕ ವರನೂ ವರಿಸಲೊಪ್ಪಿದ್ದಿಲ್ಲ. ತನ್ನ ಹೊಟ್ಟೆಯ ಮಕ್ಕಳಲ್ಲಿ ಒಬ್ಬಳನ್ನು ಶ್ರೀಮಂತನಿಗೆ, ಮತ್ತೊಬ್ಬಳನ್ನು ದರಿದ್ರನಿಗೆ ಕೊಡುವದೆಂದರೆ ಅವನಿಗೆ ಜೀವದ ಸುತ್ತು ಬಂದಂತಾಗಿತ್ತು. ಅವನು ಎಷ್ಟೋ ವೇಳೆಯ ವರೆಗೆ ವಿಚಾರಿಸಿದ ಮೇಲೆ ಗದಾಧರನನ್ನು ಕುರಿತು—" ನನ್ನ ಮನಸ್ಸಿನಲ್ಲಿ ಇನ್ನೊಂದು ಬಗೆಯ ವಿಚಾರವು ಹುಟ್ಟಿದೆ. ಅದರಂತೆ ನೀನು ನಡೆಯಲೊಪ್ಪಿದರೆ ಇಬ್ಬರ ಇಚ್ಛೆಗಳೂ ಸಫಲವಾದಂತಾಗುವವು."

"ಅದೇನು ಹೇಳಿರಿ." ಎಂದು ಗದಾಧರನು ಉತ್ಕಂಠೆಯಿಂದ ಕೇಳಿದನು.

"ನೀನು ಭೂಪಬಾಲೆ-ವ್ರಜಬಾಲೆಯರಿಬ್ಬರನ್ನೂ ವರಿಸು." ರಾಧಾಮೋಹನನು ಹೀಗೆ ನುಡಿದ ಕೂಡಲೆ ಉಮೇಶಚಂದ್ರನು ಗಹಗಹಿಸಿ ನಗುತ್ತ:—"ರಾಧಾಮೋಹನರ ಹಂಚಿಕೆಯು ಯೋಗ್ಯವಾದದ್ದಿರುವದು. ತಮ್ಮ ಮಕ್ಕಳಿಬ್ಬರೂ ಶ್ರೀಮಂತರ ಮನೆತನಕ್ಕೆ ಬೀಳಬೇಕೆಂದು ಇವರ ಮಹತ್ವಾಕಾಂಕ್ಷೆಯಿರುವದು. ಈ ಯುಕ್ತಿಯಿಂದ ಇವರ ಇಚ್ಛೆಯು ಸಫಲವಾಗುವದು." ಎಂದು ನುಡಿದು, ಗದಾಧರನನ್ನು ಕುರಿತು:—

''ಗದಾಧರ, ನಿನ್ನ ದೃಷ್ಟಿಗಾದರೂ ಈ ಹಂಚಿಕೆಯು ಪ್ರಶಸ್ತವೆನಿಸುವದೆಂಬದರಲ್ಲಿ ಸಂದೇಹವಿಲ್ಲ.''

''ನನಗೆ ವ್ರಜಬಾಲೆಯೇ ಬೇಕು; ಭೂಪಬಾಲೆಯು ಬೇಕಾಗಿಲ್ಲ.'' ಎಂದು ಗದಾಧರನು ಸ್ಪಷ್ಟವಾಗಿ ಉತ್ತರವಿತ್ತನು.

## ಪ್ರತಿಜ್ಞೆ.

ವ್ರಜಬಾಲೆಯು ತಾರುಣ್ಯ ಪ್ರದೇಶದಲ್ಲಿ ಕಾಲಿಟ್ಟಾಗಿನಿಂದ ಅವಳ ಪ್ರಾಪ್ತಿಗಾಗಿ ಎಷ್ಟೋ ತರುಣರು ತಮ್ಮ ತಮ್ಮ ಯೋಗ್ಯತೆಗನುಗುಣವಾಗಿ ಪ್ರಯತ್ನಿಸತೊಡಗಿದ್ದರು. ಮೊದಲೇ ಅನುಪಮ ರೂಪವತಿಯಾದ ವ್ರಜಬಾಲೆಯು ಉಪವರಳಾದಂದಿನಿಂದ ಅವಳ ಸೌಂದರ್ಯ ಶರಧಿಯು ಮೇರೆದಪ್ಪಿ ಉಕ್ಕೇರಲಾರಂಭಿಸಿತ್ತು. ನಿರ್ಜರಾಂಗನೆಯರನ್ನು ಜರೆಯುವ ಆ ಲಾವಣ್ಯಲತಿಕೆಯು ನಾಮಾಂಕಿತ ಯತಿಗಳ ಮನಸ್ಸನ್ನು ಸಹಜವಾಗಿ ಕದಲಿಸುವಂತಹ ಯೋಗ್ಯತೆಯುಳ್ಳವಳಿದ್ದಳು. ಎಷ್ಟೋ ತರುಣರು ಅವಳ ಆರಾಧನೆಯಲ್ಲಿ ತೊಡಗಿದಂತೆ ಕಾಲಾಚಾಂದನಾದರೂ ಆ ಕಾರ್ಯದಲ್ಲಿ ತೊಡಗಿದ್ದರೆ ಆಶ್ಚರ್ಯವೇನು?

ಕಾಲಾಚಾಂದನು ಕಟ್ಟುನಿಟ್ಟಿನ ಸ್ವಭಾವದವನಿದ್ದುದರಿಂದ ಮಿಕ್ಕ ತರುಣರಂತೆ ಜಾಲ ಒಡೆಯುತ್ತಲೂ ದೈನ್ಯದಿಂದಲೂ ಕಾರ್ಯಸಾಧನ ಮಾಡಿಕೊಳ್ಳುವಂತಹನಿದ್ದಿಲ್ಲ. ಅವನು ತೇಜಸ್ವಿಯಾಗಿದ್ದನು; ವರ್ಚಸ್ವಿಯಿದ್ದನು; ಮಹಾ ಮಾನಿಯಾಗಿದ್ದನು. ವ್ರಜಬಾಲೆಯನ್ನು ಕುರಿತು ತಪಸ್ಸುಮಾಡಿ ಅವಳ ಮನವನ್ನು ಮೆಚ್ಚಿಸಿಕೊಳ್ಳಬೇಕೆಂದು ಅವನು ಹಾತೊರೆಯುತ್ತಿರಲಿಲ್ಲ. ಅವನು ಎಷ್ಟೋ ಸಾರೆ ರಾಧಾಮೋಹನನ ಮನೆಗೆ ಬಂದಿದ್ದರೂ ವ್ರಜಬಾಲೆಯನ್ನು ವಶಮಾಡಿಕೊಳ್ಳಬೇಕೆಂಬ ಬುದ್ಧಿಯು ಅವನಲ್ಲಿ ಹುಟ್ಟಿದ್ದಿಲ್ಲ. ಕಾಲಾಚಾಂದನು ತನ್ನ ಕನ್ನಿಕೆಯರಲ್ಲೊಬ್ಬಳನ್ನು ವರಿಸಲಿಕ್ಕೆ ಅರ್ಹನಿರುವನೆಂದು ರಾಧಾಮೋಹನನು ಎಣಿಕೆ ಹಾಕಿದ್ದನು; ಆದರೂ ಅವನು ಕಾಲಾಚಾಂದನೆದುರಿಗೆ ಈ ಪ್ರಸ್ತಾಪವನ್ನು ತೆಗೆದಿರಲಿಲ್ಲ.

ಕಟ್ಟು ನಿಟ್ಟಿನ ಜನರ ಸ್ವಭಾವದ ಪಡಿಕಟ್ಟೇ ವಿಲಕ್ಷಣವಾದದ್ದಿರುತ್ತದೆ. ಅವರು ಸಹಜ ರೀತಿಯಿಂದ ವಿಕಾರವಶರಾಗುವದಿಲ್ಲ; ಒಮ್ಮೆ ವಿಕಾರವಶರಾದರೆಂದರೆ ಆ ಕಾರ್ಯದ ಫಲಾಫಲಗಳ ನಿರ್ಣಯವಾಗುವ ವರೆಗೆ ಕೈ ಬಿಡುವದಿಲ್ಲ. ಕಾಲಾಚಾಂದನ ಸ್ಥಿತಿಯಾದರೂ ಹೀಗೆಯೇ ಇತ್ತು. ಅವನು ವ್ರಜಬಾಲೆಯೊಡನೆ ಮಾತು-ಕಥೆಗಳನ್ನಾಡುತ್ತಿದ್ದರೂ, ಎಷ್ಟೋ ವಿನೋದ ಮಾಡುತ್ತಿದ್ದರೂ ಅವನ ಮನಸ್ಸಿನ ಮೇಲ ಆ ಲಾವಣ್ಯವತಿಯು ತನ್ನ ವರ್ಚಸ್ಸವನ್ನು ಪ್ರಸ್ಥಾಪಿಸಿರಲಿಲ್ಲ.

ತನ್ನ ಪುತ್ರನು ಏರಿಕೆಯ ತಾರುಣ್ಯದೆಶೆಗೆ ಬಂದುದರಿಂದ ಅವನ ವಿವಾಹ ಮಾಡಬೇಕೆಂದು ಹರಸುಂದರಿಯ ಮನಸ್ಸಿನಲ್ಲಿ ಹುಟ್ಟಿತು. ಅವಳು ವ್ರಜಬಾಲೆಯನ್ನು ಕಣ್ಣಾರೆ ಕಂಡವಳಿದ್ದುದರಿಂದ ಅವಳನ್ನು ತನ್ನ ಸೊಸೆಯನ್ನಾಗಿ ಮಾಡಿಕೊಳ್ಳಬೇಕೆಂಬ ವಿಚಾರವಾದರೂ ಹರಸುಂದರಿಯ ಮನಸ್ಸಿನಲ್ಲ ಹುಟ್ಟಿತು. ಆಗ ಅವಳು ತನ್ನ ಮಗನನ್ನು ಕರೆದು—'ಕಾಲಾಚಾಂದ, ನಾನು ವಯಾತೀತಳಾದೆನು. ನಿನ್ನ ವಿವಾಹವನ್ನಷ್ಟು ನೋಡಿದೆನೆಂದರೆ ನನ್ನ ಇಹಲೋಕದ ಇಚ್ಛೆಗಳು ಪೂರ್ಣವಾದಂತಾಗುವವು. ನಿನಗೆ ಅನೇಕ ಜನರು ತಮ್ಮ ಕನ್ಯೆಯರನ್ನು ಕೊಡಬೇಕೆಂದು ಸಾಹಸ ಮಾಡುತ್ತಿರುವರು. ನಿನ್ನ ಮನಸ್ಸಿಗೆ ಬಂದ ಕನ್ನೆಯನ್ನು ಆರಿಸಿಕೊಂಡು ಲಗ್ನವಾಗು.''

''ಅವ್ವಾ, ನಾನು ನಿನ್ನ ಅಜ್ಞೆಗೆ ಹೊರತಿಲ್ಲ. ನೀನು ಯಾವ ಕನ್ಯೆಯನ್ನು ಆರಿಸುವೆಯೋ ಅವಳನ್ನೇ ನಾನು ಲಗ್ನವಾಗುವೆನು.''

''ನಾನು ಆರಿಸಿದವಳನ್ನು ನೀನು ಮದುವೆಯಾಗುವೆಯಾ?'' ಎಂದು ಹರಸುಂದರಿಯು ನುಡಿದು ಸ್ವಲ್ಪ ವೇಳೆ ವಿಚಾರಿಸಿ:—''ಮಗೂ, ಹಾಗೆ ಬೇಡ. ನಾನು ಆರಿಸಿದ ಕನ್ನಿಕೆಯು ನಿನ್ನ ಮನಸ್ಸಿಗೆ ಒರಲಿಕ್ಕಿಲ್ಲ. ನೀನು ಪ್ರಬುದ್ಧನಿರುವದರಿಂದ ಬೇಕಾದವರನ್ನು ನೀನೇ ಆರಿಸು.''

''ನೀನು ಯಾವ ಕನ್ಯೆಯನ್ನು ಆರಿಸಿರುವೆ?''

''ನಾನೇನೂ ಆರಿಸಿಲ್ಲ. ಕನ್ನೆಯನ್ನು ಆರಿಸುವ ಕೆಲಸವು ನಿನ್ನದೇ.''

“ಅಪ್ಪಾ, ನೀವು ಹೀಗೆ ಮಾತಾಡಬೇಡಿರಿ. ನಿಮ್ಮ ಮನಸ್ಸಿಗೆ ಸರಿಯಾಗಿ ಕಂಡವಳನ್ನು ನಾನು ವಿವಾಹವಾಗಲು ಸಿದ್ಧನಿರುವೆನು.”

“ಕಾಲಾಚಾಂದ,” ಹರಸುಂದರಿಯು ಅನುಮಾನಗೊಳ್ಳುತ್ತ:— “ನಾನು ಆರಿಸಿದ ಕನ್ಯೆಯು ನಿನ್ನ ಮನಸ್ಸಿಗೆ ಬರಲಾರಳು.”

“ಅದೇಕೆ?” ಕಾಲಾಚಾಂದನು ವಿಸ್ಮಯದಿಂದ ಕೇಳಿದನು.

“ಕನ್ಯಾಪಿತನು ಬಡವನಿರುವನು. ಶ್ರೀಮಂತ ಮನೆತನದವನೆಂಬ ದೊಡ್ಡಿಸ್ತಿಕೆಯುಳ್ಳವನಾದ ನೀನು ಬಡವನ ಮಗಳನ್ನು ಮದುವೆಯಾಗುವೆಯಾ?”

“ನಾನು ಶ್ರೀಮಂತಿಕೆ-ಬಡತನಗಳ ಕಡೆಗೆ ಲಕ್ಷ್ಯಗೊಡುವದಿಲ್ಲ. ಕನ್ಯೆಯು ಸರ್ವೋತ್ಕೃಷ್ಟಳಾಗಿದ್ದರಾಯಿತು. ಅವಳ ಬಡತನ-ಶ್ರೀಮಂತಿಕೆಗಳನ್ನು ತೆಗೆದುಕೊಂಡು ನಾವೇನು ಮಾಡಬೇಕಾಗಿದೆ?”

“ನಾನು ಒಬ್ಬ ಬಡವನ ಕನ್ಯೆಯನ್ನು ಆರಿಸಿರುವೆನು.”

“ಅವಳು ಯಾರು?”

“ಕಾಲಾಚಾಂದ, ನಾನು ಆರಿಸಿದ ಕನ್ನಿಕೆಯು ದಿವ್ಯಲಾವಣ್ಯವತಿಯಿರುವಳು. ಅವಳ ಗುಣಾವಗುಣಗಳ ಪರಿಚಯವು ಮಾತ್ರ ನನಗಿಲ್ಲ. ತನ್ನ ಇಬ್ಬರು ಕನ್ನಿಕೆಯರಲ್ಲಿ ಬೇಕಾದವಳನ್ನು ಆರಿಸಿಕೊಳ್ಳಬೇಕೆಂದು ಎರಡು ಮೂರವರ್ಷಗಳ ಕೆಳಗೆ ಆ ಕನ್ಯೆಯ ತಂದೆಯು ನನಗೆ ದುಂಬಾಲ ಬಿದ್ದಿದ್ದನು. ಆಗ ನೀನು ಇನ್ನೂ ಪ್ರೌಢವಯಸ್ಸಿಗೆ ಬಂದಿದ್ದಿಲ್ಲವಾದ್ದರಿಂದ ಅವನ ಮಾತುಗಳನ್ನು ನಾನು ಉಪೇಕ್ಷಿಸಿದ್ದೆನು. ನಾವು ಕೇಳುವದೊಂದೇ ತಡ; ಅವನು ತನ್ನ ಪುತ್ರಿಯನ್ನು ಧಾರೆಯೆರೆದು ಕೊಡಲಿಕ್ಕೆ ಸಿದ್ಧನಾಗುವನು.”

“ಮಾತೆ, ಅವನ ಹೆಸರೇನು?”

“ಅವನು ನಿನ್ನ ಪರಿಚಯದವನಿರುವನು. ಆ ಕನ್ನಿಕೆಯಾದರೂ ನಿನಗೆ ಅಪರಿಚಿತಳಲ್ಲ. ಶ್ರೀಪುರದ ರಾಧಾಮೋಹನನನ್ನು ಬಲ್ಲೆಯಷ್ಟೆ? ಅವನ ಚಿಕ್ಕ ಮಗಳಾದ ವ್ರಜಬಾಲೆಯು ಅಭೂತಪೂರ್ವವಾದ ಸೌಂದರ್ಯಶಾಲಿನಿಯಿರುವಳು.”

ಹರಸುಂದರಿಯ ಮಾತುಗಳನ್ನು ಕೇಳಿ ಕಾಲಾಚಾಂದನ ತಲೆಯಲ್ಲಿ ಚಕ್ಕನೆ ಪ್ರಕಾಶವು ಬಿತ್ತು. ವ್ರಜಬಾಲೆಯು ಲಾವಣ್ಯಮಯಿಯೆಂಬದನ್ನು ಅವನು ಮೊದಲೇ ತಿಳಿದುಕೊಂಡಿದ್ದನು. ಹರಸುಂದರಿಯು ವ್ರಜಬಾಲೆಯ ವಿಷಯವಾಗಿ ಪ್ರಸ್ತಾಪವನ್ನೆತ್ತಿದ ಕೂಡಲೆ, ವರಿಸಿದರೆ ಅಂತಹ ರಮಣಿಯನ್ನೇ ವರಿಸಬೇಕೆಂದು ಕಾಲಾಚಾಂದನು ನಿಶ್ಚಯಿಸಿಕೊಂಡನು. ಆಗ ಅವನು ತನ್ನ ತಾಯಿಯನ್ನು ಕುರಿತು ಸಂಭ್ರಮದಿಂದ:—"ಅವ್ವಾ, ನಾನು ವ್ರಜಬಾಲೆಯನ್ನು ನೋಡಿರುವೆನು. ಅವಳು ರೂಪವತಿಯಿದ್ದಂತೆ ಗುಣವತಿಯೂ ಆಗಿರುವಳು. ನಾನು ವರಿಸಲೊಪ್ಪಿದರೆ ರಾಧಾಮೋಹನರು ಆನಂದದಿಂದ ಅವಳನ್ನು ನನಗೆ ಕೊಡುವರು. ನಾನು ಈಗಲೇ ಶ್ರೀಪುರಕ್ಕೆ ಹೋಗಿ ಬರುವೆನು."

ಕಾಲಾಚಾಂದನು ವ್ರಜಬಾಲೆಯ ಪ್ರಾಪ್ತಿಯನ್ನು ಮಾಡಿಕೊಳ್ಳಬೇಕೆಂಬ ಉದ್ದೇಶದಿಂದ ವೀರಜಾವನದಿಂದ ಹೊರಟು ದ್ರುತಪದದಿಂದ ಶ್ರೀಪುರಕ್ಕೆ ಬಂದನು. ವರಿಕೆಯ ಬಿಸಿಲಿನಲ್ಲಿ ದಾರಿಯನ್ನು ನಡೆದ ಕಾಲಾಚಾಂದನಿಗೆ ಬಹಳೇ ನೀರಡಿಕೆಯಾಯಿತು. ಅವನು ಶ್ರೀಪುರದಲ್ಲಿದ್ದ ಪುಷ್ಕರಣಿಯಲ್ಲಿ ನೀರು ಕುಡಿದು ರಾಧಾಮೋಹನನ ಮನೆಗೆ ಹೋಗಬೇಕೆಂದು ಆ ಪುಷ್ಕರಣಿಯಲ್ಲಿಳಿದನು. ಅವನು ಅಲ್ಲಿ ನೀರು ಕುಡಿದು ಮೇಲೆ ಬರುವಷ್ಟರಲ್ಲಿ ವ್ರಜಬಾಲೆಯೂ ಭೂಪಬಾಲೆಯೂ ನೀರು ಒಯ್ಯುವದಕ್ಕಾಗಿ ಅದೇ ಪುಷ್ಕರಣಿಗೆ ಬಂದರು. ವ್ರಜಬಾಲೆಯನ್ನು ಕಂಡು ಕಾಲಾಚಾಂದನಿಗೆ ಆನಂದವಾಯಿತು. ಅವಳಿಗೆ ತನ್ನ ಮನೋದಯವನ್ನು ತಿಳಿಸಬೇಕೆಂದು ಕಾಲಾಚಾಂದನು ನಿರ್ಧರಿಸಿಕೊಂಡನು. ಜೊತೆಯಲ್ಲಿ ಭೂಪಬಾಲೆಯಿದ್ದದರಿಂದ ಅವನು ತನ್ನ ಅಂತರಂಗವನ್ನು ನಿವೇದಿಸಲಿಕ್ಕೆ ಹಿಂದೆ-ಮುಂದೆ ನೋಡಲಾರಂಭಿಸಿದನು. ವ್ರಜಬಾಲೆಯು ಕಾಲಾಚಾಂದನನ್ನು ನೋಡಿದೊಡನೆಯೆ:—"ಕಾಲಾಚಾಂದರಾಯ, ನೀವು ಇಂತಹ ಉಗ್ರವಾದ ಬಿಸಿಲಿನಲ್ಲಿಯೇ ಬಂದ ಉದ್ದೇಶವೇನು?"

"ಸ್ವಲ್ಪ ಅವಸರದ ಕೆಲಸವಿದ್ದುದರಿಂದ ಬಂದೆನು. ರಾಧಾಮೋಹ

ನರು ಮನೆಯಲ್ಲಿರುವರೇನು?'

"ಇರುವರು." ಎಂದು ವ್ರಜಬಾಲೆಯು ನುಡಿದು, ಸ್ವಲ್ಪ ವೇಳೆಯ ಮೇಲೆ —"ಯಾಕೆ? ನೀವು ಮನೆಗೆ ಬರುವದಿಲ್ಲವೇನು?"

"ಬಾರದೇನು ಮಾಡಲಿ?" ನೀರಡಿಕೆಯು ಬಹಳವಾದ್ದರಿಂದ ನೀರು ಕುಡಿಯುವದಕ್ಕಾಗಿ ಇಲ್ಲಿಗೆ ಬಂದೆನು."

"ಕಾಲಾಚಾಂದನು ಹೀಗೆ ನುಡಿಯುವಷ್ಟರಲ್ಲಿ ಭೂಪಬಾಲೆ-ವ್ರಜ ಬಾಲೆಯರು ನೀರು ತುಂಬಿಕೊಂಡು ಮೇಲೆ ಬಂದರು. ಹೋಗ-ಹೋಗು ತ್ತಲೆ ವ್ರಜಬಾಲೆಯು: —"ಕಾಲಾಚಾಂದರಾಯ, ಮನೆಗೆ ಬರ್ರಿ."

"ಕೊಡವು ಭಾರವಾದದ್ದದರಿಂದ ಇಲ್ಲಿಯೇ ಸ್ವಲ್ಪವೇಳೆ ನಿಂತು ಮಾತನಾಡಲಿಕ್ಕೆ ಮನಸ್ಸಿಲ್ಲವೆಂಬಂತೆ ಕಾಣುತ್ತದೆ."

"ಕೊಡ ಹೊತ್ತುಕೊಂಡು ಹರಟೆ ಹೊಡೆಯಲಿಕ್ಕೆ ವ್ರಜಬಾಲೆಯು ಬಹಳೇ ಗಟ್ಟಿಗಳು" ಎಂದು ಭೂಪಬಾಲೆಯು ಕಾಲಾಚಾಂದನ ಮಾತಿಗೆ ಉತ್ತರವಿತ್ತು ಮುಂದೆ ಸಾಗಿದಳು. ವ್ರಜಬಾಲೆಯು ಅಲ್ಲಿಯೇ ನಿಂತು ಕೊಂಡಳು. ಕಾಲಾಚಾಂದನಿಗಾದರೂ ಅಷ್ಟೇ ಬೇಕಾಗಿತ್ತು. ಅವನು ತನ್ನ ಮನೋಗತವನ್ನು ಯಾವ ಬಗೆಯ ಶಬ್ದಗಳಿಂದ ವ್ಯಕ್ತಪಡಿಸಬೇಕೆಂಬ ವಿಚಾರದಲ್ಲಿರಲು, ವ್ರಜಬಾಲೆಯು ಅವನನ್ನು ಕುರಿತು: —"ಅವಸರದ ಕೆಲಸವಿದ್ದದರಿಂದ ಬಿಸಿಲಲ್ಲಿ ಬರೋಣವಾಯಿತೆಂದು ಹೇಳಿದಿರಿ. ಅಂತಹ ಮಹತ್ವದ ಕಾರ್ಯವೇನಿರುವದು? ನೀವು ಯಾರನ್ನು ಭೆಟ್ಟಿಯಾಗಬೇಕಾ ಗಿರುವದು?"

"ನಾನು ನಿನ್ನ ಕಡೆಗೇ ಬಂದಿರುವೆನು. ಮಹತ್ವದ ಕೆಲಸ ವಾದರೂ ನಿನಗೆ ಸಂಬಂಧಿಸಿದ್ದೇ ಇರುವದು."

"ನನ್ನ ಕಡೆಗೆ ನಿಮ್ಮ ಕೆಲಸವಿರುವದೆ?" ಎಂದು ವ್ರಜಬಾಲೆಯು ವಿಸ್ಮಯದಿಂದ ನುಡಿದು:—"ಕಾಲಾಚಾಂದರಾಯ, ನನ್ನ ಬಳಿಯಲ್ಲಿ ನಿಮ್ಮ ಕೆಲಸವೇನುಂಟು?"

"ನಾನು ನಿನ್ನ ಗುಣಗಳಿಗೆ ಲುಬ್ಧನಾಗಿರುವೆನು. ನನ್ನ-ನಿನ್ನಲ್ಲಿಯ ಸ್ನೇಹವು ಆಜನ್ಮವಾಗಿಸ್ಥಿರವಾಗಬೇಕೆಂಬ ಉದ್ದೇಶದಿಂದ ಧಾವಿಸಿಬಂದೆನು."

ಕಾಲಾಚಾಂದರಾಯ!'' ವ್ರಜಬಾಲೆಯು ಹೀಗೆ ನುಡಿದು ವಿಸ್ಮಯ ದಿಂದ ಅವನ ಮುಖವನ್ನು ನೋಡುತ್ತ ನಿಂತಳು. ಆಗ ಕಾಲಾಚಾಂದನು ಆತುರತೆಯಿಂದ:—''ವ್ರಜ, ಮಾತಾಡು; ನಿನ್ನ ಮನಸ್ಸಿನಲ್ಲಿರುವದನ್ನು ನನಗೆ ತಿಳಿಸಿಬಿಡು.''

''ಈ ವ್ರಜಬಾಲೆಯು ತನ್ನ ಸ್ನೇಹಿತಗನ್ನು ಮರೆಯುವಂತಹ ಪಶು ಕೋಟಿಯೊಳಗಿನವಳಲ್ಲ. ಸ್ನೇಹವು ನೆಲೆಗೊಳ್ಳುವದಿಷ್ಟೇ ಅವಕಾಶವು. ಮನಸ್ಸು ಏಕಜೀವವಾಗಿ ಒಮ್ಮೆ ಸ್ನೇಹವು ನೆಲೆಗೊಂಡಿತೆಂದರೆ ಅದು ವ್ರಜಳಲ್ಲಿ ಅಚಲವಾಗಿ ಉಳಿಯುವದೆಂದು ಮನಃಪೂರ್ವಕವಾಗಿ ಹೇಳು ವೆನು. ನಿಮ್ಮಂತಹ ತೇಜಸ್ವಿಗಳಾದ ಜನರ ಸ್ನೇಹವನ್ನು ಸಂಪಾದಿಸುವ ದಕ್ಕಾಗಿ ನಾನು ವ್ಯಾಹತಿಯಿಲ್ಲದೆ ಪ್ರಯತ್ನಿಸುತ್ತಿರುವೆನೆಂಬದು ನಿಮಗೆ ಗೊತ್ತೇ ಇರುವದು.''

''ನಾನು ಹೇಳುವ ಸ್ನೇಹಸಂಬಂಧದ ಪಡಿಕಟ್ಟೇ ಬೇರೆ ವಿಧವಾದ ದ್ದಿರುವದು.''

''ಅದೆಂತಹದು?''

''ನೀನು ನನ್ನನ್ನು ಪ್ರೀತಿಸುವೆಯಾ?''

''ನಿಸ್ಸಂಶಯ!'' ಎಂದು ವ್ರಜಬಾಲೆಯು ನುಡಿದು:—''ನಾನು ಯಾವ ಸ್ನೇಹಿತರಲ್ಲಿಯೂ ಅಪ್ರೇಮವನ್ನು ತೋರಿಸಿಲ್ಲ.''

''ವ್ರಜಬಾಲೆ, ನನ್ನ ಮನೋದಯವನ್ನು ಸ್ಪಷ್ಟವಾದ ಭಾಷೆಯಲ್ಲಿ ಆಡಿ ತೋರಿಸುವ ವರೆಗೆ ನಿನಗೆ ತಿಳಿಯುವದಿಲ್ಲವೆಂಬಂತೆ ತೋರುತ್ತದೆ.''

''ಭಾಷೆಯು ಸ್ಪಷ್ಟವಿರುವದು. ಇದಕ್ಕಿಂತ ಸ್ಪಷ್ಟವಾಗಿ ಹೇಳ ಲಿಕ್ಕೆ ಸಾಧ್ಯವಿದ್ದರೆ ಅವಶ್ಯವಾಗಿ ಹೇಳಿರಿ.''

''ಕೊಡವನ್ನು ಹೊತ್ತುಕೊಂಡೇ ಮಾತನಾಡತೊಡಗಿದರೆ ಏನು ಹೇಳಲಿ?''

''ಏನೂ ಅಡ್ಡಿಯಿಲ್ಲ. ಇದೇ ನೀರಿಗೆ ಕೊಡ ಹೊತ್ತುಕೊಂಡು ತಾಸೆರಡು ತಾಸುಗಳ ವರೆಗೆ ಮಾತಾಡುತ್ತ ನಿಲ್ಲುವ ರೂಢಿಯು ನನಗಿರು ವದು. ಹೇಳಿರಿ; ನಿಮ್ಮ ಮನೋದಯವನ್ನು ಹೇಳಿರಿ.''

"ಪ್ರಣಯೇಚ್ಛುಗಳಾದ ಅವಿವಾಹಿತ ತರುಣರಲ್ಲಿ ಅವಿವಾಹಿತ ತರುಣಿಯರು ಇಡುವ ಪ್ರೇಮವನ್ನು ನಾನು ಯಾಚಿಸುತ್ತಿರುವೆನು. ವ್ರಜ, ಕಟ್ಟಾಭಿಮಾನಿಯಾದ ನಾನು ಯಾರನ್ನೂ ಯಾಚಿಸಿಲ್ಲ; ಕೇವಲ ಪ್ರೇಮದ ಬಲೆಯಲ್ಲಿ ಸಿಲುಕಿ ನಿನ್ನನ್ನು ಈ ವರೆಗೆ ಯಾಚಿಸತೊಡಗಿರುವೆನು."

ಕಾಲಾಚಾಂದನು ಹೀಗೆ ನುಡಿಯುವಷ್ಟರಲ್ಲಿ ಭೂಪಬಾಲೆಯು ಬರುವದು ಕಂಡದ್ದರಿಂದ ವ್ರಜಬಾಲೆಯ ಲಕ್ಷ್ಯವು ಅವಳ ಕಡೆಗೆ ಹೋಗಿತ್ತು. ಅವಳಿಗೆ ಕಾಲಾಚಾಂದನ ಮಾತಿನ ತಾತ್ಪರ್ಯವು ಚನ್ನಾಗಿ ತಿಳಿಯಲಿಲ್ಲ. ಅವಳು ನಿರ್ವಿಕಾರ ಭಾವನೆಯಿಂದ ತನ್ನ ಮನೋಗತವನ್ನು ವ್ಯಕ್ತಪಡಿಸಿದಳು. "ಕಾಲಾಚಾಂದರಾಯ, ನಾನು ನಿಮ್ಮ ಸ್ನೇಹಾಂಕಿತಳಿರುವೆನೆಂದು ಒಂದೇ ಮಾತಿನಲ್ಲಿ ಹೇಳುವೆನು. ಇದಕ್ಕಿಂತ ಹೆಚ್ಚಿಗೆ ಇನ್ನೇನು ಹೇಳಲಿ?"

"ನಿನ್ನ ಮಾತು ನಿಜವೆ?"

"ಈ ವ್ರಜಬಾಲೆಯು ಎಂದೂ ಅಸತ್ಯ ಭಾಷಣಗಳನ್ನಾಡಲಾರಳು." ಎಂದು ವ್ರಜಬಾಲೆಯು ನುಡಿದು:- "ನೀವಾದರೂ ಇಷ್ಟು ದಿನಗಳ ಸ್ನೇಹವನ್ನು ಚಿರಾಯುವಾಗಿ ಮಾಡುವಿರಾ?"

"ನಾನು ನಿನ್ನನ್ನು ಪ್ರೀತಿಸುತ್ತಿರುವೆನೆಂದು ಸತ್ಯವನ್ನು ಸ್ಮರಿಸಿ ಹೇಳುವೆನು." ಹೀಗೆ ಕಾಲಾಚಾಂದನು ನುಡಿಯುವಷ್ಟರಲ್ಲಿ ಭೂಪಬಾಲೆಯು ಅಲ್ಲಿಗೆ ಬಂದೇಬಿಟ್ಟಳು. ಆಗ ಅವಳು ವ್ರಜಬಾಲೆಯನ್ನು ಕುರಿತು:-"ವ್ರಜ, ಏನು ಮಾತವ್ವಾ ಇದು? ತಲೆಯ ಮೇಲಿನ ಭಾರದ ಪರಿವೆಯಿಲ್ಲದೆ ನಿಂತುಬಿಟ್ಟಿರುವೆ! ನಾನು ಮನೆಗೆ ಹೋಗಿ ನೀರು ಹಾಕಿ ಬಂದರೂ ನಿನ್ನ ಮಾತುಗಳೇ ಮುಗಿದಿಲ್ಲ!"

"ಅಕ್ಕಾ, ಸ್ನೇಹಿತರೊಡನೆ ಎರಡು ಮಾತುಗಳನ್ನಾಡುತ್ತ ನಿಂತರೆ ಇಷ್ಟೇಕೆ ತಿರಸ್ಕಾರಗೊಳ್ಳುವೆ?" ಎಂದು ವ್ರಜಬಾಲೆಯು ಭೂಪಬಾಲೆಯನ್ನು ಕುರಿತು ನುಡಿದು, ಕಾಲಾಚಾಂದನಿಗೆ ಮನೆಗೆ ಬರುವದಕ್ಕಾಗಿ ಹೇಳಿ, ತ್ವರೆಯಿಂದ ಮನೆಯ ಹಾದೀ ಹಿಡಿದಳು. ಅಷ್ಟರಲ್ಲಿ ಭೂಪಬಾಲೆ

ಯಾದರೂ ನೀರು ತುಂಬಿಕೊಂಡು ಅವಳನ್ನು ಹಿಂಬಾಲಿಸಿ ನಡೆದಿದ್ದಳು

ಕಾಲಾಚಾಂದನು ರಾಧಾಮೋಹನನ ಮನೆಗೆ ಹೋಗಬೇಕೆಂದು ಅಲ್ಲಿಂದ ಹೊರಟನು. ಆಗ ಅವನಿಗೆ ಗದಾಧರನು ಭೆಟ್ಟಿಯಾದನು. ಇತ್ತೀಚೆಗೆ ಗದಾಧರನು ಶ್ರೀಪುರಕ್ಕೆ ಮೇಲಿಂದ ಮೇಲೆ ಬರತೊಡಗಿದ್ದನು. ಈ ಸಂಗತಿಯು ಕಾಲಾಚಾಂದನಿಗಾದರೂ ತಿಳಿದಿತ್ತು. ಯಾವಳೊಬ್ಬ ತರುಣಿಯು ಪ್ರಣಯಪಂಕದಲ್ಲಿ ಗದಾಧರನು ಸಿಲುಕಿರುವನೆಂದು ಅವನು ತರ್ಕಿಸಿಕೊಂಡಿದ್ದನು. ಗದಾಧರನ ಪ್ರಣಯ ದೇವತೆಯು ಯಾವಳಿರಬಹುದೆಂಬದನ್ನು ತಿಳಿದುಕೊಳ್ಳುವದಕ್ಕೆ ಕಾಲಾಚಾಂದನು ಆತುರಗೊಂಡಿದ್ದನು; ಕೆಲವು ದಿನಗಳಿಂದ ಅವನಿಗೆ ಗದಾಧರನ ಭೆಟ್ಟಿಯೇ ಆಗದ್ದರಿಂದ ಅವನ ಕುತೂಹಲವು ಅವನ ಮನಸ್ಸಿನಲ್ಲಿಯೇ ಉಳಿದಿತ್ತು. ಇಂದು ಆಕಸ್ಮಾತ್ತಾಗಿ ಭೆಟ್ಟಿಯಾದ್ದರಿಂದ ಆ ವಿಷಯದ ಪ್ರಸ್ತಾಪ ತೆಗೆಯುವದಕ್ಕಾಗಿ ಕಾಲಾಚಾಂದನು ಪ್ರಯತ್ನ ನಡೆಯಿಸಿದನು. ಅವನು ಗದಾಧರನನ್ನು ಕುರಿತು—"ಗದಾಧರ, ಕೆಲವು ದಿನಗಳಿಂದ ನೀನು ಶ್ರೀಪುರಕ್ಕೆ ಮೇಲಿಂದ ಮೇಲೆ ಬರತೊಡಗಿರುವೆ. ಇಲ್ಲಿ ನೀನು ಯಾವ ರಮಣಿಯ ಪ್ರಣಯಕ್ಕೊಳಗಾಗಿರುವೆ?"

ಕಾಲಾಚಾಂದನಿಗೆ ಮುಚ್ಚು, ಮರೆ, ದಾಕ್ಷಿಣ್ಯ ಮೊದಲಾದವುಗಳು ಗೊತ್ತೇ ಇದ್ದಿಲ್ಲ. ಮನೋದಯವನ್ನು ಸ್ಪಷ್ಟವಾಗಿ ಆಡಿತೋರಿಸಲಿಕ್ಕೆ ಅವನು ಎಂದೂ ಅನುಮಾನಿಸುತ್ತಿರಲಿಲ್ಲ. ಅವನ ಸ್ವಭಾವವಾದರೂ ಗದಾಧರನಿಗೆ ಗೊತ್ತಿತ್ತು. ಕಾಲಾಚಾಂದನು ಎಲ್ಲ ವಿಷಯಗಳನ್ನು ತಿಳಿದಿರುವದರಿಂದ ಹೀಗೆ ಮಾತಾಡಿದನೆಂದು ಗದಾಧರನು ಭಾವಿಸಿದನು. ಆಗ ಅವನು ಕಾಲಾಚಾಂದನನ್ನು ಕುರಿತು—"ಕಾಲಾಚಾಂದರಾಯ, ನೀನು ನನ್ನ ಪ್ರಣಯದ ಪ್ರಸ್ತಾಪವನ್ನು ತೆಗೆದದ್ದರಿಂದ ನಿನ್ನ ವಿಷಯವಾಗಿ ನನ್ನಲ್ಲಿಯೂ ಸಂಶಯ ಬರತೊಡಗಿದೆ. ನೀನಾದರೂ ಪ್ರಣಯಾಪೇಕ್ಷೆಯಿಂದಲೆ ಇಲ್ಲಿಗೆ ಬಂದಿರುವೆಯೆಂದು ನಾನು ಯಾಕೆ ತಿಳಿಯಬಾರದು."

ಗದಾಧರನು ಅನುಮಾನದಿಂದ ಹೀಗೆ ನುಡಿದ ಕೂಡಲೆ ಕಾಲಾಚಾಂದನು ನಗುತ್ತ ನಗುತ್ತ:—"ನಾವಿಬ್ಬರೂ ಒಂದೇ ವ್ಯವಸಾಯದವ

ರಾದೆವು. ಇನ್ನು ಪರಸ್ಪರರ ಹೃದ್ಗತವನ್ನು ನಿವೇದಿಸಲಿಕ್ಕೆ ಯಾವ ಪ್ರತಿಬಂಧವೂ ಉಳಿಯಲಿಲ್ಲ.''

ಕಾಲಾಚಾಂದನು ಜಗನ್ಮೋಹಿನಿಯಾದ ವ್ರಜಬಾಲೆಗಾಗಿಯೇ ಯತ್ನಿಸುವವನಿರುವನೆಂಬದು ಗದಾಧರನಿಗ ತಿಳಿಯಿತು. ಕಾಲಾಚಾಂದನಂತಹ ತೇಜಸ್ವಿಯು ಅಂಥ ಇಂಥ ತರುಣಿಯರಿಗೆ ಮರುಳಾಗುವವನಲ್ಲವೆಂಬದು ಅವನಿಗೆ ಗೊತ್ತಿತ್ತು.

''ನೀನು ಯಾರ ಮನೆತನದೊಡನೆ ಶರೀರಸಂಬಂಧ ಮಾಡಲಪೇಕ್ಷಿತ್ತಿರುವೆಯೆಂಬದು ನನಗೆ ತಿಳಿಯಿತು.''

''ಹೇಳು ನೋಡುವಾ.''

''ರಾಧಾಮೋಹನನ ಕನ್ಯೆಯೊಡನೆ.''

''ನಿಜ.''

''ನೀನು ಭೂಪಬಾಲೆಯನ್ನು ವಿವಾಹವಾಗು.''

''ನೀನು ವ್ರಜಬಾಲೆಯನ್ನು ವರಿಸಬೇಕೆಂದು ನಿಶ್ಚಯಿಸಿರುವೆಯೇನು.'' ''ಅಹುದು.''

''ಈ ಮಾತು ನಿನಗೆ ಸಾಧ್ಯವಿಲ್ಲ.''

''ಅದೇಕೆ?'' ಗದಾಧರನು ವಿಸ್ಮಯದಿಂದ ಕೇಳಿದನು.

''ವ್ರಜಬಾಲೆಯನ್ನೇ ವಿವಾಹ ಮಾಡಿಕೊಳ್ಳಬೇಕೆಂದು ನಾನು ಪ್ರತಿಜ್ಞಾ ಮಾಡಿರುವೆನು.''

''ನೀನು ಎಂದು ಪ್ರತಿಜ್ಞಾ ಮಾಡಿರುವೆ?''

''ಅವಳನ್ನು ನೋಡಿದಾಗಿನಿಂದ.''

''ಸುಳ್ಳು; ತೀರ ಸುಳ್ಳು. ನಿನ್ನಲ್ಲಿ ಈ ಆಲೋಚನೆಯು ಹುಟ್ಟಿ ಸ್ವಲ್ಪ ದಿನಗಳಾಗಿರಬಹುದು. ನಿನ್ನೆ-ಮೊನ್ನೆ ನೀನು ಈ ವಿಚಾರದಲ್ಲಿ ತೊಡಗಿರುವೆ. ನಾನು ವ್ರಜಬಾಲೆಯ ಪ್ರಣಯ ಪಂಕದಲ್ಲಿ ಸಿಲುಕಿ ಬಹಳ ದಿನಗಳಾದವು.''

''ನೀನು ಸುಳ್ಳಾಡುವೆ. ವ್ರಜಬಾಲೆಯು ನನ್ನಲ್ಲಿ ಸ್ನೇಹವುಳ್ಳವಳಿರುವಳೆಂಬದರ ಬಗ್ಗೆ ನಾನು ಇದೀಗ ನಂಬಿಗೆ ಮಾಡಿಕೊಂಡಿರುವೆನು.''

"ಅವಳು ಏನು ಹೇಳಿದಳು?"

"ನನ್ನಲ್ಲಿ ಪ್ರೇಮವಿರುವದೆಂದು ಅವಳು ಸತ್ಯವನ್ನು ಸ್ಮರಿಸಿ ಹೇಳಿರುವಳು."

"ಯಾವ ವಿಧದ ಪ್ರೇಮವು?"

"ಪ್ರೇಮದಲ್ಲಿ ವಿವಿಧತೆ ಯಿರುವದೇನು?"

"ಬಂಧುಪ್ರೇಮ, ಪಿತೃಪ್ರೇಮ, ಮಾತೃಪ್ರೇಮ, ಭಗಿನೀ ಪ್ರೇಮ, ಪತಿಪ್ರೇಮ ಮೊದಲಾದ ಅನೇಕ ವಿಧದ ಪ್ರೇಮಗಳಿರುವವು."

"ನೀನಾಡಿದ ಮಾತಿನಲ್ಲಿಯ ಕಡೆಯ ಪ್ರೇಮವನ್ನೇ ಅವಳು ತಳೆದಿರುವಳು."

"ಇದು ಕೇವಲ ನಿನ್ನ ತರ್ಕಬುದ್ಧಿಯು."

"ಗದಾಧರ!"

"ಕಾಲಾಚಾಂದ!"

"ನೀನು ವ್ರಜಬಾಲೆಯ ಆಶೆಯನ್ನು ಬಿಡು."

"ವ್ರಜಬಾಲೆಯನ್ನು ವರಿಸುವ ಬಗ್ಗೆ ನಾನು ಪ್ರತಿಜ್ಞೆ ಮಾಡಿರುವೆನು. ಅವಳಾದರೂ ನನ್ನಂತೆ ಪ್ರತಿಜ್ಞಾಬದ್ಧಳಾಗಿರುವಳು."

"ಗದಾಧರ, ನೀನು ಸುಳ್ಳಾಡತೊಡಗಿರುವೆ."

"ಈ ಗದಾಧರನು ಅಸತ್ಯವಾದಿಯಲ್ಲ."

"ವ್ರಜಬಾಲೆಯಾಡಿದ ಮಾತುಗಳ ಮೇಲಿಂದ ನೋಡಲಾಗಿ ಅವಳು ನನ್ನಲ್ಲಿ ಅನುರಕ್ತಳಾಗಿರುವಳೆಂಬದು ನನಗೆ ತಿಳಿದಿದೆ. ಅಂತೆಯೇ ನಾನು ಅವಳನ್ನು ವರಿಸುವದಕ್ಕಾಗಿ ದೃಢಸಂಕಲ್ಪ ಮಾಡಿಕೊಂಡಿರುವೆನು. ಗದಾಧರ, ನೀನು ನಿನ್ನ ಪ್ರತಿಜ್ಞೆಯನ್ನು ಮರೆ."

"ನೀನೇ ಮರೆತರೆ ಒಳ್ಳೆಯದಲ್ಲವೆ?"

"ಕಾಲಾಚಾಂದನು ಎಂದೂ ಪ್ರತಿಜ್ಞಾಭಂಗ ಮಾಡಿಕೊಳ್ಳುವದಿಲ್ಲ. ಕೈಕೊಂಡ ಕಾರ್ಯವನ್ನು ಕೊನೆಗಾಣಿಸದೆ ಬಿಟ್ಟದ್ದನ್ನು ನೀನು ಎಂದಾದರೂ ನೋಡಿರುವೆಯೇನು?"

"ನಾನು ನಿನಗಿಂತ ಮುಂಚಿತವಾಗಿ ವ್ರಜಬಾಲೆಯ ಪ್ರೇಮಕ್ಕೊಳ

ಗಾಗಿರುವೆನು. ನೀನು ಮಿತ್ರನ ಸಲುವಾಗಿ ನಿನ್ನ ಪ್ರತಿಜ್ಞೆಯನ್ನು ಮರೆ.''

"ಇಲ್ಲ; ನಾನು ನನ್ನ ಪ್ರತಿಜ್ಞೆಯನ್ನು ಎಂದೂ ಮರೆಯುವದಿಲ್ಲ. ಬರೇ ಮಿತ್ರನ ಸಲುವಾಗಿಯೋ ಏಕೆ, ವಂಗ ಸಿಂಹಾಸನದ ಸಲುವಾಗಿಯಾದರೂ ನಾನು ನನ್ನ ಸಂಕಲ್ಪವನ್ನು ಬಿಡಲಾರೆನು.''

"ಕಾಲಾಚಾಂದರಾಯ, ವ್ರಜಬಾಲೆಯಲ್ಲಿ ನೀನು ಅನುರಾಗವುಳ್ಳವನಾಗಿರಬಹುದು; ಆದರೆ ವ್ರಜಬಾಲೆಯು ನಿನ್ನಲ್ಲಿ ಪ್ರಣಯವುಳ್ಳವಳಿರುವಳೆಂಬದರ ಬಗ್ಗೆ ನೀನು ಚನ್ನಾಗಿ ಮನವರಿಕೆ ಮಾಡಿಕೋ. ವೃಥಾ ಈರ್ಷೆಗೆ ಬೀಳಬೇಡ.''

"ನನ್ನ ಮನಸ್ಸಿಗೆ ಎಲ್ಲ ಸಂಗತಿಗಳ ನಂಬಿಗೆಯಾಗಿರುವದು. ನೀನು ಭ್ರಾಂತನಿರುವೆ. ವ್ರಜಬಾಲೆಯು ನಿನ್ನನ್ನು ಪ್ರೀತಿಸುತ್ತಿರುವದಿಲ್ಲ. ಹೀಗಿದ್ದರೂ ಪ್ರಣಯ ಮೂಢನಾಗಿರುವೆ. ಅವಳು ನಿನ್ನನ್ನು ನಿಜವಾಗಿ ಪ್ರೀತಿಸುತ್ತಿದ್ದರೆ ನನ್ನ ವಿಷಯವಾಗಿ ಪ್ರೇಮಾಭಿನಯ ಮಾಡುತ್ತಿದ್ದಿಲ್ಲ.''

"ವ್ರಜಬಾಲೆಯು ನನ್ನನ್ನು ಚನ್ನಾಗಿ ಪ್ರೀತಿಸುತ್ತಿರುವಳೆಂಬದೂ ನನ್ನನ್ನು ವಿವಾಹವಾಗುವ ಬಗ್ಗೆ ತನ್ನ ಅಭಿಪ್ರಾಯವನ್ನು ತಿಳಿಸಿರುವದೂ ನನ್ನ ಸ್ಮರಣೆಯಲ್ಲಿರುವವು. ಅವಳು ನಿನ್ನಲ್ಲಿ ಪ್ರೇಮವುಳ್ಳವಳಾಗುವದು ತೀರ ಅಸಂಭವವಿರುವದು. ಒಂದುವೇಳೆ ನಿನ್ನ ಮಾತು ನಿಜವೆಂದು ಭಾವಿಸಿದರೆ ಅವಳು ವ್ಯಭಿಚಾರಿಣಿಯೆಂದು ಕೈಯೆತ್ತಿ ಹೇಳುವೆನು. ಆಯಾ ತರುಣಿಯು ಮನಬಂದವರನ್ನು ಪ್ರೀತಿಸುತ್ತ ಹೋದರೆ, ಅವಳಿಗೆ ವ್ಯಭಿಚಾರಿಣಿಯೆಂದು ಯಾರಾದರೂ ಅನ್ನಬಹುದು.''

"ಗದಾಧರ, ಬಾಯಿ ಬಿಗಿಹಿಡಿದು ಮಾತನಾಡು!'' ಎಂದು ಕಾಲಾಚಾಂದನು ತನ್ನ ಖಡ್ಗವನ್ನು ಒರೆಯಿಂದ ಹಿರಿದು:—"ನನ್ನ ಪ್ರಣಯ ದೇವತೆಗೆ ವ್ಯಭಿಚಾರಿಣಿಯೆಂದು ಹೆಸರಿಟ್ಟವರನ್ನು ಈ ಕಾಲಾಚಾಂದನು ಎಂದೂ ಜೀವಂತವಾಗಿ ಉಳಿಸಲಿಕ್ಕಿಲ್ಲ!''

"ನೀನು ನನ್ನನ್ನು ಹೊಡೆಯುವೆಯಾ? ಅವಶ್ಯವಾಗಿ ಹೊಡೆ. ನನ್ನಲ್ಲಿ ಪ್ರೇಮವಿಟ್ಟ ವ್ರಜಬಾಲೆಯು ನಿನ್ನಲ್ಲಿ ಪ್ರಣಯವುಳ್ಳವಳಾಗಿದ್ದರೆ, ಅವಳು

ವ್ಯಭಿಚಾರಿಣಿಯೆಂದು ಒಮ್ಮೆಯಲ್ಲವೆಂದರೆ ಸಾವಿರ ಬಾರಿ ಅನ್ನುವೆನು.''

''ಗದಾಧರ, ನಿನ್ನನ್ನು ವರಿಸುವೆನೆಂದು ವ್ರಜಬಾಲೆಯು ವಚನ ಕೊಟ್ಟಿರುವಳೇನು?''

''ನಾನು ಹೇಗೆ ಪ್ರತಿಜ್ಞಾಬದ್ಧನಾಗಿರುವೆನೋ, ಅದರಂತೆ ವ್ರಜ ಬಾಲೆಯೂ ಪ್ರತಿಜ್ಞೆ ಮಾಡಿರುವಳು.''

''ಈ ಮಾತು ತೀರ ಸುಳ್ಳು''

''ಗದಾಧರನ ಮುಖದಿಂದ ಅಸತ್ಯ ಭಾಷಣವು ಎಂದೂ ಹೊರಡ ಲಾರದು.'' ಎಂದು ಗದಾಧರನು ನುಡಿದು:—''ಕಾಲಾಚಾಂದ, ರಾಧಾ ಮೋಹನರಾದರೂ ಅವಳನ್ನು ನನಗೆ ಅರ್ಪಿಸಬೇಕೆಂದು ಸಿದ್ಧರಾಗಿ ರುವರು.''

''ಅವಳ ತಂದೆಯನ್ನು ಯಾರು ಕೇಳಬೇಕು? ಬಡಬ್ರಾಹ್ಮಣನಾದ ರಾಧಾಮೋಹನನಿಗೆ ದುಡ್ಡಿನಾಶೆ ಹಚ್ಚಿದರೆ, ವ್ರಜಬಾಲೆಯನ್ನು ತಲೆಯ ಮೇಲೆ ಹೊತ್ತುಕೊಂಡು ಒರುವನು.''

''ದುಡ್ಡಿನ ಬಲದಿಂದಲಾದರೂ ನೀನು ವ್ರಜಬಾಲೆಯನ್ನು ವರಿಸ ಬೇಕೆಂದು ನಿಶ್ಚಯಿಸಿರುವೆಯೇನು?''

''ಹೇಗಾದರೂ ಮಾಡಿ ಅವಳನ್ನು ವರಿಸಬೇಕೆಂದೇ ನಾನು ದೃಢ ಸಂಕಲ್ಪ ಮಾಡಿಕೊಂಡಿರುವೆನು.''

''ನಾನಾದರೂ ಹಾಗೆಯೇ ಪ್ರತಿಜ್ಞೆ ಮಾಡಿರುವೆನೆಂಬದನ್ನು ನೀನು ಮರೆಯಬೇಡ.''

''ಗದಾಧರ, ಯಾರ ಪ್ರತಿಜ್ಞೆಯು ನಿಜವಾಗುವದೋ ನೋ- ಡೋಣ.''

''ಕಾಲಾಚಾಂದ, ನಾನು ನಿನ್ನ ಸಮಕ್ಷವಾಗಿ ಇನ್ನೊಂದು ಪ್ರತಿಜ್ಞೆ ಮಾಡುವೆನು.''

''ಅದೇನು?''

''ವ್ರಜಬಾಲೆಯು ನಿನ್ನನ್ನು ವರಿಸುವದಿಲ್ಲ. ಒಂದುವೇಳೆ ಯಾವ ಕಾರಣದಿಂದಲಾದರೂ ಅವಳು ನಿನ್ನನ್ನು ವರಿಸಿದರೆ ನಾನು ಆಜನ್ಮವಾಗಿ

ಅವಿವಾಹಿತನಾಗಿರುವೆನು.''

''ಗದಾಧರ!''

''ಮತ್ತೇನು ಕಾಲಾಚಾಂದ?''

''ನೀನು ಪ್ರತಿಜ್ಞೆ ಮಾಡಿ ಕೆಟ್ಟೆ.''

''ಅದೇಕೆ?''

''ಈ ಕಾಲಾಚಾಂದನು ಸ್ವೀಕೃತ ಕಾರ್ಯವನ್ನು ಕೊನೆಗಾಣಿಸದೆ ಬಿಡುವವನಲ್ಲ. ಈಗ ನಾನಾದರೂ ನಿನ್ನ ಸಮಕ್ಷಮವಾಗಿಯೇ ಪ್ರತಿಜ್ಞೆ ಮಾಡುವೆನು.....''

''ಬೇಡ; ಕಾಲಾಚಾಂದ, ನೀನು ಪ್ರತಿಜ್ಞೆ ಮಾಡಿ ಕೆಡಬೇಡ. ವ್ರಜಬಾಲೆಯು ನಿನ್ನ ವಶಳಾಗಲಾರಳು.''

''ಗದಾಧರ, ನಾನು ವ್ರಜಬಾಲೆಯನ್ನು ವರಿಸದಿದ್ದರೆ ಕಾಲಾಚಾಂದನೇ ಅಲ್ಲ. ಅವಳು ನನ್ನ ಪಾಣಿಗ್ರಹಣ ಮಾಡದಿದ್ದರೆ ನಾನಾದರೂ ಕಡೆತನಕ ಅವಿವಾಹಿತನೇ ಆಗಿರುವೆನು. ಇದೇ ನನ್ನ ಪ್ರತಿಜ್ಞೆಯು!''

ಈರ್ಷೆಗೆ ಬಿದ್ದ ಕಾಲಾಚಾಂದನೊಡನೆ ಮಾತು ಒಳೆಯಿಸದೆ ಗದಾಧರನು ವೀರಜಾವನದ ದಾರೀ ಹಿಡಿದನು; ಅನಂತರದಲ್ಲಿ ಕಾಲಾಚಾಂದನು ಶ್ರೀಪುರವನ್ನು ಪ್ರವೇಶಿಸಿದನು.

ಕಾಲಾಚಾಂದನು ಶ್ರೀಪುರವನ್ನು ಹೊಕ್ಕ ಮೇಲೆ ಏನು ಮಾಡಿದನು?

---

## ನನ್ನ ದುರ್ದೈವ!

ಗದಾಧರನು ತನ್ನ ಪ್ರತಿಸ್ಪರ್ಧಿಯಾಗಿರುವನೆಂಬದು ತಿಳಿದಾಗಿನಿಂದ ವ್ರಜಬಾಲೆಯನ್ನು ವಿವಾಹವಾಗುವ ವಿಷಯದಲ್ಲಿ ಕಾಲಾಚಾಂದನು ಮತ್ತಿಷ್ಟು ಈರ್ಷೆಗೊಂಡನು. ರಾಧಾಮೋಹನನಿಗೆ ಭೆಟ್ಟಿಯಾಗಿ ತನ್ನ ಮನೋದಯವನ್ನು ತಿಳಿಸಿ, ಆದಷ್ಟು ಬೇಗನೆ ಈ ಶುಭಕಾರ್ಯವನ್ನು ನೆರವೇರಿಸಿ ಬಿಡಬೇಕೆಂದು ಅವನು ನಿಶ್ಚಯಿಸಿಕೊಂಡನು. ಕಾಲಾಚಾಂದನು ಬಂದಾಗ ರಾಧಾಮೋಹನನು ಮನೆಯಲ್ಲಿಯೇ ಇದ್ದನು.

ಮನೆಗೆ ಬಂದೊಡನೆಯೆ ಕಾಲಾಚಾಂದನು ಅವನನ್ನು ಕುರಿತು—

"ರಾಧಾಮೋಹನರೆ, ಇಂದು ನಾನು ಯಾವ ಉದ್ದೇಶದಿಂದ ಬಂದಿರುವೆನೆಂಬುದು ನಿಮಗೆ ಗೊತ್ತಿರುವದೇನು?"

"ನಿನ್ನ ಹೃದ್ಗತವು ನನಗೆ ಹೇಗೆ ತಿಳಿಯಬೇಕು?" ಎಂದು ರಾಧಾಮೋಹನನು ನುಡಿದು, ಉತ್ಕಂಠಿತನಾಗಿ:—"ಕಾಲಾಚಾಂದರಾಯ, ನೀನು ಇಲ್ಲಿಗೆ ಯಾವ ಉದ್ದೇಶದಿಂದ ಬಂದಿರುವೆ?"

ಕಾಲಾಚಾಂದನು ಸರಳವಾದ ಮನಸ್ಸಿನವನು. ಯಾವದೊಂದು ವಿಷಯವನ್ನು ಬಾಯಿಂದ ಬಿಡಿ ತೋರಿಸುವದಕ್ಕಿಂತ ಪರ್ಯಾಯದಿಂದ ತಿಳಿಸಿದರೆ ಸದಾಚಾರಕ್ಕೆ ಯೋಗ್ಯವೆನಿಸುವದೆಂಬದನ್ನು ಅವನು ಅರಿತಿರಲಿಲ್ಲ. ಪರ್ಯಾಯದಿಂದ ಹೇಳುವದಕ್ಕಿಂತ ಸ್ಪಷ್ಟವಾಗಿ ಬಿಡಿ ತೋರಿಸುವದೇ ನಿಸ್ಪೃಹತೆಯ ಲಕ್ಷಣವೆಂದು ಅವನ ಭಾವನೆಯಿತ್ತು. ಆಗ ಅವನು ರಾಧಾಮೋಹನನನ್ನು ಕುರಿತು—"ನಾನು ನಿಮ್ಮ ಕುಮಾರಿಯನ್ನು ವಿವಾಹವಾಗಬೇಕೆಂದು ಇಲ್ಲಿಗೆ ಬಂದಿರುವೆನು."

ಕಾಲಾಚಾಂದನ ಮಾತುಗಳನ್ನು ಕೇಳಿ ರಾಧಾಮೋಹನನಿಗೆ ವಿಸ್ಮಯವಾಯಿತು. ಆ ವಿಸ್ಮಯದೊಡನೆ ಅವನಿಗೆ ಪರಮಾವಧಿಯಾದ ಆನಂದವೂ ಆಯಿತು. ತನ್ನ ಪುತ್ರಿಯಾದ ಭೂಪಬಾಲೆಯು ಸುದೈವದಿಂದಲೆ ಶ್ರೀಮಂತನಾದ ಅಳಿಯನು ದೊರೆಯುವ ಸಂಧಿಯು ಪ್ರಾಪ್ತವಾಯಿತೆಂದು ಅವನು ಹರುಷಾಬ್ಧಿಯಲ್ಲಿ ಮುಳುಗಿದನು.

"ಕಾಲಾಚಾಂದರಾಯ!" ರಾಧಾಮೋಹನನು ಆನಂದೋದ್ರೇಕದಿಂದ:—"ನಿನ್ನಂತಹ ಅಳಿಯನು ದೊರೆಯಬೇಕಾದರೆ ಭಾಗ್ಯವು ಬೇಕು. ನಾನು ಆನಂದದಿಂದ ನಿನಗೆ ನನ್ನ ಮಗಳನ್ನು ಕೊಡುವೆನು!"

"ಎಂದು ವಿವಾಹ ಮಾಡಿಕೊಡಬೇಕೆನ್ನುವಿರಿ?"

"ಆದಷ್ಟು ಬೇಗನೆ ವಿವಾಹ ಮುಹೂರ್ತವನ್ನು ನಿಶ್ಚಯಿಸುವೆನು."

"ನಾಳೆಗೇ ವಿವಾಹವಾಗಿ ಹೋಗಲಿ."

"ಕಾಲಾಚಾಂದರಾಯ!" "ಮತ್ತೇನು?"

ನಾಳೆಗೇ ಹೇಗೆ ವಿವಾಹವನ್ನು ನೆರವೇರಿಸಬೇಕು? ಇದೇನು

ಗೊಂಬೆಯು ಮದುವೆಯೆ?"

"ದಿನಾವಧಿ ಮಾಡುವಂತಿಲ್ಲ. 'ಶುಭಸ್ಯ ಶೀಘ್ರಂ' ನಾಳೆಗೇ ವಿವಾಹ ವಾಗಿ ಹೋಗಲಿ."

"ನಾನು ಇಬ್ಬರು ಕನ್ನಿಕೆಯರ ವಿವಾಹವನ್ನು ಒಮ್ಮೆಲೆ ನೆರವೇರಿಸಬೇಕೆಂದಿರುವೆನು. ಎಲ್ಲ ಬಗೆಯ ಅನುಕೂಲತೆಗಳಾಗಬೇಕಾದರೆ ನಾಲ್ಕೆಂಟು ದಿನಗಳ ಅವಧಿಯಾದರೂ ಬೇಡವೆ?"

"ಒಣ ಆಡಂಬರದ ಮದುವೆಯನ್ನು ಮಾಡುವದು ಬೇಡ. 'ಸುಮುಹೂರ್ತೇ ಸಾವಧಾನ' ಎಂದೆನ್ನಲಿಕ್ಕೆ ನಾಲ್ಕೆಂಟು ದಿನಗಳೇಕೆ ಬೇಕು? ಕೆಲವು ನಿಮಿಷಗಳಾದರೆ ಸಾಕು; ಮದುವೆಯಾಗಿ ಹೋಗುವದು."

"ಕಾಲಾಚಾಂದ," ರಾಧಾಮೋಹನನು ಗಹಗಹಿಸಿ ನಗುತ್ತ: "ನೀನು ಒಳ್ಳೇ ವಿಚಿತ್ರ ಮನುಷ್ಯನಿರುವೆ. ನಿನ್ನ ಅವಸರಕ್ಕೆ ಇನ್ನೊಬ್ಬ ವರನು ಸಿದ್ಧನಾಗಬೇಕಲ್ಲವೆ? ಆಗಲಿ. ಈಗ ನಾನು ನಿನ್ನ ಮದುವೆಯನ್ನು ಈಡೇರಿಸುವೆನು. ಇನ್ನೊಂದನ್ನು ಯಥಾವಕಾಶದಿಂದ ಮಾಡಲಿಕ್ಕೆ ಬಂದೀತು."

"ನಿಮ್ಮ ಇನ್ನೊಬ್ಬ ಅಳಿಯನಾರು!"

"ಗದಾಧರನು."

"ಏನು, ಗದಾಧರನೆ?"

"ಹೌದು."

"ಅವನು ಭೂಪಬಾಲೆಯನ್ನು ವರಿಸಲೊಪ್ಪಿರುವನೆ? ಆಶ್ಚರ್ಯವು! ವಸ್ತುಸ್ಥಿತಿಯು ಹೀಗಿದ್ದರೂ ಅವನು ನನ್ನನ್ನು ಅನೃತಭಾಷಣಗಳಿಂದ ಮೋಸಗೊಳಿಸಿದನು. ರಾಧಾಮೋಹನರೆ, ನೀವು ಹಿರಿಯಳ ವಿವಾಹವನ್ನು ನೆರವೇರಿಸುವದಕ್ಕಿಂತ ಮೊದಲು ಚಿಕ್ಕವಳ ವಿವಾಹವನ್ನು ಹೇಗೆ ಮಾಡುವಿರಿ? ಇದು ವ್ಯವಹಾರ ವಿರೋಧವಲ್ಲವೆ? ಗದಾಧರನನ್ನು ಇಂದೇ ಕರೆಸಿರಿ. ನಾಳೆಗೆ ಮಂಗಲಕಾರ್ಯವು ನೆರವೇರಿ ಹೋಗಲಿ."

ಕಾಲಾಚಾಂದನು ಭೂಪಬಾಲೆಯನ್ನು ವರಿಸಲೊಪ್ಪಿರುವನೆಂದು ರಾಧಾಮೋಹನನು ಇದುವರೆಗೆ ಭಾವಿಸಿದ್ದನು. ಅವನು ಹಾಗೆ ಭಾವಿಸಲಿಕ್ಕೆ

ಸಬಲವಾದ ಕಾರಣವೂ ಇತ್ತು. ಗದಾಧರನು ವ್ರಜಬಾಲೆಯಲ್ಲೇ ಅನುರಾಗ ವುಳ್ಳವನಾಗಿರುವದು ಸರ್ವಶ್ರುತವಾದ ಮಾತಾಗಿತ್ತು. ಇಷ್ಟಲ್ಲದೆ ರಾಧಾ ಮೋಹನನಾದರೂ ಅವಳನ್ನು ಗದಾಧರನಿಗೆ ಧಾರೆಯೆರೆದು ಕೊಡುವದನ್ನು ನಿಶ್ಚಯಿಸಿದ ಸಂಗತಿಯಾದರೂ ಮುಚ್ಚುಮರೆಯಾಗಿದ್ದಿಲ್ಲ. ಈ ಸಂಗ ತಿಯು ಎಲ್ಲರಂತೆ ಕಾಲಾಚಾಂದನಿಗೂ ಗೊತ್ತಿರಬಹುದೆಂದು ರಾಧಾ ಮೋಹನನು ತಿಳಿದಿದ್ದನು. ಕಾಲಾಚಾಂದನು ಭೂಪಬಾಲೆಯ ಹೆಸರು ತೆಗೆದುಕೊಳ್ಳಲಾರದೆ ಸಂದಿಗ್ಧವಾಗಿ ಕೇಳಿದನೆಂದು ಅವನು ತಿಳಿದಿದ್ದನು. ಕಾಲಾಚಾಂದನಾಡಿದ ಮಾತಿನಿಂದ ಅವನ ಆಭ್ರಾಂತಿಯು ಪೂರಾ ಬಯ ಲಾಯಿತು. ಅವನಾದರೂ ವ್ರಜಬಾಲೆಯ ಪ್ರಾಪ್ತಿಗಾಗಿಯೇ ಧಾವಿಸು ತ್ತಿರುವನೆಂಬದು ತಿಳಿದ ಕೂಡಲೆ, ರಾಧಾಮೋಹನನು ನಿರುತ್ಸಾಹಿಯಾ ದನು. ಭೂಪಬಾಲೆಯ ದೈವದಲ್ಲಿ ಚಲೋ ವರವು ದೊರೆಯುವದಿರ ಲಿಕ್ಕಿಲ್ಲವೆಂದು ಆತನು ತಿಳಿದನು. ಕಾಲಾಚಾಂದನಿಗೆ ಏನು ಉತ್ತರ ಕೊಡಬೇಕೆಂಬದು ತೋಚದೆ, ರಾಧಾಮೋಹನನು ಉದಾಸೀನ ಮನಸ್ಕ ನಾಗಿ ಕುಳಿತನು. ತನ್ನ ಭಾವೀ ಶ್ವಶುರನು ಮಾತನಾಡದೆ ಕುಳಿತದ್ದನ್ನು ನೋಡಿ ಕಾಲಾಚಾಂದನಿಗೆ ವಿಸ್ಮಯುವಾಯಿತು. ತಾನು ಲಗ್ನಕ್ಕಾಗಿ ಅವ ಸರಪಡತೊಡಗಿದ್ದರಿಂದ ರಾಧಾಮೋಹನನು ವಿಚಾರಕ್ಕೊಳಗಾಗಿರುವ ನೆಂದು ಅವನ ಗ್ರಹಿಕೆಯಾಯಿತು.

"ರಾಧಾಮೋಹನರೆ, ನಾಳೆಗೆ ಲಗ್ನಕಾರ್ಯವನ್ನು ನೆರವೇರಿಸುವ ದಕ್ಕಾಗಿ ನೀವು ಇಷ್ಟೇಕೆ ವಿಚಾರಿಸುವಿರಿ?"

"ಕಾಲಾಚಾಂದರಾಯ, ವಿವಾಹವನ್ನು ನಾಳೆಗೇ ಮಾಡಲಿಕ್ಕೆ ಬಂದೀತು. ಈ ಮಾತಿಗಾಗಿ ನಾನು ವಿಚಾರಕ್ಕೊಳಗಾಗಿಲ್ಲ."

"ಮತ್ತಾವ ವಿಷಯವು ನಿಮ್ಮನ್ನು ಬಾಧಿಸುತ್ತಲಿರುವದು."

"ನೀನು ವ್ರಜಬಾಲೆಯನ್ನು ವಿವಾಹವಾಗಬೇಕೆಂದು ಇಚ್ಛಿಸುವೆ ಯೇನು?"

"ಹೌದು; ನಾನು ವ್ರಜಬಾಲೆಯನ್ನೇ ವರಿಸಲು ಆತುರಗೊಂಡಿ ರುವೆನು."

"ಅವಳನ್ನು ಗದಾಧರನಿಗೆ ಕೊಡಬೇಕೆಂದು ನಾನು ಸಂಕಲ್ಪ ಮಾಡಿಕೊಂಡಿರುವೆನು."

"ರಾಧಾಮೋಹನರೆ, ನಾನು ಭೂಪಬಾಲೆಗಾಗಿ ಇಷ್ಟು ಆತುರ ನಾಗಿ ಬಂದಿಲ್ಲ. ನನಗೆ ವ್ರಜಬಾಲೆಯನ್ನು ಧಾರೆಯೆರೆದು ಕೊಡುವಿರೊ-ಇಲ್ಲವೊ?"

"ಕಾಲಾಚಾಂದರಾಯ, ನಿನ್ನಂತಹ ಶ್ರೀಮಂತನೂ ತೇಜಸ್ವಿಯೂ ಆದ ತರುಣನಿಗೆ ಯಾವನು ತನ್ನ ಕನ್ನಿಕೆಯನ್ನು ಕೊಡಲಿಕ್ಕಿಲ್ಲ? ವ್ರಜ ಬಾಲೆಯನ್ನು ನಿನಗೆ ಈಗ ಕೊಡಲಿಕ್ಕೆ ಬರುವಂತಿಲ್ಲ."

"ಅದೇಕೆ?"

"ಕಾರಣವನ್ನು ಇದೀಗ ಹೇಳಿದೆನಲ್ಲವೆ?"

"ಏನು? ನೀವು ವ್ರಜಬಾಲೆಯನ್ನು ಗದಾಧರನಿಗೆ ಕೊಡುವಿರಾ? ನನಗೆ ಕೊಡುವದಿಲ್ಲವೆ? ನಿಮ್ಮ ಮಗಳ ಮನಸ್ಸಿನ ವಿರುದ್ಧವಾಗಿ ನೀವು ಅವಳ ವಿವಾಹವನ್ನು ಮಾಡಲೆತ್ನಿಸುವಿರಾ?"

"ವ್ರಜಬಾಲೆಯು ಗದಾಧರನಲ್ಲಿ ಪ್ರೇಮವುಳ್ಳವಳಾಗಿರುವಳೆಂಬ ಸಂಗತಿಯು ನನಗೆ ತಿಳಿದಿರುವದು."

"ಸುಳ್ಳು! ತೀರ ಸುಳ್ಳು! ಆವಳು ನನ್ನಲ್ಲಿ ಪ್ರೇಮವುಳ್ಳವಳಿರುವ ಳೆಂಬದು ನನ್ನ ಮನವರಿಕೆಯಾದದ್ದರಿಂದಲೆ, ನಾನು ನಿಮ್ಮ ಮುಂದೆ ವಿವಾ ಹದ ಪ್ರಸ್ತಾಪವನ್ನೆತ್ತಿದೆನು."

"ನಾನು ವಚನಬದ್ಧನಾಗಿರುವೆನು. ಈಗ ಮಾತು ಹೇಗೆ ಮುರಿ ಯಲಿ?"

"ಮಗಳ ಮನಸ್ಸನ್ನು ಮುರಿಯುವದಕ್ಕಿಂತ ಮಾತು ಮುರಿಯು ವದು ಉಚಿತವಲ್ಲವೆ?"

"ಹಾಗೆ ಮಾಡಲಿಕ್ಕೆ ನನಗೆ ಸಾಧ್ಯವಿಲ್ಲ."

"ನೀವು ಮಾಡಬೇಕೆಂದಿರುವ ಒತ್ತಾಯದ ವಿವಾಹದ ಪರಿಣಾ ಮವು ಅನಿಷ್ಟವಾಗುವದೆಂದು ನಾನು ಸಾರಿ ಸಾರಿ ಹೇಳುವೆನು. ರಾಧಾ ಮೋಹನ, ವ್ರಜಬಾಲೆಯನ್ನು ವಿವಾಹವಾಗುವ ಬಗ್ಗೆ ನಾನು ಪ್ರತಿಜ್ಞಾ

ಮಾಡಿರುವೆನು. ಎಲ್ಲ ವಿಷಯುಗಳನ್ನು ಚನ್ನಾಗಿ ಪರಿಶೀಲಿಸಿ ಕಾರ್ಯ ಮಾಡಿರೆಂದರಾಯಿತು.''

''ವ್ರಜಬಾಲೆಯು ಗದಾಧರನನ್ನು ಬಿಟ್ಟು ನಿನ್ನನ್ನು ವರಿಸಲೊಪ್ಪಿದರೆ ನನ್ನದೇನೂ ಅಡ್ಡಿಯಿಲ್ಲ.''

''ನಿಮ್ಮ ಮಗಳು ನನ್ನಲ್ಲಿ ಪ್ರೇಮವುಳ್ಳವಳಿದ್ದ ಬಗ್ಗೆ ನನಗೆ ನಂಬಿಗೆಯಾಗಿರುವದು. ಅವಳಾದರೂ ತನ್ನ ಮನೋಗತವನ್ನು ನನಗೆ ಸ್ಪಷ್ಟವಾಗಿ ಆಡಿ ತೋರಿಸಿರುವಳು. ಈಗ ಅವಳು ಯಾವದಾದರೊಂದು ಭಯದಿಂದಾಗಲಿ, ಯಾವದೇ ಬಗೆಯ ಮುರವತ್ತುಗಳಿಂದಾಗಲಿ ನನ್ನನ್ನು ವರಿಸಲಿಕ್ಕೆ ಅಸಮ್ಮತಿಯನ್ನು ವ್ಯಕ್ತಪಡಿಸಿದರೆ ನಾನು ಮಾಡುವದೇನು? ಅವಳು ತನ್ನ ಮನೋಗತವನ್ನು ತಿಳಿಸಿದ ಮೇಲೆಯೇ ನಾನು ಪ್ರತಿಜ್ಞಾಬದ್ಧನಾಗಿರುವೆನು. ಈ ಕಾಲಾಚಾಂದನು ಪ್ರತಿಜ್ಞಾಭಂಗದೋಷಕ್ಕೆ ಎಂದೂ ಗುರಿಯಾಗುವವನಲ್ಲ. ನೀವು ಎಲ್ಲ ಬಗೆಯ ವಿಚಾರ ಮಾಡಿ ಕರ್ತವ್ಯತತ್ಪರರಾಗಿರಿ. ಅವಿಚಾರದಿಂದ ಕಾರ್ಯ ಮಾಡಿದರೆ ಹಿಂದಿನಿಂದ ಪಶ್ಚಾತ್ತಾಪಬಡಬೇಕಾಗುವದೆಂಬದನ್ನು ನೀವು ಮರೆಯಬೇಡಿರಿ. ರಾಧಾಮೋಹನರೆ, ಈ ಕಾಲಾಚಾಂದನು ಸ್ವೀಕೃತ ಕರ್ತವ್ಯವನ್ನು ಕೊನೆಗಾಣಿಸುವಾಗ ಜೀವದ ಪರಿವೆಯನ್ನು ಸಹ ಬಿಡುವನೆಂಬ ಮಾತು ಪರಿಚಿತರಾದ ನಿಮಗೆ ಗೊತ್ತೇ ಇರುವದು.''

ಕಾಲಾಚಾಂದನ ಮಾತುಗಳನ್ನು ಕೇಳಿ ರಾಧಾಮೋಹನನ ಮನಸ್ಸು ಬಹಳೇ ಗೊಂದಲದಲ್ಲಿ ಬಿದ್ದಿತು. ತಾನು ವ್ರಜಬಾಲೆಯನ್ನು ಕೊಡದಿದ್ದರೆ ಈರ್ಷೆಯುವನೂ, ಸಂತಾಪಿಯೂ ಆದ ಕಾಲಾಚಾಂದನು ಎಂತಹ ಅನರ್ಥಗಳನ್ನಾದರೂ ಉಪಸ್ಥಿತ ಮಾಡಲಿಕ್ಕೆ ಹಿಂಜರಿಯುವವನಲ್ಲವೆಂಬ ಮಾತು ಅವನಿಗೆ ಗೊತ್ತಾಗಿತ್ತು. ವ್ರಜಬಾಲೆಯು ಗದಾಧರನಲ್ಲಿ ಅನುರಕ್ತಳಾಗಿರುವಳೆಂಬದನ್ನಾದರೂ ಅವನು ತಿಳಿದಿದ್ದನು. ಕಾಲಾಚಾಂದನ ಹೆದರಿಕೆಗಾಗಿ ಮಗಳ ಮನಸ್ಸನ್ನೂ ತನ್ನ ವಚನವನ್ನೂ ಮುರಿಯುವದೆಂದರೆ ಅವನಿಗೆ ಜೀವದ ಸುತ್ತು ಬಂದಂತಾಗಿತ್ತು. ಗದಾಧರನಿಗೆ ವ್ರಜಬಾಲೆಯನ್ನು ಕೊಡುವದು ನಿಶ್ಚಿತವಾಗುವದಕ್ಕಿಂತ ಮುಂಚಿತ

ವಾಗಿ ಕಾಲಾಚಾಂದನು ಈ ಪ್ರಸ್ತಾಪವನ್ನು ತೆಗೆದಿದ್ದರೆ ಆ ಮಾತಿಗೆ ರಾಧಾಮೋಹನನು ಅತ್ಯಾನಂದದಿಂದ ಒಪ್ಪುತ್ತಿದ್ದನು. ಮಾತು ಮೀರಿ ಹೋದ ಮೇಲೆ ಅದನ್ನು ಮತ್ತೆ ತಿರುಗಿಸಿದರೆ, ಜನರ ಉಪಹಾಸಕ್ಕೆ ಕಾರಣವಾಗುವೆನೆಂಬ ಭಯವಾದರೂ ಅವನಿಗೆ ಒಳಿತಾಗಿತ್ತು. ಅವನು ಕೆಲವು ವೇಳೆಯವರೆಗೆ ನಾನಾ ವಿಧವಾಗಿ ವಿಚಾರಿಸಿದ ಮೇಲೆ—"ಕಾಲಾಚಾಂದರಾಯ, ನೀನು ಭೂಪಬಾಲೆಯನ್ನು ವರಿಸಿಕೊಂಡರೆ ನಿನಗೇ ಹಿತವಾಗುವದು."

"ಯಾರಿಗೆ ಹಿತವಾಗುವದು? ನಿಮಗೊ, ನನಗೊ, ಭೂಪಬಾಲೆಗೊ, ವ್ರಜಬಾಲೆಗೊ, ಗದಾಧರನಿಗೊ?"

"ಎಲ್ಲರಿಗೂ ಹಿತವಾಗುವದು."

"ನನ್ನೊಬ್ಬನನ್ನು ಬಿಟ್ಟು!" ಎಂದು ಕಾಲಾಚಾಂದನು ನುಡಿದು, ಸ್ವಲ್ಪ ವೇಳೆಯ ಮೇಲೆ:—"ಮತ್ತು ವ್ರಜಬಾಲೆಯನ್ನು ಬಿಟ್ಟು!"

"ವ್ರಜಬಾಲೆಯು ನಿನ್ನನ್ನು ವರಿಸಲಿಕ್ಕೆ ಸಮ್ಮತಿಸಲಾರಳು."

"ಕೊಡಲಾರದ ಹೆಣ್ಣಿಗಾಗಿ ತೆರವಿನಿಂದ ಓಡಿಸಿದರೆಂಬ ಗಾದೆಯು ಬಂದಂತಾಯಿತು." ಎಂದು ಕಾಲಾಚಾಂದನು ತಿರಸ್ಕಾರದಿಂದ ನುಡಿದು, ಸಂತಾಪಯುಕ್ತವಾಗಿ:—"ರಾಧಾಮೋಹನರೆ, ನಾನು ನನ್ನ ಮನೋದಯವನ್ನು ಸ್ಪಷ್ಟವಾಗಿ ತಿಳಿಸಿರುವೆನು. ನೀವು ನಿಮ್ಮ ಮಗಳ ಸಲುವಾಗಿಯೂ ನನ್ನ ಸಲುವಾಗಿಯೂ ನಿಮ್ಮ ಮೊದಲಿನ ಮಾತು ಮುರಿಯಲೊಪ್ಪುವದಿಲ್ಲವೇ? ಚನ್ನಾಗಿ ವಿಚಾರಿಸಿ ಇನ್ನೊಮ್ಮೆ ಸ್ಪಷ್ಟವಾಗಿ ಹೇಳಿಬಿಡಿರಿ."

"ಗದಾಧರನಿಗೆ ನಾನು ವ್ರಜಬಾಲೆಯನ್ನು ಕೊಡದೆ ನಿನಗೆ ಕೊಟ್ಟರೆ ಜನರು ನನ್ನನ್ನು ಚನ್ನಾಗಿ ಹಳಿಯುವರು. ವಚನಭಂಗದ ಪಾತಕಕ್ಕೂ ನಾನು ಗುರಿಯಾಗುವೆನು. ನೀನು ಹೇಳುತ್ತಿರುವಂತೆ ವ್ರಜಬಾಲೆಯು ನಿನ್ನಲ್ಲಿ ಅನುರಾಗವುಳ್ಳವಳಾಗಿದ್ದರೆ ನಾನು ಯಾವ ಸಂಗತಿಗಳ ಕಡೆಗೂ ಲಕ್ಷ್ಯಗೊಡದೆ ನಿನ್ನ ಇಷ್ಟವನ್ನು ನೆರವೇರಿಸುತ್ತಿದ್ದೆನು."

"ವ್ರಜಬಾಲೆಯು ನನ್ನಲ್ಲಿ ಪ್ರಣಯವುಳ್ಳವಳಾಗಿರುವಳು. ಈಗ ಅವಳು ನಿಮ್ಮ ಭಯಕ್ಕಾಗಿ ಈ ವಿಷಯದಲ್ಲಿ ಅಸಮ್ಮತಿಯನ್ನು ವ್ಯಕ್ತಪಡಿ

ಸಿದರೆ ನಾನು ಮಾಡುವದೇನು? ರಾಧಾಮೋಹನರೆ, ಗದಾಧರನಿಗೆ ಕೊಟ್ಟ ಮಾತು ಮುರಿದು, ನನಗೆ ವ್ರಜಬಾಲೆಯನ್ನು ಕೊಡಲಿಕ್ಕೆ ನಿಮಗೆ ಸಾಧ್ಯ ವಿಲ್ಲವೇನು? ನನ್ನಂತಹನ ಬೇಡಿಕೆಯನ್ನು ಉಪೇಕ್ಷಿಸಬಾರದೆಂದು ಮತ್ತೊಮ್ಮೆ ಹೇಳುವೆನು.''

''ಕಾಲಾಚಾಂದರಾಯ! ನಾನು ನಿನ್ನ ಮುಂದೆ ಎಲ್ಲ ಸಂಗತಿಗಳನ್ನು ಸ್ಪಷ್ಟವಾಗಿ ಹೇಳುವೆನು ಕೇಳು: ಭೂಪಬಾಲೆ-ವ್ರಜಬಾಲೆಯರಿಬ್ಬರೂ ಶ್ರೀಮಂತ ತರುಣರನ್ನು ವರಿಸಬೇಕೆಂದು ನನ್ನ ಪ್ರಬಲವಾದ ಇಚ್ಛೆಯಿರು ವದು. ವ್ರಜಬಾಲೆಯನ್ನು ಯಾರಾದರೂ ವರಿಸಲೊಪ್ಪುವರು. ಭೂಪ ಬಾಲೆಗೆ ಯೋಗ್ಯನಾದ ವರನು ದೊರೆಯುವಂತಿಲ್ಲವಾದ್ದರಿಂದ ನನಗೆ ಬಹಳೇ ಖೇದವಾಗಿದೆ. ಭೂಪಬಾಲೆಯು ಅಂತಹ ಕುರೂಪಿಯಲ್ಲವೆಂಬ ದನ್ನು ನೀನು ಅರಿತಿರುವೆ. ನೀನು ಅವಳನ್ನು ವರಿಸಲೊಪ್ಪಿದರೆ ನನ್ನ ಇಬ್ಬರೂ ಮಕ್ಕಳು ಧನವಂತ ಪತಿಯೊಡನೆ ಸುಖದಿಂದ ಸಂಸಾರ ಮಾಡುವರೆಂಬದು ನಾನು ತಿಳಿದಿರುವೆನು. ಗದಾಧರನು ಭೂಪಬಾಲೆ ಯನ್ನು ವರಿಸಲೊಪ್ಪದ್ದರಿಂದ ಅವನಿಗೆ ವ್ರಜಬಾಲೆಯನ್ನು ಕೊಡಬೇಕೆಂದು ನಿಶ್ಚಯಿಸಿರುವೆನು. ನೀನು ಭೂಪಬಾಲೆಯನ್ನು ಲಗ್ನವಾದರೆ ನನ್ನ ತಳ ಮಳಿಸುವ ಆತ್ಮಕ್ಕೆ ಶಾಂತಿಯು ದೊರೆಯುವದು. ನಿನ್ನಂಥ ಸರ್ವೋ ತ್ಕೃಷ್ಟನಾದ ವರನನ್ನು ನಾನು ಎಂದಿಗೆ ಉಪೇಕ್ಷೆ ಮಾಡೇನು?''

''ನಿಮ್ಮ ಇಬ್ಬರು ಕನ್ಯೆಯರೂ ಬಡಿಯೋ ಮನೆತನಕ್ಕೆ ಬೀಳಬೇ ಕೆಂದು ನೀವು ಇಚ್ಛಿಸುತ್ತಿರುವಿರಲ್ಲವೆ?''

''ಅಹುದು.''

''ಗದಾಧರನು ಭೂಪಬಾಲೆಯನ್ನು ವಿವಾಹವಾಗಲಿಕ್ಕೆ ಸಮ್ಮತಿಸ ಲಿಲ್ಲವಷ್ಟೆ?''

''ನಿಜವು''

''ನಾನು ಭೂಪಬಾಲೆಯನ್ನು ವರಿಸುವೆನು. ಆದರೆ........''

''ಆನಂದವು! ಅತ್ಯಾನಂದವು! ಕಾಲಾಚಾಂದ ನಾನು ನಿನಗೆ ಭೂಪ ಬಾಲೆಯನ್ನು ನಿಶ್ಚಯವಾಗಿ ಕೊಡುವೆನು.''

"ಒಂದು ಕಟ್ಟಳೆಯಿಂದ ಮಾತ್ರ ನಾನು ಅವಳನ್ನು ವರಿಸಲೊಪ್ಪುವೆನು."

"ಮತ್ತೇನು?"

"ನೀವು ವ್ರಜಬಾಲೆಯನ್ನು ನನಗೆ ಕೊಡಲೊಪ್ಪಿದರೇ ಭೂಪಬಾಲೆಯನ್ನು ವರಿಸುವೆನು."

"ಅಂತೂ ಇಬ್ಬರನ್ನೂ ಲಗ್ನ ಮಾಡಿಕೊಳ್ಳಬೇಕೆಂದು ನಿನ್ನ ಪ್ರಯತ್ನವಿದ್ದಂತಾಯಿತು."

"ವ್ರಜಬಾಲೆಯ ಪ್ರಾಪ್ತಿಗಾಗಿ ನಾನು ಭೂಪಬಾಲೆಯನ್ನಾದರೂ ವರಿಸಲೊಪ್ಪಿರುವೆನು. ಗದಾಧರನು ಭೂಪಬಾಲೆಯನ್ನು ಪೇಕ್ಷಿಸಿರುವನಲ್ಲವೆ?"

"ಅಹುದು."

"ಹೀಗಿದ್ದ ಮೇಲೆ ಅವನಿಗೆ ಕೊಟ್ಟ ಮಾತು ಮುರಿಯಲಿಕ್ಕೆ ಅಡ್ಡಿಯೇನು? ನಿಮ್ಮ ಇಬ್ಬರು ಕುಮಾರಿಯರು ಶ್ರೀಮಂತ ಪತಿಯನ್ನು ಹೊಂದುವ ಸಂಧಿಯು ಲಭಿಸಿರುವದು. ಹೀಗಾದರೆ ನಿಮಗೆ ಭೂಪಬಾಲೆಯ ಚಿಂತೆಯೂ ಬಿಟ್ಟಂತಾಗುವದಲ್ಲವೆ? ಇನ್ನೇಕೆ ಅನುಮಾನವು? ಬೇಗನೆ ನಿಮ್ಮ ಆನಂದದಾಯಕವಾದ ಅಭಿಪ್ರಾಯವನ್ನು ವ್ಯಕ್ತಪಡಿಸಿರಿ."

"ಕಾಲಾಚಾಂದ, ನೀನು ಇಬ್ಬರನ್ನೂ ವರಿಸುವೆಯಾ?"

"ನಿಸ್ಸಂಶಯ. ಪುರುಷರು ಬೇಕಾದಷ್ಟು ಕನ್ನಿಕೆಯರನ್ನು ವರಿಸಲಿಕ್ಕೆ ಅನಿರ್ಬಂಧವಿರುವದು"

"ನನ್ನ ಇಬ್ಬರು ಕುಮಾರಿಯರನ್ನೂ ನಿನಗೆ ಕೊಡಲೊಪ್ಪಿದೆನು. ಭೂಪಬಾಲೆಯ ಸೌಖ್ಯಕ್ಕಾಗಿ ವಚನಭಂಗದ ದೋಷವೊದಗಿದರೂ ಅಡ್ಡಿಯಿಲ್ಲ."

"ರಾಧಾಮೋಹನರೆ, ಸುಖ-ದುಃಖಗಳು ದೈವಾಧೀನವಾದವುಗಳು. ಒಬ್ಬ ಬಡವನ ಕೈಹಿಡಿದ ಶ್ರೀಮಂತ ಮಹಿಳೆಯು ಆನಂದದಿಂದ ಇರುವದನ್ನಾದರೂ ನಾವು ನೋಡುತ್ತೇವೆ; ಶ್ರೀಮಂತನನ್ನು ವರಿಸಿದ ಬಡಕುಮಾರಿಕೆಯು ದುಃಖಪಡುವದನ್ನಾದರೂ ಎಷ್ಟೋ ಕಡೆಯಲ್ಲಿ ಕಾಣ

ಒಹುದು. ಪ್ರಣಯಾನಂದದಿಂದ ಮದವೇರಿದ ನಾನು ವ್ರಜಬಾಲೆಯನ್ನು ವರಿಸಿ ಮುಂದೆ ಸುಖಪಡುವೆನೋ, ದುಃಖಬಡುವೆನೋ ಎಂಬದನ್ನು ಈಗ ಯಾರು ಹೇಳಬೇಕು? ಭೂಪಬಾಲೆಯನ್ನು ವರಿಸುವ ಮನಸ್ಸಿಲ್ಲದಿದ್ದರೂ ಕೇವಲ ವ್ರಜಬಾಲೆಯ ಪ್ರಾಪ್ತಿಗಾಗಿ ಅವಳನ್ನು ವರಿಸಲೊಪ್ಪಿರುವೆನು. ಅವಳು ನನ್ನನ್ನು ವರಿಸಿದ ಮೇಲೆ ಸುಖಬಡುವಳೆಂಬದನ್ನಾದರೂ ಯಾರು ಹೇಳಬೇಕು? ದುಃಖಹೊಂದುವಳೆಂಬದಾದರೂ ಈಗ ಹೇಗೆ ತಿಳಿಯುವದು? ನಾನು ಅತ್ಯಂತ ಪ್ರೇಮದಿಂದ ವರಿಸಬೇಕೆಂದಿರುವ ವ್ರಜಬಾಲೆಗೆ ವಿವಾಹಾನಂತರದಲ್ಲಿ ನನ್ನಿಂದ ಸೌಖ್ಯವಾಗುವದೋ, ದುಃಖವಾಗುವದೋ ಯಾರು ಬಲ್ಲರು? ನಾನು ಹೇಳುವ ಮಾತಿನ ತಾತ್ಪರ್ಯವೇನೆಂದರೆ, ಸುಖ-ದುಃಖಗಳು ದೈವಾನುಸಾರವಾಗಿ ಬರುವವು; ಆದರೂ ಮನುಷ್ಯನು ಸದಸದ್ವಿವೇಕ ಬುದ್ಧಿಯಿಂದ ನಡೆದು ಯಶೋಭಾಗಿಯಾಗಬೇಕೆಂದು ನನ್ನ ಅಭಿಪ್ರಾಯವು.''

ರಾಧಾಮೋಹನನು ಕಾಲಾಚಾಂದನಿಗೆ ಅಲ್ಲಿಯೇ ಕುಳಿತುಕೊಳ್ಳಲಿಕ್ಕೆ ತಿಳಿಸಿ, ವಿವಾಹದ ಸಂಗತಿಯನ್ನು ಪತ್ನಿಗೆ ತಿಳಿಸುವದಕ್ಕಾಗಿ ಒಳಗೆ ಹೋದನು. ಅಲ್ಲಿ ಅವನ ಹೆಂಡತಿಯೂ ಭೂಪಬಾಲೆ-ವ್ರಜಬಾಲೆಯರೂ ಇದ್ದರು. ಅವರು ಹೊರಗೆ ನಡೆದ ಸಂಭಾಷಣವನ್ನು ಕೇಳಿದ್ದರು. ಅತ್ಯಂತ ತೇಜಸ್ವಿಯಾದ ಪತಿಯು ದೊರಕುವನೆಂದು ಭೂಪಬಾಲೆಯು ಸಂಭ್ರಮಗೊಂಡಿದ್ದಳು; ವ್ರಜಬಾಲೆಯ ಮುಖವು ಮಾತ್ರ ತೀರ ಕಳೆಗುಂದಿತ್ತು. ರಾಧಾಮೋಹನನ ಪತ್ನಿಯು ಆನಂದ-ದುಃಖಗಳ ಸಮರಸ ಭಾವಗಳಿಂದ ಕೂಡಿದವಳಾಗಿದ್ದಳು. ರಾಧಾಮೋಹನನು ಒಳಗೆ ಬಂದು ಪತ್ನಿಯನ್ನು ಕುರಿತು:—''ಕಾಲಾಚಾಂದರಾಯನು ಭೂಪ-ವ್ರಜರಿಬ್ಬರನ್ನೂ ವರಿಸಲೊಪ್ಪಿರುವನು. ಭೂಪಬಾಲೆಗೆ ಚಲೋ ಮನೆತನಗಳು ದೊರೆಯುವವೋ ಇಲ್ಲವೋ ಎಂಬ ಚಿಂತೆಯು ದೂರವಾಯಿತು.''

ರಾಧಾಮೋಹನನ ಮಾತುಗಳನ್ನು ಕೇಳಿ ವ್ರಜಬಾಲೆಯ ನೇತ್ರಗಳಲ್ಲಿ ದುಃಖಾಶ್ರುಗಳು ತುಂಬಿದವು ತಾನು ಗದಾಧರನಲ್ಲಿ ಪ್ರೇಮವುಳ್ಳವಳಾಗಿರುವೆನೆಂಬದನ್ನು ತಿಳಿದಿದ್ದರೂ ತನ್ನ ತಂದೆಯು ಈ ಬಗೆಯ

ಉಪದ್ವ್ಯಾಪವನ್ನು ನಡೆಯಿಸಿದುದನ್ನು ನೋಡಿ ಅವಳು ಬಹಳೇ ಸಂತಾಪಗೊಂಡಳು. ಅವಳು ಎಂತಹ ನಿಷ್ಠುರ ಸ್ವಭಾವದವಳಾಗಿದ್ದರೂ ತಂದೆಯ ಮನಸ್ಸಿನ ವಿರುದ್ಧವಾಗಿ ನಡೆಯಲಿಕ್ಕೆ ಹಿಂಜರಿಯುತ್ತಿದ್ದಳು. ಅವಳು ತನ್ನ ಅಭಿಪ್ರಾಯವನ್ನು ಮುಂಚಿತವಾಗಿ ತಾಯಿಗೆ ತಿಳಿಸಿದ್ದಳು. ಕಾಲಾಚಾಂದನನ್ನು ವರಿಸುವದು ವ್ರಜಬಾಲೆಯ ಮನಸ್ಸಿನಲ್ಲಿಲ್ಲವೆಂಬ ಸಂಗತಿಯನ್ನು ರಾಧಾಮೋಹನನ ಪತ್ನಿಯು ಪತಿಗೆ ತಿಳಿಸಿದಳು. ಅವಳ ಮಾತನ್ನು ಕೇಳಿ ರಾಧಾಮೋಹನನು ವ್ರಜಬಾಲೆಯನ್ನು ಕುರಿತು ಉಪದೇಶಪರವಾದ ಮಾತುಗಳನ್ನು ಹೇಳಲಾರಂಭಿಸಿದನು:

"ವ್ರಜಬಾಲೆ, ನೀನು ಕಾಲಾಚಾಂದನನ್ನು ಪ್ರೀತಿಸುತ್ತಿರುವೆಯೆಂದು ನನಗೆ ತಿಳಿದಿರುವದು. ಈ ಸಂಗತಿಯು ನಿಜವಿದ್ದರೆ ನೀನು ಈ ಮೇರೆಗೆ ಉದಾಸೀನಳಾಗಿರುವದೇಕೆ?"

"ಅಪ್ಪಾ?" ವ್ರಜಬಾಲೆಯು ವಿನಯದಿಂದ:—"ನಾನು ಕುಲಯುವತಿಯಿರುವೆನು. ನಾನು ಗದಾಧರರನ್ನು ವರಿಸಬೇಕೆಂದು ನಿಶ್ಚಯಿಸಿಕೊಂಡಿರುವೆನು. ಹೀಗಿದ್ದು ಅನ್ಯರಿಗೆ ಹೃದಯದಲ್ಲಿ ಸ್ಥಳವೀಯುವೆನೆ?"

"ನೀನು ಕಾಲಾಚಾಂದನ ಸ್ನೇಹಾಂಕಿತಳಿರುವೆಯೆಂಬದನ್ನು ನಾನು ಅವನ ಬಾಯಿಂದಲೇ ಕೇಳಿದೆನು." ಎಂದು ರಾಧಾಮೋಹನನು ನುಡಿದು, [illegible] ಮಾಡಿಕೊಳ್ಳುವವನಂತೆ ನಟಿಸಿ ಸ್ವಲ್ಪ ವೇಳೆಯ ಮೇಲೆ: 'ವ್ರಜ, ನೀನು ಅವನನ್ನು ಪ್ರೀತಿಸುತ್ತಿರುವದು ನಿಜ. ನಾನು ನಿಮ್ಮಲ್ಲಿ ಪ್ರೇಮವುಳ್ಳವಳಿರುವೆನೆಂದು ಅವನ ಮುಂದೆ ನೀನು ಹೇಳಿಲ್ಲವೆ?"

"ನಾನು ಕಾಲಾಚಾಂದನಲ್ಲಿ ಪ್ರೇಮವುಳ್ಳವಳಿರುವೆನು; ಆದರೆ ಆ ಪ್ರೇಮವು ಮಾತ್ರ ನೀವು ಕಲ್ಪಿಸಿಕೊಂಡ ರೀತಿಯದಲ್ಲ. ಕಾಲಾಚಾಂದನಾದರೂ ನನ್ನ ಪ್ರೇಮದ ಬಗ್ಗೆ ವಿಕಲ್ಪ ಭಾವನೆ ಮಾಡಿಕೊಂಡಿರುವನೆಂದು ಸ್ಪಷ್ಟವಾಗಿ ತಿಳಿಯುತ್ತದೆ."

"ನಿಜವಾಗಿ ವಿಚಾರಿಸಿದರೆ ನಿನ್ನನ್ನು ಗದಾಧರನಿಗೆ ಕೊಡಬೇಕಾಗಿತ್ತು. ಕೇವಲ ಭೂಪಬಾಲೆಯ ಹಿತಕ್ಕಾಗಿ ನಿನ್ನ ಮನಸ್ಸಿನ ವಿರುದ್ಧವಾಗಿ ನಡೆಯಬೇಕಾಗಿದೆ. ಕಾಲಾಚಾಂದನು ಗದಾಧರನಿಗಿಂತ ಎಲ್ಲ ಬಗೆ

ಯಿಂದ ಶ್ರೇಷ್ಠನಿರುವದರಿಂದ ಅವನನ್ನು ವರಿಸುವದರಿಂದ ನಿನಗೆ ಯಾವ ವಿಧದ ಅಕಲ್ಯಾಣವೂ ಆಗಲಾರದು. ಭೂಪಬಾಲೆಗೆ ಚಲೋ ಮನೆತನವು ದೊರೆಯುವಂತಿದ್ದರೆ ನಿನ್ನನ್ನು ಗದಾಧರನಿಗೇ ಕೊಡುತ್ತಿದ್ದೆನು. ನೀವಿಬ್ಬರು ಕಾಲಾಚಾಂದನನ್ನು ವರಿಸಿದರೆ ನನ್ನ ಎಲ್ಲ ಚಿಂತೆಗಳೂ ದೂರವಾದಂತಾಗುವವು. ವ್ರಜಬಾಲೆ, ಕಾಲಾಚಾಂದನು ಗದಾಧರನಿಗಿಂತಲೂ ಸರ್ವೋತ್ಕೃಷ್ಟನಿರುವನೆಂಬುದನ್ನು ನಿನಗೆ ಹೇಳಬೇಕಾಗಿಲ್ಲ. ನೀನು ಆನಂದದಿಂದ ಅವನನ್ನು ವಿವಾಹವಾಗಲಿಕ್ಕೆ ಒಡಂಬಡು.''

''ಅಪ್ಪಾ. ನಾನು ನನ್ನ ನಿಶ್ಚಯವನ್ನು ಬಿಡಲಾರೆನು.''

ವ್ರಜಬಾಲೆಯು ವಿನಯವನ್ನು ತ್ಯಜಿಸಿ ಸಂತಾಪದಿಂದ ಹೀಗೆ ನುಡಿದ ಕೂಡಲೆ ರಾಧಾಮೋಹನನ ತಲೆಯು ತಿರುಗಿತು. ಮಗಳು ಹೀಗೆ ಅವಿಧೇಯಳಾಗಿ ನಡೆಯುವಳೆಂದು ಅವನು ಅರಿತಿರಲಿಲ್ಲ. ವ್ರಜಬಾಲೆಯು ಎಂತಹ ನಿಷ್ಠುರ ಸ್ವಭಾವದವಳಿದ್ದರೂ ತನ್ನ ಮಾತಿನ ವಿರುದ್ಧವಾಗಿ ನಡೆಯುವದಿಲ್ಲವೆಂದು ಅವನ ಭಾವನೆಯಿತ್ತು. ಇಂದಿನ ಅವಳ ಮಾತಿನಿಂದ ರಾಧಾಮೋಹನನ ಭ್ರಾಂತಿಯು ಬಯಲಾಯಿತು. ಆಗ ಅವನು ಸಂತಾಪಗೊಂಡು: ''ವ್ರಜಬಾಲೆ, ನೀನು ನನ್ನ ಮನಸ್ಸಿಗೆ ದುಃಖವನ್ನುಂಟುಮಾಡಬೇಕೆಂದು ಸಿದ್ಧಳಾಗಿರುವೆಯಾ?''

''ಅಪ್ಪಾ, ವಿವಾಹದಿಂದ ನನಗೆ ಸೌಖ್ಯವಾಗಬಾರದೆಂದು ನಿಮ್ಮ ಅಪೇಕ್ಷೆಯಿರುವದೇನು?''

''ಕಾಲಾಚಾಂದನನ್ನು ವರಿಸಿದರೆ ನಿನ್ನ ಸೌಖ್ಯಕ್ಕೆ ಕೊರತೆಯೇನು ಬರುವದು?''

''ನೀವು ಸೌಖ್ಯದ ವ್ಯಾಖ್ಯೆಯನ್ನು ಬೇರೆ ವಿಧವಾಗಿ ಮಾಡಿರುವಿರೆಂದು ತಿಳಿಯುವದು. ಮನಸ್ಸಿನ ಅನುಕೂಲ ಸ್ಥಿತಿಯೇ ಸುಖವು; ಪ್ರತಿಕೂಲತೆಯೇ ದುಃಖವು.''

''ವ್ರಜಬಾಲೆ, ನಾನು ಕಾಲಾಚಾಂದನಿಗೇ ನಿಮ್ಮಿಬ್ಬರನ್ನು ಕೊಡಬೇಕೆಂದು ನಿಶ್ಚಯಿಸಿರುವೆನು. ಈ ವಿಷಯದಲ್ಲಿ ನಾನು ಅವನಿಗೆ ವಚನವನ್ನಾದರೂ ಕೊಟ್ಟಿರುವೆನು.''

"ಕುಮಾರಿಯರು ಪ್ರಬುದ್ಧರಿರುವಾಗ ಅವರ ವಿವಾಹದ ವಿಷಯುವಾಗಿ ನೀವು ನಿಮ್ಮ ಇಚ್ಛೆಯಂತೆ ನಡೆಯತೊಡಗಿರುವದನ್ನು ನೋಡಿ ಸಖೇದಾಶ್ಚರ್ಯವೆನಿಸುತ್ತದೆ."

"ವ್ರಜ, ನೀನು ನನಗೆ ಉದ್ವಿಗಲಿಸಬೇಡ. ಮಗಳಾದ ನಿನ್ನ ಸುಖ-ದುಃಖಗಳ ವಿಷಯುವಾಗಿ ನಾನು ಅಂಧನಿರುವದಿಲ್ಲ. ಕಾಲಾಚಾಂದನಂತಹ ಪ್ರಬಲವಾದ ಮನುಷ್ಯನಿಗೆ ಕೊಟ್ಟ ವಚನವನ್ನು ನಾನು ತಿರುಗಿಸಲಾರೆನು."

"ನೀವು ಗದಾಧರರಿಗೆ ಮಾತು ಕೊಟ್ಟಿದ್ದಿಲ್ಲವೇನು? ಅವರು ಸಾತ್ವಿಕರಿರುವದರಿಂದ ಅನ್ಯಾಯಕ್ಕೆ ಪ್ರತೀಕಾರ ಮಾಡಲಾರರೆಂದು ತಿಳಿದು, ಹೀಗೆ ವರ್ತನವಿಟ್ಟಂತೆ ತೋರುವದು."

"ನಾನು ಗದಾಧರನಿಗೆ ನಿಶ್ಚಿತವಾದ ಮಾತನ್ನು ಹೇಳಿದ್ದಿಲ್ಲ."

"ಸ್ಸೆ! ಸ್ಸೆ! ಒಳಿತಾಯಿತು! ಹೊತ್ತು ಒಂದಂತೆ ಕೊಡಹಿಡಿಯುವವರಾದ ನೀವು ಪ್ರಸಂಗದಲ್ಲಿ ಯಾತಕ್ಕೂ ಹೇಸಲಾರಿರಿ!"

"ವ್ರಜಬಾಲೆ! ನೀನು ತೀರ ಉನ್ಮತ್ತಳಾಗಿರುವೆ!" ರಾಧಾಮೋಹನನು ಕ್ರೋಧಾಂಧನಾಗಿ ವ್ರಜಬಾಲೆಯನ್ನು ದೂಷಿಸತೊಡಗಿದನು. "ನೀನು ಸ್ವೇಚ್ಛಾಚಾರಿಣಿಯು! ನೀಚಮನೋವೃತ್ತಿಯವಳು. ಜನ್ಮದಾತನ ಮಾನವನ್ನು ಉಳಿಸಲಾರದಂತಹ ನೀನು ಮಗಳೆ? ಅಲ್ಲ; ನೀನು ನನ್ನ ಮಗಳಲ್ಲ! ನೀನು ನನಗೆ ವೈರಿಣಿಯು! ನಿನಗೂ ಭೂಪಬಾಲೆಗೂ ಕೂಡಿಯೇ ಸೌಖ್ಯವಾಗಬೇಕೆಂದು ನಾನು ಯತ್ನಿಸಿದರೆ, ನೀನು ನನಗೆ ವಿರೋಧವನ್ನುಂಟುಮಾಡಲಿಕ್ಕೆ ಸಾಹಸ ನಡೆಯಿಸುವೆಯಾ? ನಾನಂತೂ ನಿಮ್ಮೀರ್ವರನ್ನು ಕಾಲಾಚಾಂದನ ವಶಪಡಿಸಿಬಿಡುವೆನು. ನಿನ್ನ ವಿರೋಧವನ್ನು ನಾನು ಲೆಕ್ಕಿಸುವದಿಲ್ಲ."

ರಾಧಾಮೋಹನನು ಹೀಗೆ ಸಂತಪ್ತನಾಗಿ ನುಡಿದ ಕೂಡಲೆ ವ್ರಜಬಾಲೆಯ ಹೃದಯವು ನಡುಗಿತು. ಹಡೆದವರ ಆಜ್ಞೆಯನ್ನುಲ್ಲಂಘಿಸಬಾರದೆಂದು ರಾಧಾಮೋಹನನ ಪತ್ನಿಯಾದರೂ ಅವಳಿಗೆ ಚನ್ನಾಗಿ ಬೋಧಿಸಿದಳು. ಕಡೆಗೆ ಅವಳು ನಿರುಪಾಯಳಾಗಿ ಕಾಲಾಚಾಂದನನ್ನು

ವರಿಸಲಿಕ್ಕೆ ಸಮ್ಮತಿಸಿದಳು. ಮಗಳು ತನ್ನ ಮಾತಿಗೆ ಅನುಕೂಲಿಸಿದ ಳೆಂದು ರಾಧಾಮೋಹನನು ಕಡು ಸಂಭ್ರಮಗೊಂಡು ಅಲ್ಲಿಂದ ಹೊರಗೆ ಹೋದನು. ಅವನು ಹೋದ ಕೂಡಲೆ ವ್ರಜಬಾಲೆಯ ದುಃಖವು ಒತ್ತರಿಸಿತು. ಅವಳು ಎದೆ ಎದೆ ಬಡಕೊಳ್ಳುತ್ತ:—

"ನನ್ನ ದುರ್ದೈವ!" ಎಂದು ನುಡಿದು ನೆಲಕ್ಕೆ ಬಿದ್ದು ಪ್ರಲಾಪಿಸ ತೊಡಗಿದಳು.

---

## ವಿಲಕ್ಷಣ ಹೃದಯ.

ಕಾಲಾಚಾಂದನು ಭೂಪಬಾಲೆ—ವ್ರಜಬಾಲೆಯರಿಬ್ಬರನ್ನೂ ವಿವಾಹ ವಾದನು. ಅವನು ಮನಸ್ಸಿಲ್ಲದಿದ್ದರೂ ವ್ರಜಬಾಲೆಯ ಪ್ರಾಪ್ತಿಗಾಗಿ ಭೂಪಬಾಲೆಯ ಪಾಣಿಗ್ರಹಣ ಮಾಡಿದ್ದನು. ವಿವಾಹಾನಂತರದಲ್ಲಿ ತನ್ನೊಡನೆ ವ್ರಜಬಾಲೆಯೊಬ್ಬಳನ್ನೇ ಕರೆದೊಯ್ಯಬೇಕೆಂಬ ನಿಶ್ಚಯವುಳ್ಳವನಾಗಿದ್ದನು. ಅವನು ತನ್ನ ಈ ಮನೋದಯವನ್ನು ವ್ರಜಬಾಲೆಗೆ ತಿಳಿಸಿದ್ದನು. ಭೂಪಬಾಲೆಯನ್ನು ತವರೂರಲ್ಲಿಯೆ ಬಿಡುವದು ವ್ರಜಬಾಲೆಗೆ ಎಷ್ಟು ಮಾತ್ರವೂ ಸರಿಯಾಗಿ ತೋರಲಿಲ್ಲ. ಭೂಪಬಾಲೆಯನ್ನು ಕರೆಯೊಯ್ದರ ಇದ್ದುದರಲ್ಲಿ ತನ್ನ ಮನಸ್ಸು ಸಮಾಧಾನಗೊಳ್ಳುವದೆಂದು ಅವಳು ಕಾಲಾಚಾಂದನಿಗೆ ಹೇಳಿದಳು. ವ್ರಜಬಾಲೆಯಂತಹ ಸ್ವರ್ಗೀಯ ಸುಂದರಿಯೊಡನೆ ವಿಲಾಸಸೌಖ್ಯವನ್ನು ಭೋಗಿಸುವಾಗ ಭೂಪಬಾಲೆಯು ತೊಡರಾಗುವಳೆಂದು ಕಾಲಾಚಾಂದನ ಭಾವನೆಯಿದ್ದುದರಿಂದ, ಅವನು ತನ್ನ ಪ್ರೇಮದ ಪತ್ನಿಯ ಮಾತನ್ನು ನಡಿಸಲಾರದವನಾದನು.

"ವ್ರಜಸುಂದರಿ!" ವಿವಾಹಾನಂತರದಲ್ಲಿ ಬಾಲೆಯೆಂಬ ಹೆಸರಿಗೆ ಪ್ರತಿಯಾಗಿ ಸುಂದರಿಯೆಂಬ ಹೆಸರಿಡುವ ಪ್ರಚಾರವು ಬಂಗಾಲದಲ್ಲಿದ್ದುದರಿಂದ ಅವನು ಆ ಹೆಸರನ್ನು ಜೋಡಿಸಿ ಪತ್ನಿಯನ್ನು ಸಂಬೋಧಿಸಿ:- "ಭೂಪಸುಂದರಿಯನ್ನು ವರಿಸುವದು ನನ್ನ ಮನಸ್ಸಿನಕ್ಷರವೆಯವ್ವಾದರೂ ಇದ್ದಿಲ್ಲ. ಕೇವಲ ನಿನ್ನ ತಂದೆಯ ಆಗ್ರಹಕ್ಕಾಗಿ ನನ್ನ ಮನಸ್ಸಿನ

ವಿರುದ್ಧವಾಗಿ ನಡೆಯಬೇಕಾಯಿತು. ಕುರೂಪಿಯಾದ ಭೂಪಸುಂದರಿಯನ್ನು ನಾನು ಕರೆದೊಯ್ಯಲಾರೆನು. ಅವಳು ರಾಧಾಕೃಷ್ಣನ ಸ್ಮರಣೆ ಮಾಡುತ್ತ ಇಲ್ಲಿಯೇ ಇರಲಿ."

"ಅಂತು ನೀವು ನಿಮ್ಮ ಸೌಖ್ಯಕ್ಕಾಗಿ ಭೂಪಸುಂದರಿಯ ಆಯುಷ್ಯವನ್ನು ದುಃಖಮಯವಾಗಿ ಮಾಡಿದಿರಿ! ನಿಮ್ಮ ಈ ಯೋಜನೆಯಿಂದ ಅವಳಿಗೆ ಎಷ್ಟು ದುಃಖವಾಗುವದೆಂಬದನ್ನು ನೀವು ಕಲ್ಪಿಸಿರುವಿರೇನು? ಶ್ರೀಮಂತನೂ ಪ್ರತಿಭಾಶಾಲಿಯೂ ಆದ ಪತಿಯು ದೊರೆತನೆಂದು ಅವಳು ಆನಂದದಿಂದ ಕುಣಿಯುತ್ತಿದ್ದಳು. ಸೌಖ್ಯಗಿರಿಯ ಉನ್ನತ ಶಿಖರವನ್ನೇರಿದ್ದ ಭೂಪಸುಂದರಿಯನ್ನು ಅಧಃಪಾತಗೊಳಿಸಬೇಡಿರಿ. ಇದಕ್ಕೂ ಹೆಚ್ಚಿಗೆ ನಾನು ವಿಜ್ಞಾಪನೆ ಮಾಡಿಕೊಳ್ಳಲು ಸಿದ್ಧಳಿಲ್ಲ. ಈ ವಿವಾಹದಿಂದ ನಾವು ಮೂವರೂ ದುಃಖಿತರಾಗಬೇಕೆಂದು ಭಗವದಿಚ್ಛೆಯಿದ್ದರೆ ಅದಕ್ಕೆ ನನ್ನ ಉಪಾಯವೇನಿರುವದು?"

ತನ್ನ ಯೋಜನೆಯಿಂದ ಭೂಪಬಾಲೆಗೆ ಮಾತ್ರ ದುಃಖವಾಗುವದೆಂದು ಕಾಲಾಚಾಂದನು ಗ್ರಹಿಸಿದ್ದನು. ಅವಳನ್ನು ತವರೂರಲ್ಲಿಯೆ ಬಿಟ್ಟು ಹೋಗಬೇಕೆಂಬ ತನ್ನ ವಿಚಾರವು ವ್ರಜಸುಂದರಿಗೆ ತಿರಸ್ಕರಣೀಯವಾಗಿ ತೋರಿತೆಂದು ಈಗ ಕಾಲಾಚಾಂದನು ತಿಳಿದುಕೊಂಡನು. ವ್ರಜಸುಂದರಿಯ ಮನೋದಯವೇನಿರುವದೆಂಬದನ್ನು ತಿಳಿದುಕೊಳ್ಳುವ ಕುತೂಹಲದಿಂದ ಅವನು: —"ವ್ರಜ, ವಿವಾಹದಿಂದ ನಮ್ಮಿಬ್ಬರ ಸೌಖ್ಯಕ್ಕೆ ವ್ಯತ್ಯಯವೇನು ಬಂದಿರುವದು?"

"ಮನಸ್ಸಿನಲ್ಲಿ ದುಃಖವು ಅಂಕುರಿಸಿ ಬೆಳೆಯತೊಡಗಿದ ಮೇಲೆ, ಸೌಖ್ಯವು ಉಳಿಯಲಿಕ್ಕೆ ಮಾರ್ಗವೆಲ್ಲಿ?"

"ಪ್ರಿಯೆ, ವ್ರಜಸುಂದರಿ!"

"ಮತ್ತೇನು ಹೇಳಿರಿ."

"ನೀನು ಹೀಗೇಕೆ ನಿರುತ್ಸಾಹಜನಕ ಮಾತುಗಳನ್ನಾಡುತ್ತಿರುವೆ? ನಿನ್ನ ಮಾತುಗಳಿಂದ ಕಡುಹರುಷಗೊಂಡ ನನ್ನ ಮನಸ್ಸು ಔದಾಸೀನ್ಯವನ್ನು ತಳೆಯಲಾರಂಭಿಸಿತು."

"ನನ್ನ ವರ್ತನದಲ್ಲಿ ದೋಷವಿಲ್ಲದಿರುವಾಗ ನಿಮ್ಮ ಮನಸ್ಸು ಏಕೆ ಉದ್ವಿಗ್ನತೆ ಹೊಂದತೊಡಗಿರುವದೋ ಏನೋ! ಒಂದು ವೇಳೆ ನೀವು ಹೇಳುತ್ತಿರುವಂತೆ ವಸ್ತುಸ್ಥಿತಿಯಿದ್ದರೆ ಅದಕ್ಕೆ ನಾನೇನು ಮಾಡಲಿ?"

"ಭೂಪಸುಂದರಿಯನ್ನು ಕರೆದೊಯ್ಯಬೇಕೆಂದು ನಿನ್ನ ಅಭಿಪ್ರಾಯ ವಿರುವದೇನು? ಒಂದು ವೇಳೆ ನಿನ್ನ ಮನಸ್ಸಿನಲ್ಲಿ ಹಾಗಿದ್ದರೆ ಅದರಂತೆ ನಡೆಯಲಿಕ್ಕೆ ನಾನು ಸಿದ್ಧನಿರುವದಿಲ್ಲ."

"ಎರಡನೆಯವರನ್ನು ಇಲ್ಲದ ಕಾರ್ಯಭಾರದಲ್ಲಿ ತೊಡಕಿಸುವ ದಕ್ಕಾದರೂ ನಾನೆಲ್ಲಿ ಸಿದ್ಧಳಾಗಿರುವೆನು? ಮನಸ್ಸು ತಡೆಯದ್ದಕ್ಕೆ ಸುಮ್ಮನೆ ಮಾತಾಡಿದೆನು."

"ನಾನು ಪರಕೀಯನೆ?" ಎಂದು ನುಡಿದು, ಕಾಲಾಚಾಂದನು ವಿಸ್ಮಯದಿಂದ—"ವ್ರಜ, ನೀನು ಹೀಗೇಕೆ ಭ್ರಾಂತಿಷ್ಠಳಂತೆ ಮಾತನಾಡುವೆ? ವಿವಾಹನಂತರದಲ್ಲಿ ಸ್ವರ್ಗಕ್ಕಿಂತಲೂ ಹೆಚ್ಚಿನ ಸೌಖ್ಯ ಹೊಂದುವೆನೆಂದು ನಾನು ತಿಳಿದಿದ್ದೆನು; ಆದರೆ ಇದೇನು? ಈಗಾಗಲೆ ರಗಳೆಗೆ ಪ್ರಾರಂಭವಾಯಿತಲ್ಲ!"

"ಮನುಷ್ಯನು ಮನಬಂದಂತೆ ಕಲ್ಪನೆ ಮಾಡಿಕೊಳ್ಳುವನು. ತಾನು ಒಂದು ಬಗೆದರೆ ದೈವವೊಂದು ಒಗೆಯುವದೆಂಬ ವಾಡಿಕೆಯು ಇರುವದಿಲ್ಲವೆ? ನಾನು ಇಂದ್ರನ ಇಂದ್ರಾಣಿಯಾಗಬೇಕೆಂದು ಬಯಸಿದರೆ ಸಾಧ್ಯವಾಗುವದೆ?"

"ದೈವಾನುಕೂಲವಿದ್ದರೆ ಯಾವದಾದರೂ ಸಾಧ್ಯವಾಗುವದು."

"ಹಾಗೆ ದೈವಾನುಕೂಲವಿಲ್ಲವೆಂದು ನಿಮಗೆ ಔದಾಸೀನ್ಯವನ್ನು ತಳೆಯುವ ಪ್ರಸಂಗ ಬರಬಹುದು; ನಾನಾದರೂ ಅನೇಕ ಬಗೆಯ ದುಃಖ ವನ್ನನುಭವಿಸುವ ಕಾಲವು ಒದಗಬಹುದು; ಭೂಪಬಾಲೆಯ ಪರಿಣಾಮ ವಂತು ಕಣ್ಣಿಗೆ ಕಂಡೇ ಹೋಗಿದೆ. ಅಂತೆಯೆ ವಿವಾಹದಿಂದ ಮೂವರೂ ದುಃಖಬಡಬೇಕೆಂದು ಈಶಸಂಕೇತವಿರಬಹುದೆಂದು ನಾನು ನುಡಿದೆನು."

"ನನ್ನನ್ನು ವಿವಾಹವಾದದ್ದಕ್ಕಾಗಿ ನೀನು ದುಃಖಿತಳಾಗಿರುವೆಯೆಂದು ನಿನ್ನ ಮಾತುಗಳಿಂದ ವ್ಯಕ್ತವಾಗುತ್ತದೆ. ವ್ರಜಸುಂದರಿ, ನೀನು ನನ್ನಲ್ಲಿ

ಪ್ರೇಮವಿಲ್ಲದವಳಾಗಿದ್ದರೆ ಮೊದಲೇ ಹಾಗೆ ಸ್ಪಷ್ಟವಾಗಿ ಹೇಳಿ ಬಿಡಬೇಕಾಗಿತ್ತು.''

''ಈಗ ಎಷ್ಟು ಮಾತನಾಡಿ ಮಾಡಬೇಕಾದದ್ದೇನು? ಮಾತು ಮಿಂಚಿ ಹೋಗದೆ. ನೀವು ಭೂಪಸುಂದರಿಗೆ ಸೌಖ್ಯಲಭಿಸುವಂತೆ ವರ್ತನವನ್ನಿಡುವಿರೋ ಇಲ್ಲವೋ?''

''ತಿಳಿಯಿತು; ನಿನ್ನ ಮನಸ್ಸಿನ ಒಲವು ತಿಳಿಯಿತು. ಭೂಪಸುಂದರಿಯನ್ನು ಸಂಗಡ ಕರಕೊಂಡು ಬರಬೇಕೆಂಬ ಉದ್ದೇಶದಿಂದ ನೀನು ಈ ಬಗೆಯಾಗಿ ನಿಷ್ಠುರ ಮಾತುಗಳನ್ನಾಡ ತೊಡಗಿರುವೆ. ವ್ರಜ, ನಮ್ಮೊವರ ಸೌಖ್ಯಕ್ಕೆ ಭೂಪಬಾಲೆಯಿಂದ ವ್ಯತ್ಯಯು ಬರುವದೆಂದು ನನ್ನ ಕಲ್ಪನೆಯಿದ್ದದರಿಂದ ನಾನು ನಿನ್ನ ಇಚ್ಛೆಯಂತೆ ನಡೆಯಲಾರೆನು. ಮೇ-ಲಾಗಿ ನಾನು ಆತ್ಮಸಂತೋಷದಿಂದ ಅವಳನ್ನು ವಿವಾಹವಾಗಿಲ್ಲ.''

''ನಿಮ್ಮ ಮಾತನ್ನು ನಾನು ಅಲ್ಲಗಳೆಯಲಾರೆನು. ನಿಜವಾದ ಪ್ರೇಮಸಂಯೋಗವೇ ದಂಪತಿಗಳ ಸೌಖ್ಯದ ಉಗಮವು. ಒತ್ತಾಯದ ಮದುವೆಯ ಪರಿಣಾಮವು ಕಾಲತ್ರಯದಲ್ಲಿಯೂ ಅನಿಷ್ಟವು.''

''ಪ್ರಿಯೆ, ನಿನಗೆ ಪ್ರಣಯವೆಂದರೇನೆಂಬದು ಗೊತ್ತಿಲ್ಲವೇನು? ನೀನೇನು ಅಪ್ರಬುದ್ಧಳೆ? ನಾಥ, ಪ್ರಿಯಕರ ಮೊದಲಾದ ಸಂಬೋಧನ ಹಚ್ಚುತ್ತಲೂ, ನೇತ್ರಕಟಾಕ್ಷಗಳನ್ನು ಬೀರುತ್ತಲೂ, ಮಂದಹಾಸದ ನೊಬಗನ್ನು ತೋರುತ್ತಲೂ ಪತಿಯ ಮನಸ್ಸನ್ನು ತಲ್ಲೀನತೆಗೊಳಿಸುವ ಕಲೆಯಲ್ಲಿ ನೀನು ತೀರ ಅಜ್ಞಳಿರುವಂತೆ ತೋರುವದು. ನಿನ್ನ ಅಮೌಲ್ಯವಾದ ಸೌಂದರ್ಯಕ್ಕೆ ವಿಲಾಸವೃತ್ತಿಯ ಜೋಡು ದೊರಕಿದ್ದರೆ, ನಾನು ಅಪ್ರತಿಮ ಭಾಗ್ಯಶಾಲಿಯಾಗುತ್ತಿದ್ದೆನು.''

''ಈಗಾಗಲೆ ನೀವು ದುರ್ಭಾಗ್ಯರೆಂದು ತಿಳಿದು ಬಿಟ್ಟಿರೇನು?'' ಎಂದು ವ್ರಜಸುಂದರಿಯು ನುಡಿದು, ಮೋರೆಯನ್ನು ಗಂಟು ಹಾಕಿ:—''ಯಾವ ಕಲೆಯು ನನಗೆ ಗೊತ್ತಿಲ್ಲವೊ, ಅರಿತಹ ಕಲೆಯಲ್ಲಿ ನನ್ನ ಪ್ರಗತಿಯನ್ನೇನು ತೋರಿಸಲಿ?''

''ನಾನು ಹೇಳುತ್ತಿರುವ ನೈಸರ್ಗಿಕ ಕಲೆಗಳು ಮುಂದೆ ತಾವಾಗಿ

ಒರುತ್ತವೆ.''

"ಹೀಗೇನು? ಅದನ್ನು ನಾನರಿಯೆ. ನೀವೇನಾದರೂ ಭವಿಷ್ಯವಾದಿಗಳಾಗಿದ್ದರೆ ಭವಿತವ್ಯತೆಯನ್ನು ಕಂಡುಹಿಡಿದಿರಬಹುದು."

ವ್ರಜಸುಂದರಿಯ ಮಾರ್ಮಿಕ ಭಾಷಣದ ಅರ್ಥವು ಕಾಲಾಚಾಂದನಿಗೆ ತಿಳಿಯಲಿಲ್ಲ. ಅವನು ಪ್ರಯಾಣದ ಪೂರ್ವ ಸಿದ್ಧತೆಗಾಗಿ ಅಲ್ಲಿಂದ ಹೊರಬಿದ್ದನು. ಕಾಲಾಚಾಂದನು ಹೋದ ಬಳಿಕ ವ್ರಜಸುಂದರಿಯು ಭೂಪಸುಂದರಿಯ ಒಳಿಗೆ ಹೋಗಿ, ಇಷ್ಟು ಹೊತ್ತಿನ ವರೆಗೆ ಜರುಗಿದ ಭಾಷಣಗಳ ಸಾರಾಂಶವನ್ನು ತಿಳಿಸಿದಳು. ಪತಿಯು ತನ್ನನ್ನು ಕರೆದೊಯ್ಯುವದಿಲ್ಲವೆಂಬ ಸಂಗತಿಯು ತಿಳಿದ ಕೂಡಲೆ ಭೂಪಸುಂದರಿಯ ದುಃಖಕ್ಕೆ ಪಾರಾವಾರವಿಲ್ಲದಾಯಿತು. ತಾನು ಕುರೂಪಿಯಾಗಿದ್ದರೂ ಸುದೈವದಿಂದ ತೇಜಸ್ವಿಯಾದ ಪತಿಯು ದೊರಕಿದನೆಂದು ಅವಳು ಕಡು ಹರುಷಗೊಂಡಿದ್ದಳು. ಈಗ ಮಾತ್ರ ಅವಳು ಆನಂದಗಿರಿಯ ಅತ್ಯುಚ್ಚವಾದ ಶಿಖರದಿಂದ ಅಧಃಪತನ ಹೊಂದಿದಳು. ಆಗಲವಳು ತನ್ನ ತಾಯಿಯನ್ನು ಕರೆದು ಎಲ್ಲ ಸಂಗತಿಗಳನ್ನು ತಿಳಿಸಿದಳು. ಈ ಸಂಗತಿಯನ್ನು ಕೇಳಿ ಅವಳ ತಾಯಿಗಾದ ದುಃಖವನ್ನು ವರ್ಣಿಸಲಳವಲ್ಲ. ಈ ವಿವಾಹದಿಂದ ತನ್ನ ಇಬ್ಬರು ಕುಮಾರಿಯರಿಗೂ ಸೌಖ್ಯವು ದೊರೆಯಲಿಲ್ಲೆಂದು ಅವಳು ಹಣೆ-ಹಣೆ ಬಡಕೊಂಡು ರೋದಿಸತೊಡಗಿದಳು. ತಾಯಿಯ ಪ್ರಲಾಪದಿಂದ ಭೂಪಬಾಲೆಯ ಅಂತಃಕರಣವು ಮತ್ತಿಷ್ಟು ಸುಡತೊಡಗಿತು. ಆಗ ಅವಳು ತನ್ನ ತಾಯಿಯನ್ನಾದರೂ ಸಾಂತ್ವನಗೊಳಿಸಬೇಕೆಂದು:— "ಅವ್ವಾ, ವೃಥಾ ಶೋಕಿಸಿದರೆ ಆಗುವದೇನು? ನಾನು ಆಜನ್ಮವಾಗಿ ನಿಮ್ಮ ಒಳಿಯಲ್ಲಿಯೆ ಇರುವೆನು. ಮುಂದೆ ನನ್ನ ನಾಥರಿಗೆ ದಯೆ ಹುಟ್ಟಿದರೆ ನನ್ನನ್ನು ಕರೆದೊಯ್ಯಲೊಲ್ಲರೇಕೆ. ವಿವಾಹವಾಗಿಯೂ ಆಗದಂತೆ ಇರಬೇಕೆಂದು ಈ ಹತಭಾಗಿನಿಯ ಪ್ರಾರಬ್ಧದಲ್ಲಿದ್ದರೆ ಅದಕ್ಕೆ ನೀವೇನು ಮಾಡುವಿರಿ?"

"ವ್ರಜಬಾಲೆ, ಭೂಪಬಾಲೆಯ ಅದೃಷ್ಟವು ಗೊತ್ತಾದಂತಾಯಿತು. ನೀನಾದರೂ ಪತಿಗೆ ಅನುಕೂಲೆಯಾಗಿ ನಡೆಯಮ್ಮಾ. ಕಾಲಾಛಾಂದನನ್ನು

ವರಿಸಬೇಕೆಂದು ವಿಧಿಯು ನಿನ್ನ ಹಣೆಯಲ್ಲಿ ಬರೆದದ್ದರಿಂದ ನಿನಗೆ ಗದಾ ಧರನು ಲಭಿಸಲಿಲ್ಲ. ಕಾಲಾಚಾಂದನು ಅವನಿಗಿಂತ ವರಿಷ್ಠನಿರುವನು. ನೀನಾದರೂ ನಿನ್ನ ಆಯುಷ್ಯವನ್ನು ಆನಂದಮಯವಾಗಿ ಮಾಡಿಕೊ ಹಿಂದಿನ ಎಲ್ಲ ಸಂಗತಿಗಳನ್ನು ಮರೆತುಬಿಡು. ನೀನು ಆನಂದದಲ್ಲಿರುವ ದನ್ನು ನೋಡಿದರೆ ನನ್ನ ನೇತ್ರಗಳು ಸಾಫಲ್ಯಹೊಂದುವವು; ಹೊಟ್ಟೆಯು ತಣ್ಣಗಾಗುವದು. ತಿಳಿದವಳಾದ ನಿನಗೆ ನಾನು ಇದಕ್ಕಿಂತ ಹೆಚ್ಚಿಗಿ ನ್ನೇನು ಹೇಳಲಿ?''

ತಾಯಿಯು ಕಣ್ಣು ತುಂಬ ನೀರು ತಂದು ಹೀಗೆ ನುಡಿದದ್ದರಿಂದ ವ್ರಜಸುಂದರಿಯ ಅಂತಃಕರಣವು ಕರಗಿತು. ಸದ್ಯಕ್ಕಾದರೂ ಆನಂದ ದಲ್ಲಿರಬೇಕೆಂಬ ಬುದ್ಧಿಯಿಂದ ಅವಳು ತಾಯಿಯನ್ನು ಸಂತೈಸತೊಡ ಗಿದಳು:

"ಅವ್ವಾ, ಹಡೆದವರಿಗೆ ದುಃಖವನ್ನುಂಟು ಮಾಡುವದು ಪುತ್ರ ಧರ್ಮವಲ್ಲ. ನಿಮ್ಮ ಮನಸ್ಸಿನ ವಿರುದ್ಧವಾಗಿ ನಡೆದು, ನಿಮಗೆ ದುಃಖ ಕೊಡಬಾರದೆಂಬ ಉದ್ದೇಶದಿಂದ ನಾನು ಈ ವಿವಾಹಕ್ಕೆ ಸಮ್ಮತಿಸಿದೆನು. ನಾನು ಎಂತಹ ನಿಷ್ಠುರಳಿದ್ದರೂ ತಾಯಿ-ತಂದೆಗಳಿಗೆ ದುಃಖಕೊಡ ಬೇಕೆಂಬ ಮನಸ್ಸುಳ್ಳವಳಾಗಿಲ್ಲ. ಹಡೆದವರ ದುಃಖವನ್ನು ನಾನು ಕಣ್ಣಾರೆ ನೋಡಲಾರೆನು. ನಿಮ್ಮ ಮನಸ್ಸಿಗೆ ಆನಂದವನ್ನುಂಟುಮಾಡು ವದು ನನಗೆ ಎಷ್ಟು ಸಾಧ್ಯವಿದೆಯೋ ಅಷ್ಟು ಸಾಹಸ ಮಾಡುವೆನು. ನನ್ನ ಯೋಗ್ಯತೆಗೆ ಮೀರಿದ ಕಾರ್ಯವಿದ್ದರೆ ಅದನ್ನು ನಾನಾದರೂ ಹೇಗೆ ಕೈಗೂಡಿಸಲಿ?''

ವ್ರಜಸುಂದರಿಯು ತನ್ನ ಬಾಲಸಖಿಯಾದ ಉಷಾಸುಂದರಿಯ ಭೆಟ್ಟಿಯಾಗಿ ಬರಬೇಕೆಂದು ಅವಳ ಮನೆಗೆ ಹೋದಳು. ಉಷಾಸುಂದ ರಿಯು ಅವಳ ಜೀವದ ಗೆಳತಿಯಾಗಿದ್ದಳು. ತಾಯಿ-ತಂದೆಗಳಿಂದ ಮುಚ್ಚಿಟ್ಟುಕೊಂಡ ಸಂಗತಿಗಳನ್ನೆಲ್ಲ ವ್ರಜಸುಂದರಿಯು ಅವಳಿಗೆ ಹೇಳು ತ್ತಿದ್ದಳು. ತನ್ನ ಮೈತ್ರಿಣಿಯು ಮನಸ್ಸಿನ ವಿರುದ್ಧವಾಗಿ ನಡೆದ ವಿವಾ ಹದ ಪರಿಣಾಮವು ಒಳಿತಾಗಲಾರದೆಂದು ಉಷೆಯು ತಿಳಿದಿದ್ದಳು. ಈ ಘಟನೆ

ಯಿಂದು ಅವಳ ಮನಸ್ಸಾದರೂ ಅತ್ಯಂತ ಖೇದಗೊಂಡಿತ್ತು. ಪಾಲಿಗೆ ಬಂದದ್ದು ಪಂಚಾಮೃತವೆಂದು ತಿಳಿದು, ಉಭಯ ಕುಲಕ್ಕೂ ಕೀರ್ತಿ ತರುವಂತೆ ವರ್ತಿಸುವದಕ್ಕಾಗಿ ವ್ರಜಸುಂದರಿಗೆ ಉಪದೇಶಿಸಬೇಕೆಂದು ಅವಳ ಮನಸ್ಸಿನಲ್ಲಿತ್ತು. ಅಂದು ಕಾಲಾಚಾಂದನು ವ್ರಜಬಾಲೆಯನ್ನು ಕರೆದು ಕೊಂಡು ವೀರಜಾವನಕ್ಕೆ ಹೊರಡುವವನಿರುವನೆಂಬ ಸುದ್ದಿಯು ತಗ ಲಿದ ಕೂಡಲೆ ಅವಳು ವ್ರಜಸುಂದರಿಯ ಮನೆಗೆ ಹೋಗಬೇಕೆಂದು ಸಿದ್ಧ ಳಾಗಿದ್ದಳು; ಅಷ್ಟರಲ್ಲಿ ಕರೆಕಳುಹಿಸಿದಂತೆ ವ್ರಜಸುಂದರಿಯೇ ಅಲ್ಲಿಗೆ ಬಂದು ಬಿಟ್ಟಳು. ಅವಳ ವಿಷಣ್ಣವಾದ ಮುಖಮುದ್ರೆಯನ್ನು ನೋಡಿ ಉಷಾಸುಂದರಿಯು ಬಹಳೇ ಕ್ಲೇಶಗೊಂಡಳು.

"ಉಷಾಸುಂದರಿ, ಜಗನ್ನಾಥನ ಸೇವೆಯಲ್ಲಿ ಗತಾಯುಷ್ಯವನ್ನು ಕಳೆಯಬೇಕೆಂದು ನೀನು ಯೋಚಿಸಿದ್ದೆಯಲ್ಲವೆ? ನೀನು ಒಬ್ಬಳೇ ಹೋಗ ಲಿಕ್ಕೆ ಮನಸ್ಸಿಲ್ಲದೆ ಕಾಲಹರಣ ಮಾಡತೊಡಗಿದ್ದೆಯೆಂಬಂತೆ ತೋರು ತ್ತದೆ. ಇನ್ನು ನಿನಗೆ ಜೋಡು ದೊರೆಯಿತು. ನೀನು ಎಂದು ಹೋಗುವೆ ಯೆಂಬದನ್ನು ತಿಳಿಸಿಬಿಡು."

"ನನಗಾರು ಜೋಡು ದೊರೆಯಬೇಕೆ?"

"ನಿನ್ನ ಮೈತ್ರಿಣಿಯು ನಿನ್ನ ಜೊತೆಗೆ ಬರಲಿಕ್ಕೆ ಸಿದ್ಧಳಾಗಿರುವಳು."

"ಅವಳಾರು?" ಎಂದು ಉತ್ಕಂಠೆಯಿಂದ ಉಷಾಸುಂದರಿಯು ಕೇಳಿದಳು."

"ಈ ವ್ರಜಬಾಲೆಯು!"

ವ್ರಜಸುಂದರಿಯು ಮಾತುಗಳನ್ನು ಕೇಳಿ ಉಷಾಸುಂದರಿಗೆ ಪರಮಾ ಶ್ಚರ್ಯವಾಯಿತು. ಸ್ವಲ್ಪ ವೇಳೆಯ ವರೆಗೆ ವಿಚಾರಿಸಿದ ಮೇಲೆ ಅವಳಿಗೆ ವ್ರಜಸುಂದರಿಯ ಮನೋದಯವು ಗೊತ್ತಾಯಿತು. ತನ್ನ ಮನಸ್ಸಿನ ವಿರುದ್ಧವಾದ ಘಟನೆಯಿಂದ ಅವಳು ಹೀಗೆ ಉದಾಸೀನಳಾಗಿರುವಳೆಂಬ ದನ್ನು ಉಷಾಸುಂದರಿಯು ಕಂಡು ಹಿಡಿದಳು. ಆಗ ಅವಳು ವ್ರಜಸುಂದರಿ ಯನ್ನು ಕುರಿತು ಸದಯಾಂತಃಕರಣದಿಂದ:—"ವ್ರಜಸುಂದರಿ!"

"ಅಲ್ಲಲ್ಲ, ನಾನು ವ್ರಜಸುಂದರಿಯಲ್ಲ; ವ್ರಜಬಾಲೆಯಿರುವೆನು,

ಬಲಾತ್ಕಾರದಿಂದಾದ ವಿವಾಹವು ಎಂದೂ ಶಾಸ್ತ್ರವಿಹಿತವಾಗಲಾರದು.''

''ನಿನ್ನ ಇಚ್ಛೆಯಂತೆ ನಾನು ನಿನ್ನನ್ನು ವ್ರಜಬಾಲೆಯೆಂದೇ ಸಂಬೋಧಿಸುವೆನು'' ಎಂದು ಉಷಾಸುಂದರಿಯು ನುಡಿದು:—''ವ್ರಜ ಬಾಲೆ, ನೀನು ಹೀಗೆ ಮಾತನಾಡುವದು ಒಳಿತೆ? ನಿನ್ನ ಈ ನಡತೆಯು ಜನರ ಮನಸ್ಸಿಗೆ ಬರುವದೆ? ವಿವಾಹವಾದ ಮೇಲೆ ನೀನು ಮನಬಂದಂತೆ ನಡೆಯಲಾರಂಭಿಸಿದೆಯೆಂದರೆ ನಿನ್ನ ಕೀರ್ತಿಗೆ ಕಲಂಕವು ಒರುವದು. ಮನಸ್ಸಿನಂತೆ ಕಾರ್ಯವಾಗಲಿಲ್ಲೆಂದು ಸಂಸಾರವಿರತಿಯನ್ನು ತಳೆಯುವರೆ? ನಾನು ಹತಭಾಗಿನಿಯಿರುವದರಿಂದ ತೀರ್ಥಯಾತ್ರೆಗಳನ್ನು ಸೇವಿಸುತ್ತಿರುವೆನು. ಸುಭಗೆಯಾದ ನಿನಗೆ ಅವುಗಳ ಹವ್ಯಾಸವೇಕೆ? ನೀನು ಇನ್ನು ತಂದೆ-ತಾಯಿಗಳ ಹಾಗು ಪತಿಯ ಆಜ್ಞೆಯಂತೆ ನಡೆದು, ಸುಚರಿತಳೂ ಸಾಧ್ವಿಯೂ ಸಚ್ಛೀಲಳೂ ಎಂದು ಹೆಸರು ಪಡೆ. ಕಾಲಾಚಾಂದನೇನು ಸಾಮಾನ್ಯನಿರುವದಿಲ್ಲ. ಅವನು ನಿನಗೆ ಅನುರೂಪನಾಗಿರುವನು. ಇನ್ನು ನೀನು ಗದಾಧರನನ್ನು ಪೂರ್ಣವಾಗಿ ಮರೆಯುವದು ಶ್ರೇಯಸ್ಕರವು. ಸತೀವಿಹಿತ ಕರ್ತವ್ಯವನ್ನು ಮರೆತು ನಡೆದರೆ ನೀನು ಸ್ವೈರಿಣಿಯೆಂದು ಹೆಸರಿಡಿಸಿಕೊಳ್ಳುವೆ.''

''ಉಷಾಸುಂದರಿ!'' ವ್ರಜಬಾಲೆಯು ಕಣ್ಣು ತುಂಬ ನೀರು ತಂದು:—''ನಾನು ನನ್ನ ಹೃದಯಸ್ಥ ದೇವತೆಗಳಾದ ಗದಾಧರರನ್ನು ಹೇಗೆ ಮರೆಯಲಿ? ನನ್ನ ಪ್ರೇಮಮೂರ್ತಿಯನ್ನು ನನ್ನ ಹೃದಯ ಮಂದಿರದಿಂದ ಹೇಗೆ ಉಚ್ಚಾಟನೆಗೊಳಿಸಲಿ! ಹೃದಯಾಕಾಶವನ್ನೆಲ್ಲ ಬಿಡುವಿಲ್ಲದೆ ವ್ಯಾಪಿಸಿದ ಪ್ರೇಮದಲ್ಲಿ ಅನ್ಯಪ್ರೇಮಕ್ಕೆ ಹೇಗೆ ಎಡೆಗೊಡಲಿ? ಉಷಾಸುಂದರಿ, ಹೇಳು; ನೀನೇ ಹೇಳು. ನನ್ನ ಹೃದಯದಲ್ಲಿ ಸ್ಥಿರವಾಗಿ ನೆಲಸಿದ ಪ್ರೇಮಮಯ ಪಾವನಮೂರ್ತಿಯನ್ನು ಹೇಗೆ ಹೊರಗೆ ಹಾಕಲಿ? ಕಾಲಾಚಾಂದನು ಗದಾಧರರಿಗಿಂತ ಶ್ರೇಷ್ಠನಿರುವನೆಂಬದರಲ್ಲಿ ವಾದವಿಲ್ಲ. ಕಾಯಾವಾಚಾ ಮನಸ್ಸಿನಿಂದ ಒಬ್ಬನನ್ನು ವರಿಸಿದ ಮೇಲೆ, ಮತ್ತೊಬ್ಬನಲ್ಲಿ ಅನುರಾಗವುಳ್ಳವರಾಗುವದು ಕುಲಯುವತಿಯರ ಶೀಲವೆ? ಗದಾಧರರಿಗಿಂತ ಶ್ರೇಷ್ಠನೆಂದು ಕಾಲಾಚಾಂದನನ್ನೂ, ಕಾಲಾಚಾಂದನಿಗಿಂತ

ಶ್ರೇಷ್ಠನೆಂದು ಮತ್ತೊಬ್ಬನನ್ನೂ ಬಯಸುತ್ತ ಹೋಗುವದು ಆರ್ಯಲಲನೆಯರಿಗೆ ಶೋಭಿಸುವದೆ? ಹಾಗೆ ಮಾಡುತ್ತ ಹೋದರೆ ಅದು ಸತೀಧರ್ಮವೆನಿಸುವದೆ? ನಾನು ಕಾಲಾಚಾಂದನಲ್ಲಿ ಅನುರಕ್ತಳಾದರೆ ಸ್ವೈರಿಣಿಯಾದಂತಾಗುವೆನೋ ಇಲ್ಲವೋ?''

"ವ್ರಜಬಾಲೆ, ನಿನ್ನ ಮಾತುಗಳು ಸರಿಯಾಗಿರುವವು. ಸದಸದ್ವಿವೇಕ ಬುದ್ಧಿಯುವಳಾದ ನಿನಗೆ ಉಪದೇಶಿಸುವ ಯೋಗ್ಯತೆಯು ನನ್ನದಲ್ಲ. ನಿನ್ನ ಧರ್ಮಶ್ರದ್ಧೆಯು ಪ್ರಶಂಸನೀಯುವಿರುವದು. ಗದಾಧರನನ್ನು ನೀನು ಅಗ್ನಿ-ಬ್ರಾಹ್ಮಣರ ಮುಖಾಂತರವಾಗಿ ವರಿಸಿಲ್ಲ. ಒಮ್ಮೆ ಘಟನೆಯಾದ ಬಳಿಕ ಎಷ್ಟು ಕನ್ಯಾ-ವರಗಳು ಬಿಡುಗಡೆ ಹೊಂದುವದಿಲ್ಲ? ವಿವಾಹಸಂಸ್ಕಾರವಾದ ಮೇಲೆಯೇ ಪತಿ-ಪತ್ನಿಯರೆಂಬ ಹೆಸರು ಪ್ರಾಪ್ತವಾಗುವದು''

"ಗದಾಧರರೊಡನೆ ವಿವಾಹವಾಗಬೇಕೆಂದು ಎಂದು ನನ್ನ ಮನಸ್ಸಿನಲ್ಲಿ ನಿಶ್ಚಯಿಸಿಕೊಂಡೆನೊ, ಅಂದಿನಿಂದ ಅವರು ನನ್ನ ಮಾನಸ ಪತಿಗಳಾಗಿರುವರು. ಮನೋಬಲಕ್ಕಿಂತ ಸಂಸ್ಕಾರದ ಬಲವು ಹೆಚ್ಚಿನದೆಂದು ನಾನಂತೂ ಅನ್ನಲಾರೆನು. ಕನ್ಯಾವರರ ಯೋಜನೆಯಲ್ಲಿ ಪರಸ್ಪರರ ಸಂಬಂಧವಿಲ್ಲದೆ ಅವರ ಪಾಲಕರಿಂದಲೆ ವಿವಾಹವು ನಿಶ್ಚಿತವಾಗಿದ್ದರೆ, ಮುಂದೆ ಯಾವ ಕಾರಣದಿಂದಲಾದರೂ ಆ ನಿಶ್ಚಯುವನ್ನು ತಿರುಗಿಸಲಿಕ್ಕೆ ಮಾರ್ಗವಿರುವದು.''

"ನೀನು ಕಾಲಾಚಾಂದನೊಡನೆ ಸಂಸಾರರತಳಾದರೆ ನಿನ್ನನ್ನು ದುರ್ಮಾರ್ಗಿಣಿಯೆಂದು ಯಾರು ಹೇಳುವರು? ನೀನು ಅವನಲ್ಲಿ ಭಕ್ತಿಭಾವ ವಿರಹಿತಳಾದರೆ ಮಾತ್ರ ನಿನಗೆ ಸ್ವೇಚ್ಛಾಚಾರಿಣಿಯೆಂದು ಹೆಸರು ಬರುವದು ನಿಶ್ಚಿತವು.''

"ಜನರು ನನ್ನ ವಿಷಯದಲ್ಲಿ ಅಂಧರಿರುವರು. ನಾನು ಲೋಕ ನಿಮಿತ್ತವಾಗಿ ದುರ್ಮಾರ್ಗಿಣಿಯಾಗಲಾ? ನಾನು ನನ್ನ ಮನಸ್ಸಿನ ಮೇಲೆ ಪ್ರಸ್ಥಾಪಿಸಿದ ವಿವೇಕ ಸಾಮ್ರಾಜ್ಯವನ್ನು ಉಧ್ವಸ್ತಗೊಳಿಸಲಾ? ಹಾಗೆ ಮಾಡುವದು ಧರ್ಮದೃಷ್ಟಿಯಿಂದ ಯೋಗ್ಯವೆನಿಸುವದೆ? ಉಷಾಸುಂದರಿ,

ಜನರು ಕುರುಡರೆಂದು ಜಗನ್ನಿಯಾಮಕನು ಅವರಂತೆ ಇರುವದಿಲ್ಲ. ನನ್ನ ಮನಸ್ಸಿನ ಪವಿತ್ರತೆಯ ಬಗ್ಗೆ ಅವನು ಸರ್ವಸಾಕ್ಷಿಯಾಗಿರುವನು.''

ಆ ಮೇಲೆ ಉಷಾಸುಂದರಿಯು ಏನೂ ಮಾತಾಡಲಿಲ್ಲ. ವ್ರಜಬಾಲೆಯ ಆಯುಷ್ಯವು ದುಃಖಮಯವಾಯಿತೆಂದು ಅವಳಿಗೆ ಪೂರ್ಣವಾಗಿ ತಿಳಿಯಿತು. ವ್ರಜಬಾಲೆಯು ಅನುಪಮವಾದ ಗುಣದ ಹಾಗು ಅದ್ವಿತೀಯ ಸೌಂದರ್ಯದ ಸಾರ್ಥಕತೆಯಾಗಲಿಲ್ಲೆಂದು ಅವಳು ಕ್ಲೇಶಗೊಂಡಳು. ವ್ರಜಬಾಲೆಯಾದರೂ ಎಷ್ಟೋ ವೇಳೆಯ ವರೆಗೆ ಮೌನದಿಂದ ಕುಳಿತಿದ್ದಳು. ಅನಂತರದಲ್ಲಿ ಅವಳು ತನ್ನ ಮೌನವನ್ನು ಮುರಿದು:—

''ಉಷಾಸುಂದರಿ, ನಾನಿನ್ನು ಶ್ರೀಪುರಕ್ಕೆ ಹೆಜ್ಜೆಯಿಡುವದಿಲ್ಲ.''

''ವೀರಜಾವನದಲ್ಲಿ ಪತಿಯ ಸಾನ್ನಿಧ್ಯದಲ್ಲಿಯೇ ಇರುವೆಯಾ?''

''ಅಲ್ಲಿಯಾದರೂ ಒಂದೆರಡು ದಿನಗಳಿಗಿಂತ ಹೆಚ್ಚಿಗೆ ಇರಲಾರೆನು.''

''ಹಾಗಾದರೆ ಅಲ್ಲಿಗೆ ಹೋಗುವೆಯೇಕೆ?''

''ತಾಯಿ-ತಂದೆಗಳ ಮನಸ್ಸು ಸಂತುಷ್ಟಗೊಳಿಸುವದಕ್ಕಾಗಿ.''

''ನೀನು ಪತಿಮಂದಿರದಿಂದ ಹೊರಬಿದ್ದರೆಂದರೆ ಅವರಿಗೆ ದುಃಖವಾಗುವದಿಲ್ಲವೆ?''

''ನನ್ನ ಕಣ್ಣು ಮರೆಯಾಗಿ ಏನಾದಗೊಡವೆಯು ನನಗೇನು? ಕಾಲಾಚಾಂದನ ಅಂಜಿಕೆಗಾಗಿಯೆ ನನ್ನನ್ನು ನನ್ನ ತಂದೆಯು ಅವನ ಕೊರಳಿಗೆ ಕಟ್ಟಿದನು. ನಾನು ಅವನೊಡನೆ ಹೋಗುವದಕ್ಕೆ ಅಸಮ್ಮತಿಯನ್ನು ತೋರಿಸಿದರೆ, ನನ್ನ ತಂದೆ-ತಾಯಿಗೆ ದುಃಖವಾಗುವದು. ಕಾಲಾಚಾಂದನಾದರೂ ಅವರ ಮೇಲೆ ಕ್ರೋಧಗೊಳ್ಳುವನು. ಅತ್ಯಂತ ಸಂತಾಪಿಯಾದ ಅವನಿಂದ ನನ್ನ ಹಡೆದವರಿಗೆ ಅಪಾಯವಾಗಬಾರದೆಂಬ ಮನಸ್ಸಿನಿಂದಲೆ ನಾನು ಈಗ ವೀರಜಾವನಕ್ಕೆ ಹೊರಟಿರುವೆನು. ಅಲ್ಲಿಗೆ ಹೋದ ಮೇಲೆ ನಾನು ನನ್ನ ಇಚ್ಛೆಯ ಮೇರೆಗೆ ನಡೆಯುಲಿಕ್ಕೆ ಸ್ವತಂತ್ರಳಾಗುವೆನು. ಅಲ್ಲಿಯ ನನ್ನ ವರ್ತನದ ಬಗ್ಗೆ ನನ್ನ ತಂದೆ-ತಾಯಿಗಳು ಹೊಣೆಗಾರರಾಗುವದಿಲ್ಲವಷ್ಟೆ?''

'ನೀನು ವೀರಜಾವನದಿಂದ ಎಲ್ಲಿಗೆ ಹೋಗುವೆ?''

"ಪುರಿಗೆ."

"ಏನು? ಜಗನ್ನಾಥಪುರಿಗೆ ಹೋಗುವೆಯಾ!"

"ಹೌದು; ಜಗನ್ನಾಥನ ಸಾನ್ನಿಧ್ಯದಲ್ಲಿ ಶೇಷಾಯುಷ್ಯವನ್ನು ಕಳೆಯಬೇಕೆಂದು ನಾನು ಸಂಕಲ್ಪ ಮಾಡಿಕೊಂಡಿರುವೆನು."

"ವ್ರಜ. ನೀನು ಪತಿ ಮಂದಿರವನ್ನು ತ್ಯಜಿಸುವದು ತೀರ ಅಲೌಕಿಕವೆಂದು ನನ್ನ ಭಾವನೆಯುಂಟು."

"ಅದಕ್ಕೆ ನನ್ನ ಉಪಾಯವಿಲ್ಲ. ನಾನಂತೂ ವೀರಜಾವನದಲ್ಲಿ ಇರಬಾರದೆಂದು ದೃಢಸಂಕಲ್ಪ ಮಾಡಿಕೊಂಡಿರುವೆನು."

"ವ್ರಜಬಾಲೆ, ನಿನ್ನ ತಂದೆಯ ಕೃತಿಯೂ ಕಾಲಾಚಾಂದನ ಈರ್ಷೆ-ಯೂ ಗದಾಧರನ ಹಾಗು ನಿನ್ನ ಸೌಖ್ಯವನ್ನು ಸೂರೆಗೊಳಿಸಿದವು!"

ನಿಟ್ಟುಸಿರಬಿಟ್ಟು ಉಷಾಸುಂದರಿಯು ಹೀಗೆ ನುಡಿದ ಕೂಡಲೆ ವ್ರಜಬಾಲೆಯ ಕಣ್ಣುಗಳು ನೀರಿನಿಂದ ತುಂಬಿದವು. ಕೆಲವು ವೇಳೆಯ ಮೇಲೆ ಅವಳು ಉಷಾಸುಂದರಿಯನ್ನು ಕುರಿತು: "ಪುರಿಗೆ ಹೋಗುವದಕ್ಕಿಂತ ಮೊದಲು ನಾನು ಇನ್ನೊಂದು ಕೆಲಸ ಮಾಡಬೇಕೆಂದಿರುವೆನು. ನನ್ನ ಆ ಕೆಲಸವು ನೆರವೇರಿದರೆ ಪುರಿಗೆ ಹೋಗುವ ಕಾರಣವೇ ಉಳಿಯುವದಿಲ್ಲ."

"ಅದೇನು?" ಉಷಾಸುಂದರಿಯು ಉತ್ಕಂಠೆಯಿಂದ ಕೇಳಿದಳು.

"ಗದಾಧರರು ನನ್ನನ್ನು ತಮ್ಮ ಪತ್ನಿಯೆಂದು ಸ್ವೀಕರಿಸುವರೋ ಹೇಗೋ ನೋಡಬೇಕೆಂದು ನಾನು ನಿಶ್ಚಯಿಸಿರುವೆನು."

ವ್ರಜಬಾಲೆಯಾಡಿದ ಮಾತುಗಳಿಂದ ಉಷಾಸುಂದರಿಗೆ ಸೋಜಿಗವಾಯಿತು. ಪರಕ್ಷಣದಲ್ಲಿ ಅವಳು ತನ್ನ ಮಿತ್ರೆಯ ವಿಷಯವಾಗಿ ತಿರಸ್ಕಾರಭಾವನೆಯುಳ್ಳವಳಾದಳು. ಆಗ ಅವಳು ನಿಂದಾವ್ಯಂಜಕವಾದ ಮಾತುಗಳನ್ನಾಡತೊಡಗಿದಳು.

"ವ್ರಜಬಾಲೆ, ನಿನ್ನ ಈ ವರ್ತನವು ಅತ್ಯಂತ ನಿಂದ್ಯವಾದದ್ದಿರುವದು. ಒತ್ತಾಯದಿಂದಲಾದರೂ ಕಾಲಾಚಾಂದನನ್ನು ವಿಧಿಪೂರ್ವಕವಾಗಿ ವರಿಸಿರುವದರಿಂದ ನೀನು ಅವನ ಧರ್ಮಪತ್ನಿಯಾಗಿರುವೆ. ಸ್ತ್ರೀಯರು ಅನೇಕ ಸಾರೆ ವಿವಾಹ ಸಂಸ್ಕಾರ ಹೊಂದಲಿಕ್ಕೆ ಅನಧಿಕಾರಿಗಳಿರುವರು.

ಕಾಲಾಚಾಂದನ ವಿವಾಹಿತ ಪತ್ನಿಯಾದ ನೀನು ಅನ್ಯಸ್ಥಳದಲ್ಲಿ ಪ್ರೇಮ ವಿಡುವದಕ್ಕೆ ಅನಧಿಕಾರಿಯಾಗಿರುವೆ. ಒಂದು ವೇಳೆ ನಿನ್ನಿಂದ ಈ ಬಗೆಯ ಕೃತಿಗಳು ಘಟಿಸಿದರೆ, ನೀನು ಸಮಾಜದ ನಿಂದೆಗೊಳಗಾಗುವೆ; ಮಹಾ ಪಾತಕಿಯಾಗುವೆ. ಪರಪುರುಷನಾದ ಗದಾಧರನಲ್ಲಿ ಪ್ರೇಮವಿಟ್ಟರೆ, ನೀನು ಪರಮಾತ್ಮನ ಓಲಗದಲ್ಲಿ ನಿಶ್ಚಯವಾಗಿ ದಂಡನೆಗೊಳಗಾಗುವೆ. ವ್ರಜ, ನೀನು ವಿಕಾರವಶಳಾಗಿ ಸದಸದ್ವಿವೇಕ ಬುದ್ಧಿಯನ್ನು ತ್ಯಜಿಸ ಬೇಡ. ನಿನ್ನ ಪ್ರಯತ್ನಕ್ಕೆ ಯಶವು ದೊರೆಯದೆ, ನೀನು ಸ್ವೈರಿಣಿ ಯೆಂಬ ಪದವಿಯನ್ನು ಹೊಂದುವೆಯೆಂದು ನಾನು ಖಂಡಿತವಾಗಿ ಹೇಳು ವೆನು. ನೀನು ಲಜ್ಜಾಹೀನಳಾಗಿ ವರ್ತಿಸುತ್ತಿದ್ದರೂ ವಿವೇಕಶಾಲಿಯಾದ ಗದಾಧರನು ನಿನ್ನಂತೆ ತಾಂಡವನೃತ್ಯ ಮಾಡಲಿಕ್ಕೆ ಎಂದೂ ಸಿದ್ಧನಾಗ ಲಾರನು.''

''ಉಷಾಸುಂದರಿ, ಈಗಾದ ವಿವಾಹವು ನನ್ನ ಮನಸ್ಸಿನ ಮೇಲೆ ಯಾವ ವಿಧದ ಸಂಸ್ಕಾರವನ್ನೂ ಮಾಡಿಲ್ಲ. ನಾನೇನು ಉನ್ಮತ್ತನಾದ ಕಾಲಾಚಾಂದನಲ್ಲಿ ತಿಲಾಂಶವಾದರೂ ಪ್ರೇಮವುಳ್ಳವಳಾಗಿರುವದಿಲ್ಲ. ಹೀಗಿದ್ದ ಮೇಲೆ ಕಾಲಾಚಾಂದನು ನನಗೆ ಪರಪುರುಷನಲ್ಲವೆ? ಗದಾಧರರ ಪ್ರೇಮಸಂಸ್ಕಾರವು ನನ್ನ ಮನಸ್ಸಿನ ಮೇಲೆ ಚನ್ನಾಗಿ ಆಗಿರುವದರಿಂದ, ಅವರು ನನ್ನ ಮಾನಸ ಪತಿಗಳಾಗಿರುವರು. ಅವರನ್ನು ವಿವಾಹವಾಗ ಲಿಕ್ಕೆ ಯಾವ ಅಡ್ಡಿಯಿರುವದು? ಧರ್ಮದ ಅಂಧಶ್ರದ್ಧೆಯ ಜನರಿಗೆ ನನ್ನ ವರ್ತನವು ಅಯೋಗ್ಯವಾಗಿ ಕಂಡರೆ ಅದಕ್ಕೆ ನಾನೇನು ಮಾಡಲಿ? ಪವಿತ್ರ ಹೃದಯದವಳಾದ ನಾನು ನನ್ನ ಮಾನಸ ಪತಿಯನ್ನು ಕೂಡುವದರಿಂದ ಪರಮಾತ್ಮನ ನ್ಯಾಯಬುದ್ಧಿಗೆ ಪಾತಕಿಯಾಗಿ ತೋರಲಾರೆನು. ಗದಾ ಧರರು ಸಾಮಾನ್ಯ ಜನತೆಯಂತೆ ಮೂಢಧರ್ಮದಿಂದ ನಡೆಯುವವರಾಗಿ ದ್ದರೆ ಅದಕ್ಕೆ ನನ್ನ ಉಪಾಯವಿಲ್ಲ. ಒತ್ತಾಯದ ವಿವಾಹದಿಂದ ಎಷ್ಟು ಕನ್ಯೆಯರು ದುಃಖಾಬ್ಧಿಯಲ್ಲಿ ಮುಳುಗುತ್ತಿರುವರೆಂಬದನ್ನು ನೀನು ತಿಳಿ ದಿರುವದಿಲ್ಲ. ಅವರೆಲ್ಲರಿಗೆ ನನ್ನ ವರ್ತನವು ಆದರ್ಶವಾಗಬೇಕೆಂದೇ ನಾನು ಗದಾಧರರನ್ನು ವರಿಸಲಿಕ್ಕೆ ಮನಸ್ಸು ಮಾಡಿರುವೆನು.''

"ವ್ರಜಬಾಲೆ! ಇದು ಆದರ್ಶ ವರ್ತನವೆ?"

"ಒಮ್ಮೆಯಲ್ಲವೆಂದರೆ ಸಾವಿರ ಸಾರೆ ಹೇಳುವೆನು. ಧರ್ಮಶಾಸ್ತ್ರ ದೃಷ್ಟಿಯಿಂದ ನನ್ನ ವಿವಾಹವು ಅಸುರ ವಿವಾಹವೆಂದು ಹೇಳಬಹುದು. ಬಲಾತ್ಕಾರದಿಂದಾದ ವಿವಾಹಕ್ಕೆ ಧರ್ಮಶಾಸ್ತ್ರವು ಸಮ್ಮತಿಯನ್ನು ಕೊಡ ಬಾರದಾಗಿತ್ತು. ಈಗ ನಾನು ನನ್ನ ಇಚ್ಛಿತ ಪತಿಯನ್ನು ವರಿಸಿದರೆ ನನ್ನ ವರ್ತನವು ಜಗತ್ತಿಗೆ ಆದರ್ಶವಾಗದೆ ಇರುವದೆ? ಬಲಾತ್ಕಾರದಿಂದ ವಿವಾಹವಾಗಬೇಕೆನ್ನುವವರಿಗೂ, ಒತ್ತಾಯದಿಂದ ಲಗ್ನ ಮಾಡುವವರಿಗೂ ನನ್ನ ಆಚರಣೆಯು ಚನ್ನಾಗಿ ದೃಷ್ಟಾಂತವಾಗಬೇಕೆಂದೇ ನಾನು ಶಾಸ್ತ್ರ ವಿರುದ್ಧವಾಗಿ ನನ್ನ ಪ್ರಣಯ ದೇವತೆಯನ್ನು ವರಿಸಬೇಕೆಂದಿರುವೆನು. ನನ್ನ ವರ್ತನವು ನಿರ್ದೋಷಿಯಾದದ್ದಿರುವದು. ಇನ್ನು ನಾನು ವಿವಾಹವಾದರೆ ಪಾಪವು ಬರಲಾರದು. ಅಲ್ಲದೆ, ಪರತಂತ್ರರಾದ ಕನ್ಯೆಯರಿಗೆ ಈ ಹೊಸ ಮಾರ್ಗವನ್ನು ತೋರಿಸಿಕೊಟ್ಟ ಬಗ್ಗೆ ನನಗೆ ಪುಣ್ಯವೇ ಲಭಿಸುವದು."

"ಗದಾಧರನು ನಿನ್ನ ಇಚ್ಛೆಯಂತೆ ನಡೆಯುದಿದ್ದರೆ?"

'ಜಗನ್ನಾಥನಾದರೂ ತನ್ನ ಸಾನ್ನಿಧ್ಯದಲ್ಲಿರಿಸಿಕೊಳ್ಳಲಿಕ್ಕಿಲ್ಲವೇನು?'

ವ್ರಜಬಾಲೆಯು ವಿಲಕ್ಷಣವಾದ ಹೃದಯದವಳಿರುವಳೆಂದು ಉಷಾ ಸುಂದರಿಯು ತಿಳಿದಳು.

ವ್ರಜಬಾಲೆಯು ಕಾಲಾಚಾಂದನೊಡನೆ ಶ್ರೀಪುರವನ್ನು ಬಿಟ್ಟು ವೀರ ಜಾವನಕ್ಕೆ ತೆರಳಿದಳು.

---

## ಪೂರ್ವ-ಪಶ್ಚಿಮ.

ವಿವಾಹಾನಂತರದಲ್ಲಿ ಕಾಲಾಚಾಂದನ ಸ್ಥಿತಿಯು ಬಹಳೇ ಚಮತ್ಕಾರಿಕವಾಗಿತ್ತು. ವ್ರಜಬಾಲೆಯ ಪ್ರಾಪ್ತಿಗಾಗಿ ಅವನು ಬಹಳೇ ಸಾಹಸ ಮಾಡಿದ್ದನು. ಪ್ರಸಂಗವೊದಗಿದರೆ ಆ ಕಾರ್ಯದಲ್ಲಿ ತನ್ನ ಪ್ರಾಣವನ್ನಾದರೂ ಅರ್ಪಿಸಲಿಕ್ಕೆ ಸಿದ್ಧನಾಗಿದ್ದನು. ಲಾವಣ್ಯಮಯಿಯಾದ ವ್ರಜ

ಬಾಲೆಯು ವಿವಾಹದಿಂದ ತನಗೆ ಸ್ವರ್ಗೀಯ ಆನಂದವು ದೊರೆಯುವದೆಂದು ಅವನ ದೃಢವಾದ ಭಾವನೆಯಿತ್ತು. ಅಂತೆಯೆ ಅವನು ರಾಧಾಮೋಹನ ನಿಗೆ ಕೊಂದರೆ ಕೊಟ್ಟನು; ಗದಾಧರನ ಮನಸ್ಸು ಮುರಿದನು. ವ್ರಜಳನ್ನು ದುಃಖಗರ್ತದಲ್ಲಿ ಕೆಡಹಿದನು. ಇಷ್ಟೆಲ್ಲ ಶತಕೃತಿಗಳು ಜರುಗಿದರೂ ತನಗೆ ಸೌಖ್ಯವು ಸಿಗದಂತಾದದ್ದನ್ನು ನೋಡಿ ಅವನ ಮನಃಸ್ಥಿತಿಯು ವಿಚಿತ್ರವಾದದ್ದರಲ್ಲಿ ವಿಸ್ಮಯವೇನು?

ವಿವಾಹವಾದ ಮೂರನೆಯ ದಿನದಿಂದ ಕಾಲಾಚಾಂದನ ಆನಂದ ಶರಧಿಯು ಬತ್ತಲಾರಂಭಿಸಿತು; ಉತ್ಸಾಹ ಮೋಗುವು ನಾಶವಾಗತೊಡ ಗಿತು. ವಿವಾಹ ಪ್ರಸ್ತಾಪವು ನಡೆಯುವದಕ್ಕಿಂತ ಮೊದಲು ವ್ರಜ ಬಾಲೆಯು ಅವನೊಡನೆ ಸ್ನೇಹದಿಂದ ವರ್ತಿಸುತ್ತಿದ್ದಳು; ಈಗ ಆ ಸ್ನೇಹವು ತೀವ್ರತರ ದ್ವೇಷದಲ್ಲಿ ರೂಪಾಂತರ ಹೊಂದಿತ್ತು. ಅವಳ ಈ ವಿಲಕ್ಷಣವಾದ ಸ್ವಭಾವದ ಪರಿಚಯವು ಕಾಲಾಚಾಂದನಿಗಾಗಿತ್ತು. ಏರ ಜಾವನಕ್ಕೆ ಬಂದ ಮೇಲಂತು ವ್ರಜಬಾಲೆಯು ತನ್ನ ಚಾಜ್ವಲ್ಯವಾದ ಗುಣಗಳಿಗೆ ಮತ್ತಿಷ್ಟು ಚಾಲನೆ ಕೊಟ್ಟಳು ಆಗ ಮಾತ್ರ ಅವಳ ಹೃದಯ ಚಿತ್ರವು ಕಾಲಾಚಾಂದನಿಗೆ ಭೀಷಣವಾಗಿ ತೋರಲಾರಂಭಿಸಿತು. ಯಾವಳ ಸಹವಾಸದಿಂದ ತಾನು ಧನ್ಯನಾಗುವೆನೆಂದು ಕಾಲಾಚಾಂದನು ಭಾವಿಸಿ ದ್ದನೋ, ಅವಳ ಸಹವಾಸವು ತನ್ನನ್ನು ದೈನ್ಯಕ್ಕೆ ಗುರಿಮಾಡುವದೆಂಬದು ಅವನಿಗೆ ಸ್ಪಷ್ಟವಾಗಿ ಕಾಣತೊಡಗಿತು. ಆಗ ಅವನೂ ಹರಸುಂದ ರಿಯೂ ವ್ರಜಬಾಲೆಯನ್ನು ಸನ್ಮಾರ್ಗಕ್ಕೆ ಹಚ್ಚುವದಕ್ಕಾಗಿ ಯೋಗ್ಯತೆ ಮೀರಿ ಸಾಹಸ ಮಾಡಿದರು. ಅವರ ಪ್ರಯತ್ನದಿಂದ ವ್ರಜಬಾಲೆಯ ವರ್ತನವು ಸೌಮ್ಯವಾಗಲಿಲ್ಲ; ಉಪದೇಶದಿಂದ ಅವಳ ಉದ್ದಾಮತನದ ಕಾರ್ಯಕ್ಷೇತ್ರವು ಬೆಳೆಯುತೊಡಗಿತು. ಅವಳು ತನ್ನ ಹಾಗು ತನ್ನ ತಾಯಿಯ ನಿರ್ಭರ್ತ್ಸನೆ ಮಾಡುವದನ್ನು ನೋಡಿ ಕಾಲಾಚಾಂದನ ಸಂತಾ ಪವು ಜಾಗ್ರತವಾಗತೊಡಗಿತು. ಗುಣದೋಷಗಳನ್ನು ಪರಿಶೀಲಿಸದೆ ಕೇವಲ ರೂಪಾಂಧನಾಗಿ ವ್ರಜಬಾಲೆಯನ್ನು ವರಿಸಿದ್ದು ಒಳಿತಾಗಲಿಲ್ಲ ವೆಂದು ಅವನ ಭಾವನೆಯಾಯಿತು.

ವೀರಜಾವನಕ್ಕೆ ಬಂದ ಮೇಲೆ ವ್ರಜಬಾಲೆಯ ಎಲ್ಲ ಗುಣಗಳು ಕಾಲಾಚಾಂದನಿಗೆ ನಿಚ್ಚಳವಾಗಿ ಕಾಣತೊಡಗಿದವು. ತನ್ನ ಪ್ರಿಯತಮೆಯು ಮದಾಂಧಳೂ, ಸ್ವೇಚ್ಛಾಚಾರಿಣಿಯೂ, ಸಂತಾಪಿಯೂ, ಆತ್ಮಸುಖ ಪರಾಯಣಳೂ, ಕಠೋರಹೃದಯುದವಳೂ, ದುರಭಿಮಾನಿಯೂ, ಅವಿಧೇಯಳೂ, ದುರ್ಮಾರ್ಗಿಯೂ ಇರುವಳೆಂದು ಕಾಲಾಚಾಂದನು ತಿಳಿದನು. ಸ್ತ್ರೀಜನೋಚಿತವಾದ ಲಜ್ಜಾಸಂಕೋಚಗಳಂತೂ ಅವಳಲ್ಲಿ ತಿಲಾಂಶವಾದರೂ ಕಾಲಾಚಾಂದನಿಗೆ ಕಂಡು ಒರಲಿಲ್ಲ. ಮೊದಮೊದಲು ಅವನು ಸಹನಶೀಲತೆಯ ಪರಾಕಾಷ್ಠೆಯನ್ನು ತೋರಿಸಿದನು; ಅದರಿಂದ ಯಾವ ಪ್ರಯೋಜನವೂ ಆಗಲಿಲ್ಲ. ಕ್ಷಣಕ್ಷಣಕ್ಕೆ ಬೆಳೆಯುತ್ತಲಿರುವ ದುರ್ಗುಣಗಳನ್ನು ಸಹಿಸುವದು ಕಾಲಾಚಾಂದನಿಗೆ ಅಸಾಧ್ಯವಾಗತೊಡಗಿತು. ಅವನು ಸ್ತ್ರೀಯ ದಾಸನಿರಲಿಲ್ಲ; ಉಜ್ವಲ ಮನಸ್ಸಿನ ತರುಣನಾಗಿದ್ದನು. ಅಂತೆಯೆ ಅವನು ಸ್ವರ್ಗೀಯ ಸುಂದರಿಯಾದ ವ್ರಜಬಾಲೆಯನ್ನು ತಿರಸ್ಕಾರದೃಷ್ಟಿಯಿಂದ ನೋಡತೊಡಗಿದನು. ಪ್ರತಿಯೊಂದು ಮಾತಿನಲ್ಲಿ ತನ್ನ ಅವಜ್ಞೆ ಮಾಡುತ್ತಲಿರುವ ಪತ್ನಿಯಲ್ಲಿ ಅವನು ಅತಿರೇಕವಾದ ಸಂತಾಪವುಳ್ಳವನಾದನು.

ವ್ರಜಬಾಲೆಯಾದರೂ ಸ್ವಲ್ಪ ನೀರಲ್ಲಿ ಮುಳುಗುವಂತಹಳಿರಲಿಲ್ಲ. ಭಗ್ನಮನೋರಥಳಾಗಿದ್ದ ಅವಳು ಈಗ ಜೀವದ ವ್ಯಾಮೋಹವನ್ನೇ ತೊರೆದದ್ದರಿಂದ ಕಾಲಾಚಾಂದನಿಗೆ ಸೇರಿಗೆ ಸವ್ವಾ ಸೇರಾಗಿದ್ದಳು. ಅವಳು ಕಾಲಾಚಾಂದನನ್ನು ಕ್ಷುದ್ರಪದಾರ್ಥವೆಂದು ಭಾವಿಸಿದ್ದಳು. ತನ್ನ ಪತ್ನಿಯಲ್ಲಿ ಮಿತಿಮೀರಿದ ಉದ್ದಾಮವೃತ್ತಿಯೂ ಸ್ವೇಚ್ಛಾಪ್ರವೃತ್ತಿಯೂ ನೆಲೆಗೊಂಡಿರುವದನ್ನು ನೋಡಿ ಕಾಲಾಚಾಂದನು ಕ್ರೋಧಾಂಧನಾದನು. ಆಗ ಅವನು ವ್ರಜಬಾಲೆಯನ್ನು ಕುರಿತು:—'ನಾನು ರೂಪಾಂಧನಾಗಿ ನಿನ್ನನ್ನು ವರಿಸಿದೆನು ನೀನು ದುರ್ಗುಣಗಳ ಆಗರವೆಂದು ಮೊದಲೇ ತಿಳಿದಿದ್ದರೆ, ನಾನು ನಿನ್ನನ್ನು ವರಿಸುವ ಮೂರ್ಖತನಕ್ಕೆ ಹೋಗುತ್ತಿದ್ದಿಲ್ಲ.'

"ಇದೇನು?" ವ್ರಜಬಾಲೆಯು ತಿರಸ್ಕಾರವ್ಯಂಜಕ ವಾಣಿಯಿಂದ: "ಇಂದೇ ನಿಮ್ಮ ಮನೆಯನ್ನು ಪ್ರವೇಶಿಸಿರುವೆನು. ಇಷ್ಟರಲ್ಲಿಯೆ ನನ್ನ

ಸ್ವಭಾವ ಪರೀಕ್ಷೆಯಾಯಿತೇನು? ನನ್ನ ನಿಜವಾದ ಗುಣಗೌರವವು ತಿಳಿಯುವದಕ್ಕೆ ಕೆಲವು ದಿನಗಳಾದರೂ ಬೇಕಾಗುವವೆಂದು ನನ್ನ ಭಾವನೆಯಿತ್ತು."

"ನಿನ್ನ ಲಾವಣ್ಯವು ಹೇಗೆ ಪರಿಣಾಮಕಾರಕವಿರುವದೋ ಅಷ್ಟೇ ಕಿಂಬಹುನಾ, ಅದಕ್ಕಿಂತ ಹೆಚ್ಚು ನಿನ್ನ ಗುಣಗಳು ಪರಿಣಾಮಕಾರಕಗಳಾಗಿರುವವು. ನನ್ನಿಂದ ಹೆಡ್ಡತನವಾಗಿರುವದರಿಂದ ಅಪಮಾನವನ್ನು ಸಹಿಸಬೇಕಾಗಿದೆ."

"ನಿಮ್ಮ ಸಹನಶೀಲತೆಯ ಅಂತವನ್ನು ಪರೀಕ್ಷಿಸಿಯೆ ಬಿಡಬೇಕೆಂದು ನನ್ನ ದೃಢನಿಶ್ಚಯವಿರುವದು."

"ಇದಕ್ಕಾಗಿಯೇ ನೀನು ನನ್ನನ್ನು ಮದುವೆಯಾದೆಯಾ?"

"ನಾನೇನೂ ನಿಮ್ಮನ್ನು ಮದುವೆಯಾಗಿಲ್ಲ."

"ಹೀಗಂದರೇನು?"

"ನೀವೇ ಒತ್ತಾಯದಿಂದ ವಿವಾಹದ ಗೊಂದಲವನ್ನೆಬ್ಬಿಸಿದಿರಿ."

"ನೀನು ನನ್ನಲ್ಲಿ ಅನುರಾಗವುಳ್ಳವಳಿರುವೆಯೆಂದು ನಾನು ಭಾವಿಸಿದ್ದೆನು."

"ಮನಸ್ಸಿನಲ್ಲಿ ಯಥೇಷ್ಟವಾಗಿ ಮಂಡಗಿಯನ್ನು ತಿನ್ನುತ್ತಿದ್ದಿರಾಗಿದ್ದೀತು!"

"ನೀನು ನನ್ನಲ್ಲಿ ಪ್ರಣಯವುಳ್ಳವಳಿಲ್ಲವೇನು?"

"ಇಲ್ಲ; ನಿಮ್ಮ ಒತ್ತಾಯದಿಂದ ನಾನು ಇವೀಗಿನ ದುರ್ದಶೆಯನ್ನು ಅನುಭವಿಸುತ್ತಲಿರುವೆನು."

"ಈ ಕಾಲಾಚಾಂದನನ್ನು ವರಿಸಿದ್ದಕ್ಕೆ ದುರ್ದಶೆಯನ್ನು ಹೊಂದಿದೆನೆನ್ನುವ ನೀನು ಮಹಾಮೂರ್ಖಳಿರುವೆ."

"ಅನ್ಯರ ಪ್ರಣಯಿನಿಯನ್ನು ಒತ್ತಾಯದಿಂದ ಹಿಡಿದು ತರಲಿಕ್ಕೆ ನೀವು ಗೋಕುಲದೊಳಗಿನ ಕೃಷ್ಣರೇನು?"

"ಕೃಷ್ಣಕರಣಿಯ ದಂಡೆಯ ಮೇಲೆ ನೀನು ಆಡಿದ ಮಾತಿನ ಪರಿವೆಯು ಈಗ ಉಳಿದಿಲ್ಲವೆಂಬಂತೆ ತೋರುತ್ತದೆ."

"ನಿಮ್ಮನ್ನು ವಿವಾಹವಾಗುವೆನೆಂದು ನಾನು ಆಗ ಹೇಳಿದೆನೇನು?"

"ನೀನು ನನ್ನಲ್ಲಿ ಪ್ರೇಮವುಳ್ಳವಳಾಗಿರುವೆಯೆಂದು ನಾನು ತಿಳಿದೆನು."

"ಪ್ರೇಮದಲ್ಲಿ ವಿವಿಧತೆಗಳಿರುವದನ್ನು ನೀವು ತಿಳಿದಿಲ್ಲವೇ? ವಿವಾಹದ ಪ್ರಸ್ತಾಪವನ್ನು ತೆಗೆಯುವ ವರೆಗೆ ನಾನು ನಿಮ್ಮಲ್ಲಿ ಬಂಧುಪ್ರೇಮವನ್ನು ಇರಿಸಿದ್ದೆನು. ಈಗ ಮಾತ್ರ ನೀವು ಕಡು ಹಗೆಗಳಾದಿರಿ."

"ವಿವಾಹದ ಪೂರ್ವದಲ್ಲಿಯೇ ನಿನ್ನ ಕುತ್ಸಿತವಾದ ಗುಣಗಳ ಬಗ್ಗೆ ನನಗೆ ಅಲ್ಪ ಸ್ವಲ್ಪ ಪರಿಚಯವಾಯಿತು."

"ಯಾವ ಗುಣಗಳ ಪರಿಚಯವಾಯಿತು?"

"ನೀನು ಗದಾಧರನಲ್ಲಿ ಅತಿರೇಕವಾದ ಪ್ರೇಮವಿಟ್ಟದ್ದೂ, ನನ್ನಲ್ಲಿ ತಿರಸ್ಕಾರ ಭಾವನೆಯುಳ್ಳವಳಾದದ್ದೂ ನನಗೆ ವಿವಾಹದ ಮುನ್ನಿನ ದಿನವೇ ತಿಳಿದವು."

"ಹಾಗಾದರೆ ಲಗ್ನದ ಗೊಂದಲವನ್ನೆಬ್ಬಿಸಿದ ಕಾರಣವೇನು?"

"ನಿನ್ನನ್ನು ವಿವಾಹವಾಗುವೆನೆಂದು ನಾನು ಪ್ರತಿಜ್ಞೆ ಮಾಡಿದ್ದೆನು."

"ಪ್ರತಿಜ್ಞೆ ಮಾಡುವ ಪ್ರಸಂಗವೇನು ಒದಗಿತು!"

ವ್ರಜಬಾಲೆಯು ಹೀಗೆ ಕೇಳಿದ ಕೂಡಲೆ ಕಾಲಾಚಾಂದನು ತನಗೂ ಗದಾಧರನಿಗೂ ನಡೆದ ಈರ್ಷೆಯ ಸಂಗತಿಯನ್ನು ತಿಳಿಸಿದನು. ವ್ರಜಬಾಲೆಯು ಎಲ್ಲ ಸಂಗತಿಗಳನ್ನು ಕೇಳಿದ ಕೂಡಲೆ ಸಂತಪ್ತಳಾದಳು. ಕೇವಲ ಈರ್ಷೆಗೊಳಗಾಗಿ ಕಾಲಾಚಾಂದನು ತನ್ನ ಸೌಖ್ಯವನ್ನು ಸೂರೆ ಮಾಡಿದನೆಂದು ಅವಳು ತಿಳಿದುಕೊಂಡಳು. ಅವಳು ಸಂತಾಪಾತಿರೇಕದಿಂದ ಕಾಲಾಚಾಂದನನ್ನು ಕುರಿತು: "ನೀವು ಹೇಳಕೂಡದಷ್ಟು ಅನ್ಯಾಯ ಮಾಡಿದ್ದು, ಮತ್ತೆ ನನ್ನ ಗುಣಗಳಿಗೆ ಹಸರಿಡತೊಡಗಿರುವಿರಿ. ಪ್ರತಿಜ್ಞಾಬದ್ಧರಾದ್ದರಿಂದಲೇ ನೀವು ನನ್ನನ್ನು ವರಿಸಲು ಈರ್ಷೆಗೊಂಡಿರಲ್ಲವೆ! ನೀವು ನನ್ನ ತಂದೆಯವರಿಗೆ ಇಲ್ಲದ ಅಂಜಿಕೆ ತೋರಿಸಿದ್ದರಿಂದ ನಾನು ನನ್ನ ಮನಸ್ಸು ಮುರಿದು ವಿವಾಹಕ್ಕೆ ಸಿದ್ಧಳಾದೆನು. ನನ್ನ ಆಶೆಯನ್ನು ಮಣ್ಣುಪಾಲು ಮಾಡಿದ ನಿಮ್ಮಲ್ಲಿ ನಾನು ಸ್ನೇಹವುಳ್ಳವಳಾಗುವ ಬಗೆಯೇನು!

ನೀವು ನನ್ನ ಮನಸ್ಸಿನ ವಿರುದ್ಧವಾಗಿ ಆಚರಿಸಿದ್ದರಿಂದ ನಿಮ್ಮನ್ನು ಶತ್ರುಗಳ ಸ್ಥಾನದಲ್ಲಿ ಎಣಿಸಿರುವೆನು.''

''ನೀನು ಕಡೆತನಕ ನನ್ನ ವೈರಿಯಾಗಿಯೇ ಬಾಳುವೆಯೇನು?''

''ನನ್ನ ಆಯುಷ್ಯದಲ್ಲಿಯ ಎಲ್ಲ ಕರ್ತವ್ಯಗಳು ತೀರಿದಂತಾಗಿರುವವು. ನಾನು ಯಾವ ಉದ್ದೇಶದಿಂದ ಬಾಳಬೇಕೆಂಬದನ್ನು ಹೇಳಿರಿ! ನನ್ನ ಸೌಖ್ಯವನ್ನು ಸೂರೆ ಮಾಡಿದ ನರಾಧಮನ ಸೇಡನ್ನು ಭಯಂಕರವಾದ ರೀತಿಯಿಂದ ತೀರಿಸಿಕೊಳ್ಳಬೇಕೆಂದು ನಾನು ಯಾಕೆ ಯೋಚಿಸಬಾರದು?''

ವೃಂದಾಬಾಲೆಯ ಕರ್ಣಕಠೋರವಾದ ಮಾತುಗಳನ್ನು ಕೇಳಿ ಆತ್ಮಾಭಿಮಾನಿಯಾದ ಕಾಲಾಚಾಂದನ ಹೃದಯವು ಅತ್ಯಂತ ಜಾಗ್ರತವಾಯಿತು. ಆಗ ಅವನು ತನ್ನ ಕತ್ತಿಯನ್ನು ಒರೆಯಿಂದ ಹಿರಿದು—''ಕುಲಟೆ! ದುರಾಚಾರಿಣಿ! ನೀನು ನನ್ನ ಸಹಧರ್ಮಚಾರಿಣಿಯಾಗಿದ್ದು ಈ ಮೇರೆಗೆ ಮಾನಖಂಡನೆಯನ್ನು ಮಾಡತೊಡಗಿರುವೆಯಾ? ನಾನು ನಿನ್ನ ಶಿರಚ್ಛೇದನ ಮಾಡಿಯೆ ಮುಂದಿನ ಕಾರ್ಯಕ್ಕೆ ತೆರಳುವೆನು.''

''ಅವಶ್ಯ! ಅತ್ಯವಶ್ಯ! ಕಾಲಾಚಾಂದ! ನಾನು ಜೀವದಿಂದುಳಿಯಬೇಕೆಂದು ಕನಸುಮನಸುಗಳಲ್ಲಿ ಸಹ ಯೋಚನೆ ಮಾಡುತ್ತಿರುವದಿಲ್ಲ! ಏನಕೇನ ಪ್ರಕಾರೇಣ ಈ ನಿರುಪಯುಕ್ತ ದೇಹವನ್ನು ಬಿಸುಟಬೇಕೆಂದೇ ನನ್ನ ಅಂತರಂಗ ವಿಚಾರವಿರುವದು. ಈ ದುಃಖಮಯವಾದ ಜಗತ್ತಿನಲ್ಲಿ ಯಾವ ಉದ್ದೇಶದಿಂದ ಬಾಳಬೇಕು? ಅವಶ್ಯವಾಗಿ ನಿಮ್ಮ ಕಾರ್ಯವನ್ನು ಕೊನೆಗಾಣಿಸಿ, ನಿಮ್ಮ ಹೃದಯದಲ್ಲಿ ಧಗಧಗಿಸುತ್ತಿರುವ ಕ್ರೋಧಾಗ್ನಿಯನ್ನು ನನ್ನ ಬಿಸಿನೆತ್ತರದಿಂದ ಶಾಂತಪಡಿಸಿರಿ!

ವೃಂದಾಬಾಲೆಯು ಕಾಲಾಚಾಂದನ ಮುಮ್ಮುಖದಲ್ಲಿ ಶಿರಬಾಗಿ ನಿಂತುಕೊಂಡಳು. ಅವಳ ಅತುಲನೀಯವಾದ ಧೈರ್ಯವನ್ನು ನೋಡಿ ಕಾಲಾಚಾಂದನು ದಂಗು ಒಡೆದನು. ಖಡ್ಗವೆತ್ತಿದ ಅವನ ಕೈಯು ತನ್ನಿಂದ ತಾನೆ ಕೆಳಗಿಳಿಯಿತು. ಅಷ್ಟರಲ್ಲಿ ಅವನ ತಾಯಿಯಾದ ಹರಸುಂದರಿಯು ಅಕಸ್ಮಾತ್ತಾಗಿ ಅಲ್ಲಿಗೆ ಬಂದಳು. ಅವಳು ಈ ದೃಶ್ಯ

ವನ್ನು ನೋಡಿ ಭಯಚಕಿತಳಾಗಿ ಕಾಲಾಚಾಂದನನ್ನು ಕುರಿತು "ಕಾಲಾ ಚಾಂದ! ಇದೇನು ಅನಾಚಾರವನ್ನು ನಡೆಯಿಸಿದಿ? ಸ್ತ್ರೀಹತ್ಯಾಪಾತಕವನ್ನು ನಿನ್ನ ನೆಗಗಿಗೆ ಕಟ್ಟಿಕೊಳ್ಳಬೇಕೆಂದು ಯೋಚಿಸಿರುವೆಯಾ? ಈ ವ್ರಜ ಬಾಲೆಯು ಪ್ರಮತ್ತೆಯಿರುವಳು; ಅವಿಧೇಯಳಿರುವಳು. ಸ್ವಭಾವಕ್ಕೆ ಔಷಧವಿಲ್ಲ. ಸ್ನೇಹಪಾಶದಿಂದ ಇವಳು ದಾರಿಗೆ ಬರಲಿಲ್ಲವೆಂದು ಸಿಟ್ಟಿನ ಕೈಯಲ್ಲಿ ಸಿಕ್ಕಿಕೊಳ್ಳಬೇಡ. ಇವಳನ್ನು ವಧಿಸಿದರೆ ನಿನಗಾಗುವ ಲಾಭವೇನು? ನೀನು ಈ ಬಗೆಯ ಅವಿಚಾರಕ್ಕೆ [illegible]ಗೆ ಇವಳನ್ನು ತವರುಮನೆಗೆ ಕಳಿಸಿಕೊಡು. ಇವಳ ಗೃಹಪ್ರವೇಶದ ಕಾಲಕ್ಕೆ ಎಡಗಾ[illegible] ಇವಳು ಗೃಹಲಕ್ಷ್ಮಿಯಾಗಿರದೆ, ಜ್ಯೇಷ್ಠಾಲಕ್ಷ್ಮಿಯಾಗಿರುವಳೆಂದು ಆಗಲೆ ನನ್ನ ಮನವರಿಕೆಯಾಯಿತು. ಕೇವಲ ರೂಪಾಂಧನಾಗಿ ನೀನು ಇವಳನ್ನು ವರಿಸಿದಂತಾಗಿರುವದು. ಇದರಲ್ಲಿ ನಿನ್ನದೇನು ದೋಷವು? ಈ ಕಾರ್ಯದಲ್ಲಿ ನಾನೇ ಮೊದಲನೆಯ ತಪ್ಪುಗಾರಳಾಗಿರುವೆನು."

"ಅವ್ವಾ, ನೀವೇನು ಅಪರಾಧ ಮಾಡಿರುವಿರಿ? ಇವಳು ಇಷ್ಟು ಆಳವಾದ ನೆಲೆಯುವಳಿರುವಳೆಂಬುದು ನನಗೆ ಗೊತ್ತಾಗಲಿಲ್ಲ. ನಾನೇ ಮೋಹಪರವಶನಾಗಿ ಮೂರ್ಖತನ ಮಾಡಿದೆನು."

"ನಾನು ನಿನಗೆ ಈ ವ್ರಜಬಾಲೆಯು ನೆನಪು ಮಾಡಿಕೊಡದಿದ್ದರೆ ಈ ಬಗೆಯ ಅನರ್ಥೋತ್ಪಾತಗಳಾಗುತ್ತಿದ್ದಿಲ್ಲ."

"ಈ ನೀಚಳು ನನ್ನ ಪ್ರತಿಸ್ಪರ್ಧಿಯಾದ ಗದಾಧರನನ್ನು ಪ್ರೀತಿಸುತ್ತಿರುವಳು."

"ಇದರಲ್ಲೇನು ದೋಷವು? ಗದಾಧರರು ನನ್ನ ಉಪಾಸ್ಯದೇವತೆಗಳಿರುವರು." ಎಂದು ವ್ರಜಬಾಲೆಯು ತಾರಸ್ವರದಲ್ಲಿ ಹೇಳಿದಳು.

"ಏನು? ಗದಾಧರನು ನಿನ್ನ ಉಪಾಸ್ಯದೇವತೆಯೆ? ಸ್ವೈರಿಣಿ! ಒಬ್ಬನನ್ನು ವಿವಾಹವಾಗಿ, ಮತ್ತೊಬ್ಬನನ್ನು ಪ್ರೀತಿಸುವ ನಿನ್ನ ಮುಖಾವಲೋಕನವನ್ನು ಮಾಡುವದೂ ಪಾತಕವಾಗಿರುವದು."

"ಈ ವಿಷಯದಲ್ಲಿ ನನ್ನ ಆಗ್ರಹವೇನಿರುವದು? ಅನ್ಯರು ಮುಖಾವ

ಲೋಕನ ಮಾಡಬೇಕೆಂದು ನಾನು ಇಚ್ಛಿಸುತ್ತಿರುವದಿಲ್ಲ. ನೀವು ಗದಾಧರರೊಡನೆ ಈರ್ಷೆಗೆ ಬಿದ್ದು ನನ್ನನ್ನು ಬಲಾತ್ಕಾರದಿಂದ ವಿವಾಹವಾದಿರಿ. ನಿಮ್ಮ ಕ್ರೂರ ಹೃದಯಕ್ಕೆ ಅಂಜಿಯೆ ನನ್ನ ತಂದೆಯವರು ನಿಮ್ಮ ಮಾತಿಗೆ ಸಮ್ಮತಿಯನ್ನಿತ್ತರು. ನಾನು ಸ್ವಸಂತೋಷದಿಂದ ನಿಮ್ಮನ್ನು ವರಿಸಿಲ್ಲವೆಂದ ಮೇಲೆ, ನನ್ನ ನಿಮ್ಮ ವಿವಾಹ ಸಂಬಂಧವು ಪರಸ್ಪರರಲ್ಲಿ ಪ್ರೇಮಸಂಯೋಗಗೊಳಿಸಲಿಕ್ಕೆ ಹೇಗೆ ಸಮರ್ಥವಾಗುವದು?''

''ವ್ರಜಸುಂದರಿ!''

''ಅಲ್ಲಲ್ಲ; ನಾನು ವ್ರಜಸುಂದರಿಯಲ್ಲ; ವ್ರಜಬಾಲೆಯಿರುವೆನು.''

''ಅದೇಕೆ?''

''ನಾನು ಜನರ ದೃಷ್ಟಿಯಿಂದ ವಿವಾಹಿತಳಾಗಿದ್ದರೂ ಮನಸ್ಸಿನಿಂದ ಅವಿವಾಹಿತಳಿರುವೆನು. ನಾನು ನನ್ನ ಉಪಾಸ್ಯ ದೇವತೆಗಳಾದ ಗದಾಧರರನ್ನು ಎಂದು ಸಂಸ್ಕಾರ ಪೂರ್ವಕವಾಗಿ ವಿವಾಹವಾಗುವೆನೋ ಅಂದೇ ವ್ರಜಸುಂದರಿಯಾಗುವೆನು.''

''ನೀನು ಬೇಕಾದದ್ದು ಆಗು; ನನಗೆ ಅದರ ಪರಿವೆಯಿಲ್ಲ. ನೀನು ನನ್ನ ಮನೆಯಲ್ಲಿ ವಾಸವಾಗಿರುವ ಆವಶ್ಯಕತೆಯಿಲ್ಲ.'' ಎಂದು ಕಾಲಾಚಾಂದನು ವ್ರಜಬಾಲೆಗೆ ಹೇಳಿ, ತನ್ನ ತಾಯಿಯನ್ನು ಕುರಿತು:—''ಅವ್ವಾ, ನಾನು ನಿನ್ನ ಹಿರಿಯ ಸೊಸೆಯನ್ನು ಕರೆತರುವೆನು. ಪಾಪ, ಅವಳು ನಿರಪರಾಧಿಯು; ಸುಜನಳು; ಪತಿವ್ರತೆಯು. ಮನುಷ್ಯನು ಸೌಂದರ್ಯಲುಬ್ಧನಾಗುವದಕ್ಕಿಂತ ಗುಣಲುಬ್ಧನಾಗುವದು ಶ್ರೇಯಸ್ಕರವೂ ಸುಖದಾಯಕವೂ ಆಗಿರುವದು. ನಾನು ಭೂಪಸುಂದರಿಯನ್ನು ಕರೆದುಕೊಂಡು ಬರುವೆನು.''

ಕಾಲಾಚಾಂದನನ್ನು ಸಿಟ್ಟಿಗೆಬ್ಬಿಸಿ ಅವನ ದವಡೆಯೊಳಗಿಂದ ಪಾರಾಗಿ ಹೋಗಬೇಕೆಂಬದೇ ವ್ರಜಬಾಲೆಯ ಮುಖ್ಯ ಉದ್ದೇಶವಾಗಿತ್ತು. ಭೂಪಸುಂದರಿಯನ್ನು ಕರೆತರಬೇಕೆಂದು ಕಾಲಾಚಾಂದನು ನುಡಿದ ಕೂಡಲೆ ಅವಳು ಕರ್ಕಶಧ್ವನಿಯಿಂದ:—''ಏನು? ಭೂಪಸುಂದರಿಯನ್ನು ಕರೆದುಕೊಂಡು ಬರುವಿರಾ? ನಾನು ಇಲ್ಲಿರುವ ವರೆಗೆ ಮತ್ತೊಬ್ಬಳನ್ನು

ಬರಗೊಡಲಾರೆನು.''

"ನಾನು ಮನಬಂದಂತೆ ನಡೆಯಲಿಕ್ಕೆ ಅಧಿಕಾರಿಯಿರುವೆನು. ನನ್ನ ಕಾರ್ಯಕ್ಕೆ ಪ್ರತಿಬಂಧ ಮಾಡುವವಳು ನೀನು ಯಾರು?''

"ನಾನು ಯಾರೆಂದು ನಿಮಗೆ ಗೊತ್ತಿಲ್ಲವೇನು?''

"ಗೊತ್ತಿರುವದು. ನೀನು ಸ್ವೈರಿಣಿಯು! ಮಹಾ ಪಾತಕಿಯು!''

"ನೀವು ಮಾತ್ರ ಧರ್ಮಮಾರ್ತಂಡರು! ಕ್ರೌರ್ಯ-ಶೌರ್ಯಗಳ ಬಲದಿಂದ ನೀವು ಪರಸ್ತ್ರೀಯನ್ನು ಅಸುರವಿವಾಹದಿಂದ ವರಿಸಿದ್ದರಿಂದ ಧರ್ಮಮಾರ್ತಂಡರೆಂದು ನಿಮ್ಮನ್ನು ಸಂಬೋಧಿಸಲಿಕ್ಕೆ ಏನೂ ಅಡ್ಡಿಯಿಲ್ಲ.''

"ನೀನು ಪರಸ್ತ್ರೀಯಾಗಿದ್ದರೆ ನಾನು ನಿನ್ನ ಗೊಡವೆಗೆ ಬರುತ್ತಿದ್ದಿಲ್ಲ. ನೀನು ಗದಾಧರನನ್ನು ವಿವಾಹವಾಗಿದ್ದಿಲ್ಲವಷ್ಟೆ?'

"ನಿಮ್ಮ ಧರ್ಮಬುದ್ಧಿಗೆ ಕೊಳ್ಳಿಯಿಕ್ಕಿರಿ! ನಾನು ಗದಾಧರ ರಲ್ಲಿ ಪ್ರಣಯವುಳ್ಳವಳಾದ ಮೇಲೆ ನನ್ನನ್ನು ವಿವಾಹವಾಗಬೇಕೆಂಬ ಬುದ್ಧಿಯು ನಿಮ್ಮಲ್ಲಿ ಏಕೆ ಹುಟ್ಟಿತು? ವಿವಾಹದ ಮುಂಚಿನ ದಿವಸವೇ ನಿಮಗೆ ವಸ್ತುಸ್ಥಿತಿಯು ಗೊತ್ತಾಗಿದ್ದರೂ, ನೀವು ಕೇವಲ ಪ್ರತಿಜ್ಞೆಯ ಉಪೇಗೋಳಗಾಗಿಯೆ ನನ್ನ ಸೌಖ್ಯವನ್ನು ಮಣ್ಣುಪಾಲು ಮಾಡಿದಿರಲ್ಲವೆ? ನೀವು ನನ್ನನ್ನು ಧರ್ಮಪತ್ನಿಯೆಂದು ಸ್ವೀಕರಿಸಿರುವಿರಿ. ಈ ಧರ್ಮಪತ್ನಿ ಯಿಂದ ಬಳಿತಂಗಿ ಸೌಖ್ಯವನ್ನುಣ್ಣದೆ ಮತ್ತೊಬ್ಬಳನ್ನು ಬಯಸುವದು ಉಚಿತವೆ?'

"ನಿನ್ನಿಂದ ಯಾವ ಸೌಖ್ಯವು ದೊರೆಯುವದೆಂಬದು ಕಣ್ಣಿಗೆ ಕಂಡಂತೇ ಆಗಿದೆ.''

"ಇದೇನು ಮಾತನಾಡುವಿರಿ? ಸಾಹಸ ಮಾಡಿ ಅದರ ಫಲವನ್ನುಣ್ಣ ದಿದ್ದರೆ ಹೇಗೆ?'

"ವ್ರಜಸುಂದರಿ, ನೀನು ನನಗೆ ಚನ್ನಾಗಿ ಪ್ರಾಯಶ್ಚಿತ್ತ ವಿಧಿಸಿದೆ.''

"ನೀವು ಮೂರ್ಖರಿರುವಿರಿ. ನಾನು ಇಂದೇ ನಿಮ್ಮ ಮನೆಯನ್ನು ಪ್ರವೇಶಿಸಿರುವೆನು. ಇಷ್ಟರಲ್ಲಿಯೆ ಪಶ್ಚಾತ್ತಾಪಬಡಹತ್ತಿರುವಿರಿ.

ಧರ್ಮಪತ್ನಿಯ ಸೇವೆಯನ್ನು ಚನ್ನಾಗಿ ಸ್ವೀಕರಿಸುವದನ್ನು ಬಿಟ್ಟು, ಹೀಗೆ ಹುಚ್ಚರಂತೆ ಆಚರಿಸುವದು ಒಳಿತಲ್ಲ''

"ನಿರ್ಲಜ್ಜಳೆ!"

"ಅದೇಕೆ? ನಾನು ಅಂತಹ ಕೆಲಸವನ್ನೇನು ಮಾಡಿರುವೆನೆಂದು ನನಗೆ ಇಂಥ ಕುತ್ಸಿತ ಮಾತುಗಳನ್ನಾಡುವಿರಿ?"

"ನಿನ್ನೊಡನೆ ಮಾತನಾಡಲಿಕ್ಕೆ ನನ್ನ ಇಚ್ಛೆಯಿಲ್ಲ. ನಾನು ನಿನಗೆ ಇಂದೇ ನಿರೋಪ ಕೊಟ್ಟಿರುವೆನು. ನುಡಿಂದತ್ತ ಹೊರಟು ಹೋಗು.

"ಭೂಪಬಾಲೆಯನ್ನು ಕರೆದುಕೊಂಡು ಬರಬೇಕಾಗಿರುವದೆಂದು ನನಗೆ ನಿರೋಪ ಕೊಡುತ್ತೀರೇನು?"

"ಏನೇ ಇರಲಿ. ನೀನು ಇಲ್ಲಿಂದ ಹೊರಟು ಹೋಗು."

"ನನಗೆ ಆಜ್ಞಾ ಮಾಡಲಿಕ್ಕೆ ನೀವೆಷ್ಟರವರು?"

"ಪಿಶಾಚಿಯೆ, ನಾನು ನಿನ್ನ ಮುಖಾವಲೋಕನವನ್ನು ಮಾಡಲಾರೆನು''

"ಮಾಡದಿದ್ದರೆ ಅತ್ತ ಹೊರಟು ಹೋಗಿರಿ."

"ಮದಾಂಧಳೆ! ನಿನಗೆ ಜೀವವು ಬೇಡಾಗಿರುವದೆ! ನೀನು ಈ ಕಾಲಾಚಾಂದನನ್ನು ಅಪಮಾನಗೊಳಿಸಿ ಬಾಳುವೆಯಾ?"

ಕಾಲಾಚಾಂದನು ಕ್ರೋಧದಿಂದ ಹೀಗೆ ನುಡಿದ ಕೂಡಲೆ ವ್ರಜಬಾಲೆಯ ಸಂತಾಪವು ಜಾಗ್ರತವಾಯಿತು. ಆಗ ಅವಳಾದರೂ ಕಣ್ಣಲ್ಲಿ ಕಿಡಿಗಳನ್ನುದುರಿಸುತ್ತ —"ಕಾಲಾಚಾಂದ, ನೀನು ನನ್ನ ಸೌಖ್ಯವನ್ನೂ ಬಾಳಬೇಕೆನ್ನುವ ಆಶೆಯನ್ನೂ ಮಣ್ಣುಪಾಲು ಮಾಡಿರುವೆ. ನನ್ನನ್ನು ಕೊಲ್ಲಬೇಕೆಂದು ನಿನ್ನ ಮನಸ್ಸಿನಲ್ಲಿದ್ದರೆ, ವಿಲಂಬ ಮಾಡದೆ ನಿನ್ನ ಕರ್ತವ್ಯವನ್ನು ಪೂರೈಸು. ನಾನು ನಿನ್ನಲ್ಲಿದ್ದರೂ, ಬೇರೆ ಕಡೆಯಲ್ಲಿದ್ದರೂ ಜೀವಿಸಿರುವವರೆಗೆ ನಿನ್ನ ಮೇಲಿನ ಸೇಡನ್ನು ಭಯಂಕರವಾದ ಪ್ರಕಾರದಿಂದ ತೀರಿಸಿಕೊಳಲಿಕ್ಕೆ ಸಾಹಸ ಮಾಡುವವಳೇ! ನೀನು ಪೂರ್ವವೆಂದರೆ, ನಾನು ಪಶ್ಚಿಮವೆನ್ನುವವಳೇ! ಜೀವದ ಹಂಗುದೊರೆದು ನಿಂತಿರುವ ನಿನ್ನ ಕಟ್ಟಾ ವೈರಿಯಾದ ಈ ವ್ರಜಬಾಲೆಯಿಂದ ನೀನು ಎಷ್ಟು ವಿಧದ ಕಷ್ಟ-

ನಷ್ಟಗಳನ್ನನುಭವಿಸಬೇಕಾಗುವದೋ ಏನೋ!"

ವ್ರಜಬಾಲೆಯು ಅಪಮಾನಕಾರಕವಾದ ಭಾಷಣಗಳನ್ನು ಕೇಳಿ ಕಾಲಾಚಾಂದನು ಸಿಟ್ಟಿಸಿಂದ ಹುಚ್ಚನಾದನು. ಅವಳನ್ನು ಕಡಿದು ಚಲ್ಲಬೇಕೆಂದೇ ಆಗ ಅವನು ಯೋಚಿಸಿದನು; ಆದರೂ ಒಳ್ಳೆಯ ಪ್ರಯಾಸದಿಂದ ತನ್ನ ಮನಸ್ಸು ಬಿಗಿಹಿಡಿದು—"ಡಾಕಿನಿಯೆ! ಈ ಕಾಲಾಚಾಂದನು ನಿನ್ನ ದೇಹವನ್ನು ಶತಖಂಡ ಮಾಡಲಿಕ್ಕೆ ಹಿಂಜರಿಯುತ್ತಿದ್ದಿಲ್ಲ. ಮೊದಲು ನನ್ನಿಂದ ಒಂದು ವಿಧದ ಅಪರಾಧವಾಗಿರುವದೆಂದು ಬಹಳವಾಗಿ ಆತ್ಮಸಂಯಮನ ಮಾಡಿದೆನು. ನೀನು ಇಲ್ಲಿ ಕ್ಷಣವಾದರೂ ನಿಲ್ಲದೆ ಹೊರಟು ಹೋಗು."

"ಇದೋ ಹೊರಟೆನು. ಗದಾಧರರು ನನ್ನ ಮಾನಸ ಪತಿಗಳಿರುವದರಿಂದ ಅವರ ಸೇವೆಯಲ್ಲಿ ಈ ದೇಹವನ್ನು ಸವೆಸಬೇಕೆಂದು ನನ್ನ ಇಚ್ಛೆಯಿರುವದು. ಧರ್ಮದ ಅಂಧಶ್ರದ್ಧೆಯಿಂದ ಅವರು ನನ್ನನ್ನು ಸ್ವೀಕರಿಸದಿದ್ದರೆ ನನ್ನ ಸೌಖ್ಯವನ್ನು ಮಣ್ಣುಪಾಲು ಮಾಡಿದ ನಿಮ್ಮ ಮೇಲಿನ ಸೇಡನ್ನು ಭಯಂಕರವಾದ ಪ್ರಕಾರದಿಂದ ತೀರಿಸಿಕೊಳ್ಳುವೆನು. ನೀವು ಪೂರ್ವವೆಂದರೆ, ನಾನು ಪಶ್ಚಿಮವೆನ್ನಲಿಕ್ಕೆ ಇಂದಿನಿಂದಲೇ ಸಿದ್ಧಳಾಗಿರುವೆನೆಂದು ಭಾವಿಸಿರಿ."

"ನಾನು ಪೂರ್ವವೆಂದರೆ ನೀನು ಪಶ್ಚಿಮವೆನ್ನುವೆಯಾ?"

"ಹೌದು. ಈ ಪೂರ್ವ-ಪಶ್ಚಿಮಗಳ ಕಾದಾಟದಲ್ಲಿ ಯಾರು ವಿಜಯಿಗಳಾಗುವರೆಂದು ಯೋಗ್ಯಕಾಲದಲ್ಲಿ ತಿಳಿಯುವದು."

"ತಗೊ; ನಿನ್ನ ಸೇಡು ತೀರಿಸಿಕೊಳ್ಳುವ ಹವಣಿಕೆಯಾದರೂ ಪೂರ್ಣವಾಗಲಿ!" ಎಂದು ಕಾಲಾಚಾಂದನು ನುಡಿದು, ಕಾಲು ಅಪ್ಪಳಿಸುತ್ತ ಅಲ್ಲಿಂದ ಹೊರಟು ಹೋದನು.



## ವಿಲಕ್ಷಣವಾದ ವಿಚಾರಕ್ರಾಂತಿ.

ಮನೋಭಂಗ ಹೊಂದಿದ ಅಬಲೆಯರು ಸಬಲೆಯರಾಗಿ ಎಷ್ಟೋ ಬಗೆಯ ಕಟು ಕರ್ತವ್ಯಗಳನ್ನಾಚರಿಸಿದ ದೃಷ್ಟಾಂತಗಳು ಹೇರಳವಾಗಿ ದೊರೆಯುತ್ತವೆ. ವ್ರಜಬಾಲೆಯ ಸ್ಥಿತಿಯಾದರೂ ಇದೇ ಮೇರೆಗೆ ಆಗಿತ್ತು, ಅವಳು ಮೊದಲೇ ಕಟ್ಟುನಿಟ್ಟಿನ ಸ್ವಭಾವದವಳು. ಅವಳ ಪ್ರಬಲವಾದ ಇಚ್ಛೆಯು ಕಾಲಾಚಾಂದನ ಈರ್ಷೆಯಿಂದ ಹಾಳಾಗಿ ಹೋದಂತಾಗಿತ್ತು. ಹೇಗಾದರೂ ಮಾಡಿ ಅವನ ದವಡೆಯೊಳಗಿಂದ ಪಾರಾಗಿ ಹೋಗಬೇಕೆಂದು ಆ ಸಾಹಸಿಯಾದ ತರುಣಿಯು ನಿಶ್ಚಯಿಸಿಕೊಂಡಿದ್ದಳು. ನಿಷ್ಠುರತೆಯ ಪರಮಾವಧಿಯನ್ನು ತೋರಿಸಿ, ಕಾಲಾಚಾಂದನ ತಿರಸ್ಕಾರ-ಸಂತಾಪಗಳನ್ನು ಜಾಗ್ರತಗೊಳಿಸಬೇಕೆಂಬದೇ ಅವಳ ಮುಖ್ಯೋದ್ದೇಶವಾಗಿತ್ತು. ಅದರಂತೆ ಅವಳು ತನ್ನ ಜಾಣ್ಮೆಯನ್ನು ತೋರಿಸಿ, ಕಾಲಾಚಾಂದನ ಕ್ಷೋಭೆಗೆ ಈಡಾಗಿದ್ದಳು. ಇನ್ನು ತಾನು ಮನೆ ಬಿಟ್ಟು ತೆರಳಿದರೂ ಅವನು ತನ್ನ ಪ್ರಾಪ್ತಿಗಾಗಿ ಹವಣಿಸಲಾರನೆಂಬ ಮನೋಧೈರ್ಯವು ವ್ರಜಬಾಲೆಯಲ್ಲಿ ಉಂಟಾಗಿತ್ತು. ಅವಳು ಯಾವ ದಿವಸ ಕಾಲಾಚಾಂದನೊಡನೆ ವ್ಯಾಜ್ಯವಾಡಿದಳೋ, ಅಂದೇ ಮಧ್ಯರಾತ್ರಿಯಲ್ಲಿ ವೀರಜಾವನದಿಂದ ಪಲಾಯನ ಮಾಡಿದಳು.

ವ್ರಜಬಾಲೆಯ ವಿಷಯವಾಗಿ ಉದ್ವಿಗ್ನ ಮನಸ್ಕನಾಗಿದ್ದ ಕಾಲಾಚಾಂದನಿಗೆ ಅಂದು ಬಹಳ ರಾತ್ರಿಯ ವರೆಗೆ ನಿದ್ದೆ ಬರಲಿಲ್ಲ. ರಾತ್ರಿಯ ಕಡೆಯ ಜಾವದಲ್ಲಿ ಅವನು ನಿದ್ರಾವಶನಾದ್ದರಿಂದ ಮುಂಜಾನೆ ಎರಡು ಮೂರು ಗಳಿಗೆಗಳ ವರೆಗೆ ಮಲಗಿಕೊಂಡಿದ್ದನು. ಆಗ ಹರಸುಂದರಿಯು ಅವನನ್ನು ಎಬ್ಬಿಸಿ:--"ಕಾಲಾಚಾಂದ, ವ್ರಜಸುಂದರಿಯು ಎತ್ತೋ ಹೊರಟು ಹೋಗಿರುವಳು."

ತಾಯಿಯ ಮಾತುಗಳನ್ನು ಕೇಳಿ ಕಾಲಾಚಾಂದನು ವಿಸ್ಮಿತನಾದನು. ಮೈಮೇಲಿನ ಪೀಡೆಯು ತೊಲಗಿ ಹೋಯಿತೆಂದು ಅವನು ಆನಂದಮನಸ್ಕನಾದನು. ಪರಕ್ಷಣದಲ್ಲಿ ಅವನ ಮನಸ್ಸಿನಲ್ಲಿ ನಭೂತ

ಪೂರ್ವವಾದ ವಿಚಾರವು ತಲೆದೋರಿತು. ತನ್ನ ಧರ್ಮಪತ್ನಿಯು ತನ್ನೊಡನೆ ಅವಿಧೇಯಳಾಗಿ ವರ್ತಿಸಿ, ಹೀನ ಸ್ತ್ರೀಯರಂತೆ ಓಡಿ ಹೋದ ಸಂಗತಿಯು ಅವನ ಮನಸ್ಸಿನ ಮೇಲೆ ಭಯಂಕರವಾದ ಆಘಾತವನ್ನುಂಟು ಮಾಡಿತು. ವ್ರಜಬಾಲೆಯು ಗದಾಧರನಲ್ಲಿ ನಿರ್ವ್ಯಾಜಪ್ರೇಮವುಳ್ಳವಳಿದ್ದುದರಿಂದ ಅವನನ್ನು ಸೇರಿಕೊಳ್ಳುವಳೆಂತಲೂ, ಹಾಗಾದರೆ ವೀರಜಾವನದಲ್ಲಿ ತನ್ನ ದೊಡ್ಡಿಸ್ತಿಕೆಗೆ ಕಲಂಕ ಬರುವದೆಂತಲೂ ಅವನ ಭಾವನೆಯಾಯಿತು. ತಾನು ಹೆಮ್ಮೆಯಿಂದ ಕೈಕೊಂಡ ಕಾರ್ಯದಲ್ಲಿ ಯಶಸ್ಸು ದೊರೆಯುವದೊತ್ತಟ್ಟಿಗುಳಿದು, ತಿರಸ್ಕರಣೀಯವಾದ ಅಪಹಾಸ್ಯಕ್ಕೀಡಾಗುವ ಪ್ರಸಂಗವನ್ನು ತಂದುಕೊಂಡಂತಾಯಿತೆಂದು ಅವನು ಖಿನ್ನನಾದನು. ಜನರ ತಿರಸ್ಕಾರ-ಪುರಸ್ಕಾರಗಳ ಕಡೆಗೆ ಅವನು ಸಹಸಾ ಲಕ್ಷ್ಯಗೊಡುವಂಥವನಾಗಿರದಿದ್ದರೂ ಇದೊಂದು ವಿಷಯದಲ್ಲಿ ಅವನ ವಿಚಾರಗಳು ವಿಲಕ್ಷಣ ಕ್ರಾಂತಿಯನ್ನು ಹೊಂದಿದ್ದವು. ಮೆಚ್ಚಿ ಮದುವೆಯಾದ ಮಾನಿನಿಯು ಮಾನಗೇಡಿಯಾದದ್ದರಿಂದ ಪ್ರತಿಷ್ಠಿತನಾದ ತಾನು ವೀರಜಾವನದ ಜನರಿಗೆ ಮುಖವನ್ನು ಹೇಗೆ ತೋರಿಸಬೇಕೆಂದು ಅವನು ವಿಚಾರಿಸತೊಡಗಿದನು. ಸ್ವೈರಿಣಿಯಾದ ವ್ರಜಬಾಲೆಯನ್ನು ವರಿಸಿದ್ದು ಕತ್ತೆತನವಾಯಿತೆಂದು ಅವನು ಅತಿರೇಕವಾದ ಪಶ್ಚಾತ್ತಾಪ ಹೊಂದಿದನು. ಇನ್ನು ಮೇಲೆ ವೀರಜಾವನದಲ್ಲಿರುವದು ಯೋಗ್ಯವಲ್ಲೆಂದು ಅವನ ಭಾವನೆಯಾಯಿತು. ಆಗ ಅವನು ಕೆಲವು ವೇಳೆಯ ವರೆಗೆ ವಿಚಾರಿಸಿ ತಾಯಿಯನ್ನು ಕುರಿತು:—"ಅವ್ವಾ, ನಾನು ಈ ವೀರಜಾವನಕ್ಕೆ ಕೊನೆಯ ನಮಸ್ಕಾರವನ್ನು ಸಮರ್ಪಿಸಬೇಕೆಂದು ಯೋಚಿಸಿರುವೆನು.''

"ಅದೇಕೆ? ನೀನು ನಿನ್ನ ಜನ್ಮಗ್ರಾಮವನ್ನು ತ್ಯಜಿಸುವ ಕಾರಣವೇನು?''

"ನಾನು ಇಲ್ಲಿ ಔದಾಸೀನ್ಯದಿಂದ ಕಾಲಹರಣ ಮಾಡಲಾರೆನು.''

'ಕಾಲಾಚಾಂದ, ನಿನ್ನ ಮನಸ್ಸಿನ ಇಂಗಿತವು ನನಗೆ ಹೊಳೆಯಿತು. ಪತ್ನಿಯು ಸ್ವೇಚ್ಛಾಚಾರಿಣಿಯಾದ್ದರಿಂದ ನೀನು ಈ ರೀತಿಯಾಗಿ ಔದಾಸೀನ್ಯ ತಳೆದಿರುವೆ. ಇನ್ನು ಮೇಲೆ ನೀನು ಅವಳನ್ನು ಸಂಪೂರ್ಣವಾಗಿ

ಮರೆತು ಬಿಡು. ಅವಳು ತನ್ನ ಪಾಪಕ್ಕೆ ತಾನೇ ಬಾಧ್ಯಳಿರುವಳು. ಅವಳೂ ಸ್ವೈರಿಣಿಯಾದರೆ ನಿನ್ನ ಮಾನಕ್ಕೂ ಪ್ರತಿಷ್ಠೆಗೂ ಕುಂದು ಬರ ಲಾರದು. ಇಷ್ಟವಿದ್ದರೆ ಭೂಪಸುಂದರಿಯನ್ನು ಕರೆದುಕೊಂಡು ಬಾ. ಅವಳು ನಿನ್ನ ಮನಸ್ಸಿಗೆ ಬಂದಿರದಿದ್ದರೆ ನಿನಗನುರೂಪಳಾದ ಕನ್ಯೆಯನ್ನು ನಾನು ಶೋಧಿಸುವೆನು. ನಾ ಮುಂದೆ ನಾ ಮುಂದೆ ಎಂದು ನಿನಗೆ ನೂರಾರು ಜನರು ತಮ್ಮ ಕನ್ಯೆಯರನ್ನು ಕೊಡುವದಕ್ಕಾಗಿ, ಸಿದ್ಧರಿರುವರು.'

"ಅವ್ವಾ, ನನಗೆ ಇಲ್ಲಿಯ ಕಂಟಕಮಯವಾದ ಆಯುಷ್ಯ ಕ್ರಮ ಣವೇ ಬೇಸರಾಗಿದೆ. ನಾನಾದರೂ ಇಲ್ಲಿದ್ದು ಏನು ಶತಕೃತ್ಯಗಳನ್ನು ಮಾಡ ಬೇಕಾಗಿರುವದು? ಭೂಪಬಾಲೆಯೊಡನೆ ಸಂಸಾರ ಮಾಡಲಿಕ್ಕೆ ನನ್ನ ಮನಸ್ಸು ಈಗ ಒಪ್ಪದಾಗಿದೆ. ಹೊಸ ಕನ್ಯೆಯನ್ನು ಶೋಧಿಸಿ ಲಗ್ನವಾಗ ಬೇಕೆಂಬ ಕುತೂಹಲವಾದರೂ ನನ್ನಲ್ಲಿ ಉಳಿದಿಲ್ಲ. ನನ್ನ ಪ್ರಾರಬ್ಧವು ಜರುಗಿಸತಕ್ಕದ್ದನ್ನು ಜರುಗಿಸಿತು. ಅದಕ್ಕಾಗಿ ನಾವು ಅಷ್ಟು ಚಿಂತಿಸುವ ಕಾರಣವಿಲ್ಲ. ಯಾವದೋ ಒಂದು ಬಗೆಯ ವೇದನೆಯು ಮನಸ್ಸಿನಲ್ಲಿ ಹುಟ್ಟಿದಂತಾಗಿರುವದರಿಂದ ನಾನು ಗ್ರಾಮತ್ಯಾಗ ಮಾಡಬೇಕೆಂದು ನಿರ್ಧರಿಸಿರುವೆನು. ಹಾಗೆ ಮಾಡಿದ ಹೊರತು ಮನಶ್ಶಾಂತಿಯು ಲಭಿಸ ಲಾರದು."

"ನೀನು ಎಲ್ಲಿಗೆ ಹೋಗಬೇಕೆಂದು ನಿಶ್ಚಯಿಸಿರುವೆ? ನಿನ್ನೊಡನೆ ಈ ವೃದ್ಧ ಮಾತೆಯನ್ನು ಕರೆದೊಯ್ಯುವಿಯೋ ಇಲ್ಲವೋ?"

"ನಾನು ಒಬ್ಬನೇ ಹೋಗುವೆನು."

"ತಿರುಗಿ ಬರುವದು ಯಾವಾಗ?"

"ಅದನ್ನು ನನಗೆ ಹೇಳಲಿಕ್ಕೆ ಸಾಧ್ಯವಿಲ್ಲ. ಒಂದು ವೇಳೆ ಎಂದೂ ತಿರುಗಿ ಬರಲಿಕ್ಕಿಲ್ಲ."

"ನೀನು ಹೀಗೆ ಅನಿಯಮಿತವಾದ ಅವಧಿಯಿಂದ ಹೊರಟು ಹೋದರೆ ನನ್ನ ಗತಿಯೇನು? ನಿನ್ನ ಈ ಆಸ್ತಿಯ ಗತಿಯೇನು?"

"ನಿನಗೆ ನನ್ನ ಆಸ್ತಿಯೇ ಗತಿ; ನನ್ನ ಆಸ್ತಿಗೆ ನೀನೇ ಗತಿ. ನಿನ್ನ ಮನಸ್ಸಿಗೆ ಬಂದಂತೆ ದಾಸದಾಸಿಯರನ್ನಿಟ್ಟು ಈ ಆಸ್ತಿಯನ್ನು ರಕ್ಷಿಸು.

ನಿನ್ನ ರಕ್ಷಣೆಗಾಗಿ ಈ ಆಸ್ತಿಯು ಉಪಯೋಗವಾಗುವದು. ನನ್ನ ಆಸ್ತಿಯ ಮೇಲೆ ನಾನು ಲೋಭಗೊಂಡಿಲ್ಲ. ಇದರ ವಿನಿಯೋಗವನ್ನು ಮನಸ್ಸಿಗೆ ತಿಳಿದಂತೆ ಮಾಡಲಿಕ್ಕೆ ನೀನು ಸಂಪೂರ್ಣ ಅಧಿಕಾರಿಯಿರುವೆ. ನಿನ್ನನ್ನು ನನ್ನ ಒಳಿಯಲ್ಲಿ ಕರೆದೊಯ್ಯುವದು ಸಾಧ್ಯವಿಲ್ಲ.''

''ಅದೇಕೆ?''

''ನಾನು ಹೋಗಬೇಕೆಂದಿರುವ ಪಟ್ಟಣವು ಸಂಪೂರ್ಣ ಯವನ ಮಯವಾಗಿರುವದೆಂದು ಹೇಳಬಹುದು.''

''ನೀನು ಹೋಗುವದಾದರೂ ಎಲ್ಲಿಗೆ?''

''ಗೌಡರಾಜಧಾನಿಗೆ. ಬಂಗಾಲದ ಸುಲತಾನನಾದ ಸಲಿಮನಶಹ ನಲ್ಲಿ ಸೇವಾವೃತ್ತಿಯನ್ನು ದೊರಕಿಸಬೇಕೆಂದು ನಾನು ಸಂಕಲ್ಪಮಾಡಿ ಕೊಂಡಿರುವೆನು.''

ಕಾಲಾಚಾಂದನಾಡಿದ ಮಾತುಗಳನ್ನು ಕೇಳಿದ ಕೂಡಲೆ ಹರಸುಂದ ರಿಯ ಕಣ್ಣುಗಳಲ್ಲಿ ಕತ್ತಲುಗವಿದಂತಾಯಿತು. ತಾನು ಸ್ವಪ್ನದಲ್ಲಿರು ವೆನೋ ಜಾಗ್ರತೆಯಲ್ಲಿರುವೆನೋ ಎಂಬದು ಸಹ ಅವಳಿಗೆ ತಿಳಿಯದಾ ಯಿತು. ತಾನು ಜಾಗ್ರತಾವಸ್ಥೆಯಲ್ಲಿರುವೆನೆಂಬದನ್ನು ನಂಬಿಗೆ ಮಾಡಿ ಕೊಳ್ಳಬೇಕಾದರೆ ಅವಳಿಗೆ ಸಾಕುಸಾಕಾಗಿ ಹೋಯಿತು. ತಾನು ಜಾಗ್ರ ತಾವಸ್ಥೆಯಲ್ಲಿರುವೆನೆಂಬದು ಅವಳಿಗೆ ಮನವರಿಕೆಯಾದೊಡನೆಯೆ ಕಾಲಾ ಚಾಂದನನ್ನು ಕುರಿತು ಅವಳು ಸೋಜಿಗದಿಂದ:—''ನೀನು ನನ್ನ ಮಗನೆ? ನಿಜವಾಗಿಯೂ ನೀನು ನನ್ನ ಕುಮಾರನಾದ ಕಾಲಾಚಾಂದನೆ? ಅಲ್ಲಲ್ಲ; ನೀನು ನನ್ನ ಕುಮಾರನಲ್ಲ. ನನ್ನ ಕಾಲಾಚಾಂದನ ಮುಖದಿಂದ ಈ ಬಗೆಯ ಮಾತುಗಳೆಂದಿಗೂ ಹೊರಡುತ್ತಿದ್ದಿಲ್ಲ. ನನ್ನ ಕಾಲಾಚಾಂದನು ಅಚ್ಚ ಬ್ರಾಹ್ಮಣ ಕುಲದವನು; ಉಚ್ಚ ಕ್ಷಾತ್ರಮನೋವೃತ್ತಿಯವನು; ಸ್ವಚ್ಛ ದೇಶಾಭಿಮಾನಿಯು; ನಿಚ್ಚ ಧರ್ಮರತನು. ಇಂತಹ ನನ್ನ ಕುಲದೀಪಕ ನಾದ ಕಾಲಾಚಾಂದನ ಮುಖದಿಂದ ಯವನರ ಸೇವಾವೃತ್ತಿಯನ್ನು ಮಾಡ ಬೇಕೆನ್ನುವ ಅಭದ್ರ ಮಾತುಗಳು ಎಂದೂ ಹೊರಡಲಾರವು. ಅವನು ಯವನರ ಅಸ್ಥಿವೈರಿಯು. ಹಿಂದುಧರ್ಮವನ್ನು-ಹಿಂದುರಾಷ್ಟ್ರವನ್ನು

ಯವನರ ಪಾರತಂತ್ರ್ಯ ಬಂಧನದಿಂದ ಬಿಡಿಸಬೇಕೆನ್ನುವ ಉಜ್ವಲ ವಿಚಾರ ಗಳು ನನ್ನ ಕಾಲಾಚಾಂದನಲ್ಲಿ ಸದೈವ ಜಾಗ್ರುತವಾಗಿರುವವು. ಯವನರ ಸೇವೆಯಿಂದ ಅಧೋಗತಿಯನ್ನು ಹೊಂದಬೇಕೆನ್ನುವ ನಿನಗೂ ನನ್ನ ತೇಜ ಸ್ವಿಯಾದ ಕಾಲಾಚಾಂದನಿಗೂ ಭೂವ್ಯಾಕಾಶಗಳಷ್ಟು ಅಂತರವಿರುವದು. ನನ್ನ ಕಾಲಾಚಾಂದನು ಮಹಾ ತೇಜಸ್ವಿಯು. ಅವನು ರಾಜ್ಯಕರ್ತರ ಯೋಗ್ಯತೆಯನ್ನು ಹೊಂದತಕ್ಕವನಿರುವನು. ಅವನಲ್ಲಿ ರಾಜಯೋಗ ವಿರುವದೆಂದು ಮಹಾತ್ಮರ ಭವಿಷ್ಯಸೂಚನೆಯಾಗಿರುವದು. ನೀನು ಆ ಕಾಲಾಚಾಂದನಲ್ಲ. ಯಾವ ಕಾಲಾಚಾಂದನಿಗೆ ಅದೇ ಮಹಾತ್ಮರು ವಿಷ ಹಾಕಿ ಕೊಲ್ಲಬೇಕೆಂದು ಹೇಳಿರುವರೋ, ಆ ಕಾಲಾಚಾಂದನು ನೀನಿದ್ದರೂ ಇರಬಹುದು. ನೀನು ನಿಜವಾಗಿ ಆ ಕಾಲಾಚಾಂದನಾಗಿದ್ದರೆ ಮಹಾ ತ್ಮರ ವಾಣಿಯು ಸತ್ಯವಾದದ್ದೆಂದು ಊಹಿಸಲು ಬಾಧಕವಿಲ್ಲ. ಯವನ ಸೇವೆಯಲ್ಲಿದ್ದು ಹಿಂದುಗಳಿಗೆ ಕಾಲನಾಗಬೇಕೆನ್ನುವ ನಿನ್ನನ್ನು ವಿಷ ಹಾಕಿ ಕೊಲ್ಲಬೇಕೆಂದು ಮಹಾತ್ಮರ ಆಜ್ಞೆಯಾಗಿರುವದು. ನನ್ನ ನಿಜವಾದ ಕುಮಾರ ಕಾಲಾಚಾಂದನು ಎಲ್ಲಿಯೋ ಅದೃಶ್ಯನಾದನು. ಯವನರ ಸೇವೆಯನ್ನು ಮಾಡಬೇಕೆಂಬ ಬುದ್ಧಿಯು ನಿನ್ನಲ್ಲಿ ಹುಟ್ಟಿದ್ದನ್ನು ನೋಡಿ ದರೆ ಮಹಾತ್ಮರ ಭವಿಷ್ಯವು ಅನೃತವೆಂದು ಭಾವಿಸಲಿಕ್ಕೆ ಬರುವಂತಿಲ್ಲ. ನೀನು ನಿಜವಾಗಿ ವಿಷಪ್ರಾಶನದಿಂದ ಕೊಲ್ಲಲ್ಪಟ್ಟರೆ ದೇಶದ ಕಲ್ಯಾಣವಾಗು ವದೆಂದು ತೋರುತ್ತದೆ.''

''ಅವ್ವಾ, ನೀವೂ ನನ್ನ ವಿಷಯವಾಗಿ ಔದಾಸೀನ್ಯ-ತಿರಸ್ಕಾರಗಳು ಳ್ಳವರಾದಿರೇನು? ನಾನು ಯವನರ ಸೇವೆಯಲ್ಲಿದ್ದರೆ ಹಿಂದುಗಳಿಗೆ ಕಾಲ ನಾಗುವೆನೆಂದು ನಿಮ್ಮ ತಿಳುವಳಿಕೆಯಾಗಿರುವದೇನು? ಹಿಂದುದೇಶದ ವಿಷಯಕ್ಕೆ, ಹಿಂದುಧರ್ಮದ ವಿಷಯಕ್ಕೆ, ಹಿಂದುಗಳ ಸುಖ-ಸ್ವಾತಂತ್ರ್ಯ ಗಳ ವಿಷಯಕ್ಕೆ ನನ್ನ ಅಂತರಂಗವು ಯಾವ ಬಗೆಯದಿರುವದೆಂಬದು ನನ್ನ ಹೃದಯಸ್ಥ ಪರಮಾತ್ಮನಿಗೊಬ್ಬನಿಗೇ ಗೊತ್ತು. ನೀವು ಮಹಾತ್ಮರ ವಿಚಿತ್ರವಾದ ಭವಿಷ್ಯವನ್ನು ನಂಬಬೇಡಿರಿ. ನಾನು ಯವನ ಸೇವೆಯಲ್ಲಿ ತೊಡಗಿದ್ದರೂ ದೇಶಕ್ಕಾಗಿ ಹೇಗೆ ಹೆಣಗುತ್ತಿರುವೆನೆಂಬದು ನಿಮಗೆ ಸ್ವಲ್ಪ

ದಿನಗಳಲ್ಲಿ ತಿಳಿಯುವದು. ನಾನು ನಿಮ್ಮನ್ನು ಬಳಿಯಲ್ಲಿ ಕರೆದುಕೊಂಡು ಹೋಗಿ ನನ್ನ ನಿತ್ಯದ ಕಾರ್ಯಗಳನ್ನು ದಿನಾಲು ತಿಳಿಸುತ್ತಿದ್ದೆನು. ಯವನ ಮಯವಾದ ಜನಪದದಲ್ಲಿ ಧರ್ಮಶ್ರದ್ಧೆಯುಳ್ಳವರಾದ ನೀವು ಇರಲಾರಿರಿ. ನಮ್ಮ ವೀರಜಾವನವು ಹಿಂದು ಜಹಗೀರಿಯಾದಿರುವದರಿಂದ ಇಲ್ಲಿ ನೀವು ಅಲ್ಲಿ ಗಿಂತಲೂ ಸೌಖ್ಯದಿಂದ ಕಾಲಕಳೆಯಬಹುದಾಗಿದೆ. ನೀವು ನನ್ನ ಅಚಲ ಣೆಯ ವಿಷಯದಲ್ಲಿ ಸಂದೇಹಗೊಳ್ಳಬೇಡಿರಿ."

"ನೀನು ಯಾವ ಉದ್ದೇಶದಿಂದ ನಿನ್ನ ಪತ್ನಿಗೆ ನಿರೋಪ ಕೊಟ್ಟೆ?"

"ಸರ್ವತಂತ್ರ ಸ್ವತಂತ್ರಳಾದ ಅವಳಿಗೆ ನನ್ನ ಆಜ್ಞೆಯ ಅವಶ್ಯಕತೆ ಯೆಲ್ಲಿತ್ತು?"

"ಅವಳ ಸ್ಥಿತಿಯು ಹೇಗೆಯೇ ಇರಲಿ; ನೀನು ಅವಳಿಗೆ ನಿರೋಪ ಕೊಟ್ಟದ್ದು ಸುಳ್ಳಲ್ಲ."

"ಅವಳು ಸತೀಧರ್ಮವನ್ನು ತಿಲಾಂಶವಾದರೂ ಪಾಲಿಸುವದಿಲ್ಲ ವೆಂಬದು ನನಗೆ ಗೊತ್ತಾದ್ದರಿಂದ ಅವಳನ್ನು ಹೋಗಗೊಟ್ಟೆನು."

"ನೀನಾದರೂ ನಿನ್ನ ಧರ್ಮವನ್ನು ಪೂರಾ ಮರೆತಿರುವೆ. ಪುತ್ರ ಧರ್ಮ-ರಾಷ್ಟ್ರಧರ್ಮ ಮೊದಲಾದವುಗಳಿಗೆ ನೀನು ಪೂರಾ ಎರವಾಗಿ ರುವೆಯೆಂಬದು ಇದೀಗ ನನ್ನ ಮನವರಿಕೆಯಾಯಿತು."

"ಅವ್ವಾ, ನನಗೆ ಇಲ್ಲಿ ನಿಲ್ಲಲಿಕ್ಕೆ ಬರುವಂತಿಲ್ಲ."

"ನಾನಾದರೂ ನಿನಗೆ ಆತಂಕವನ್ನು ಮಾಡುವದಿಲ್ಲ. ಮೊದಲು ದೊಡ್ಡ ದೊಡ್ಡ ಮಾತುಗಳನ್ನಾಡುತ್ತಿದ್ದ ನಿನ್ನಿಂದ ಇನ್ನು ಮೇಲೆ ಯಾವ ಕಾರ್ಯಗಳು ಜರುಗುತ್ತವೆಂಬದನ್ನು ನಾನು ತಿಳಿದಿರುವೆನು."

"ಮನಶ್ಶಾಂತಿಗಾಗಿ ನಾನು ವೀರಜಾವನವನ್ನು ತ್ಯಜಿಸಬೇಕಾ ಗಿರುವದು."

"ಮನಶ್ಶಾಂತಿಗಾಗಿಯೇ ಯವನರ ಪಾದಗಳ ಮೇಲೆ ಹಣೆಯಿಡುವ ಪ್ರಸಂಗವನ್ನು ತಂದುಕೊಳ್ಳಬೇಕಾಗಿದ್ದೀತು!"

"ಪ್ರವಾಹ ಪತಿತನಂತಾಗಿರುವ ನಾನು ವಿವೇಕವನ್ನು ಕಳೆದು ಕೊಂಡಿರುವೆನು. ಮನಸ್ಸು ಎಳೆದತ್ತ ಹೋಗತಕ್ಕೊಡಗಿರುವ ಕಾರಣ

ವಾದರೂ ಇದೇ.''

"ನೀನು ಕೈಕೊಳ್ಳುವ ಕಾರ್ಯವು ಶ್ರೇಯಸ್ಕರವೂ ಸೌಖ್ಯದಾಯಕವೂ ಇರುವದೇನು?.''

"ಅದನ್ನು ಈಗಲೆ ನಾನು ಹೇಳಲಾರೆನು. ಕಾರ್ಯಾನಂತರದಲ್ಲಿ ಈ ಮಾತಿನ ನಿಷ್ಕರ್ಷೆಯಾಗುವದು.''

ಪ್ರವಾಹ ಪತಿತನಾದ ಕಾಲಾಚಾಂದನು ಗೌಡ ಸುಲತಾನನ ಸೇವಾವೃತ್ತಿಗಾಗಿ ತೆರಳಬೇಕೆಂಬದನ್ನು ನಿಶ್ಚಯಿಸಿದನು. ಯವನರನ್ನು ಕಂಡರೆ ಕೆಂಡವನ್ನು ಕಾರುತ್ತಿದ್ದ ಕಾಲಾಚಾಂದನು ಈಗ ಅವರ ಸೇವೆಯಲ್ಲಿ ಆತ್ಮಶಾಂತಿಯನ್ನು ಪಡೆಯಬೇಕೆಂದು ನಿರ್ಧರಿಸಿದ ಸಂಗತಿಯು ಅತ್ಯಂತ ವಿಸ್ಮಯಜನಕವಾಗಿತ್ತು. ವ್ರಜಬಾಲೆಯು ಹೊರಟು ಹೋದ ಮಾರನೆಯ ದಿನವೇ ಅವನು ತನ್ನ ಜನ್ಮಭೂಮಿಯಾದ ವೀರಜಾವನವನ್ನು ತ್ಯಜಿಸಿದನು. ಗೌಡರಾಜಧಾನಿಗೆ ಹೋಗುವದಕ್ಕಿಂತ ಮುಂಚಿತವಾಗಿ ತನ್ನ ಬಾಲಮಿತ್ರನಿಗೆ ಭೆಟ್ಟಿಯಾಗಬೇಕೆಂದು ಅವನು ಆಲೋಚನೆ ಮಾಡಿದ್ದನು. ಗದಾಧರನು ಅವನ ವಿವಾಹವಾದಂದಿನಿಂದ ವೀರಜಾವನವನ್ನು ಬಿಟ್ಟು ಸಾಂತೋಡೆಗೆ ಹೋಗಿದ್ದನು. ವೀರಜಾವನಕ್ಕೂ ಗದಾಧರನ ಜನ್ಮಗ್ರಾಮವಾದ ಸಾಂತೋಡೆಗೂ ಬಹಳ ಅಂತರವಿತ್ತು. ಆದರೂ ಬಾಲಮಿತ್ರನಿಗೆ ಭೆಟ್ಟಿಯಾಗಿಯೇ ಹೋಗಬೇಕೆಂದು ಕಾಲಾಚಾಂದನು ಸಂಕಲ್ಪ ಮಾಡಿಕೊಂಡದ್ದರಿಂದ ಸಾಂತೋಡೆಯ ಹಾದಿಯನ್ನು ಹಿಡಿದನು.

ಕಾಲಾಚಾಂದನು ಬಲಾತ್ಕಾರದಿಂದ ವ್ರಜಬಾಲೆಯನ್ನು ವಿವಾಹವಾದ ಸಂಗತಿಯು ವಿವಾಹದ ದಿವಸವೇ ಗದಾಧರನಿಗೆ ತಿಳಿಯಿತು. ಕೂಡಲೆ ಅವನು ವೀರಜಾವನವನ್ನು ಬಿಟ್ಟು ತನ್ನ ಜನ್ಮಭೂಮಿಯಾದ ಸಾಂತೋಡೆಗೆ ಹೊರಟನು. ಕಾಲಾಚಾಂದನು ತನ್ನ ಪ್ರತಿಜ್ಞೆಯನ್ನು ಪೂರೈಸಿ ಕೊಂಡನೆಂದೂ ತನ್ನ ಪ್ರತಿಜ್ಞಾಭಂಗವಾಯಿತೆಂದೂ ಅವನು ಬಹಳವಾಗಿ ಕ್ಲೇಶಗೊಂಡನು. ತನ್ನಲ್ಲಿ ನಿಸ್ಸೀಮ ಪ್ರೇಮವುಳ್ಳವಳಾದ ವ್ರಜಬಾಲೆಯು ಕಾಲಾಚಾಂದನನ್ನು ವರಿಸಿದ ಸಂಗತಿಯು ಅವನಿಗೆ ಬಹಳ ವಿಸ್ಮಯ ಜನಕವೂ ದುಃಖಕಾರಕವೂ ಆಗಿತ್ತು. ಮಿಂಚಿಹೋದ ಮಾತಿ

ಗಾಗಿ ಚಿಂತಿಸುತ್ತ ಕುಳಿತುಕೊಳ್ಳುವದರಲ್ಲಿ ಅರ್ಥವಿಲ್ಲವೆಂದು ಬಗೆದು, ಭಗ್ನಮನೋರಥನಾದ ಗದಾಧರನು ವೀರಜಾವನದಲ್ಲಿರಲಿಕ್ಕೆ ಮನಸ್ಸಿಲ್ಲದವನಾಗಿ ಸಾಂತ್ರೋಡೆಗೆ ತೆರಳಿದನು. ಅವನು ತನ್ನ ಭಾವೀ ಆಯುಷ್ಯದ ರೂಪ-ರೇಷೆಗಳನ್ನು ಈಗಾಗಲೆ ಕಂಡುಹಿಡಿದಿದ್ದನು. ಪ್ರತಿಜ್ಞಾಪೂರ್ತಿಗಾಗಿ ಅವಿವಾಹಿತನಾಗಿರಬೇಕೆಂದೂ, ಶೇಷಾಯುಷ್ಯವನ್ನು ದೇಶಸೇವೆಯಲ್ಲಿಯೆ ಕಳೆಯಬೇಕೆಂದೂ ಅವನು ಸತ್ಯಸಂಕಲ್ಪ ಮಾಡಿಕೊಂಡಿದ್ದನು.

ವೀರಜಾವನದಿಂದ ಹೊರಟ ಕಾಲಾಚಾಂದನಿಗೆ ದಾರಿಯಲ್ಲಿಯೆ ಗದಾಧರನ ಭೆಟ್ಟಿಯಾಯಿತು. ಕಾಲಾಚಾಂದನು ತನ್ನ ಮಿತ್ರನ ಬಾಡಿದ ಮುಖವನ್ನು ನೋಡಿ ಬಹಳೇ ಕ್ಲೇಶಗೊಂಡನು. ತನ್ನ ಸೌಖ್ಯಕ್ಕಾಗಿ ಜೀವದ ಗೆಳೆಯನ ಮನಸ್ಸನ್ನು ನೋಯಿಸಿದ ತಾನು ಅಧಮಾಧಮನೆಂದು ಅವನು ಭಾವಿಸಿದನು. ಪ್ರಣಯಭಂಗಿತನಾದ ಗದಾಧರನಿಗೆ ಜಗತ್ತೇ ಉದಾಸವಾಗಿರುವದೆಂಬದನ್ನು ಅವನ ಮುಖಚರ್ಯೆಯ ಮೇಲಿಂದ ಕಾಲಾಚಾಂದನು ಗುರುತಿಸಿದನು. ಗದಾಧರನು ಕಾಲಾಚಾಂದನನ್ನು ನೋಡಿದ್ದರೂ, ಅರಿಯದವನಂತೆ ದಾರೀ ನಡೆಯತೊಡಗಿದ್ದನು. ತನ್ನ ಹೃದಯೇಶ್ವರಿಯನ್ನು ಹೃದಯಸಿಂಹಾಸನದಿಂದ ಪದಭ್ರಷ್ಟಗೊಳಿಸಿದ ಕಾಲಸ್ವರೂಪಿಯಾದ ಕಾಲಾಚಾಂದನೊಡನೆ ಮಾತಾಡುವದರಲ್ಲಿ ಅರ್ಥವಿಲ್ಲೆಂದು ಅವನ ಭಾವನೆಯಾಗಿತ್ತು. ತನ್ನ ಮಿತ್ರನು ತನ್ನನ್ನು ನೋಡಿದ್ದರೂ, ಮಾತಾಡಿಸದೆ ಹೊರಟದ್ದನ್ನು ನೋಡಿ, ಕಾಲಾಚಾಂದನು ವೇಗದಿಂದ ಅವನನ್ನು ಸಮೀಪಿಸಿ —"ಗದಾಧರ!"

ಗದಾಧರನು ಕಾಲಾಚಾಂದನ ಕೂಗನ್ನು ಅನುಲಕ್ಷಿಸಿ ಮೂಕವೃತ್ತಿಯಿಂದ ಮುಂದೆ ಸಾಗಿದ್ದನು. ಆಗ ಕಾಲಾಚಾಂದನು ತೀರ ಅವನ ಸಮೀಪಕ್ಕೆ ಹೋಗಿ —"ಗದಾಧರ, ನಿನ್ನೊಡನೆ ಎರಡು ಮಾತನಾಡಬೇಕೆಂದು ಸಂಕಲ್ಪ ಮಾಡಿಕೊಂಡು ನಿನ್ನ ಬಳಿಗೆ ಬಂದಿರುವೆನು. ದಯವಿಟ್ಟು ನನ್ನ ಮಾತಿಗೆ ಉತ್ತರ ಕೊಡುವೆಯಾ?"

"ಕಾಲಾಚಾಂದ!" ಗದಾಧರನು ಸಂತಪ್ತ ಹೃದಯದಿಂದ ಕಾಲಾಚಾಂದನನ್ನು ಕುರಿತು: "ನಿನ್ನ ವಿವಾಹದ ಪೂರ್ವದಲ್ಲಿ ಈ ಗದಾಧರನು

ನಿನ್ನೊಡನೆ ಯಾವ ಬಗೆಯ ಸಂಬಂಧವನ್ನಿಟ್ಟು ನಡೆಯುತ್ತಿದ್ದನೋ, ಅದರಂತೆ ಈಗ ನಡೆಯಲಾರನೆಂದು ನೀನು ದಿಟವಾಗಿ ನಂಬು. ನೀನು ನನ್ನ ಕಡು ಹಗೆಯಾಗಿರುವೆ. ನನ್ನ ಹೃದಯಸ್ಥಿತ ಪ್ರಣಯ ದೇವತೆಯನ್ನು ಸೆಳೆದುಕೊಂಡು ಹೋಗಿರುವೆ. ನನ್ನ ಪ್ರಾರಬ್ಧದಲ್ಲಿದ್ದಂತೆ ಕಾರ್ಯವು ಘಟಿಸಿತು. ಪ್ರಣಯಭಂಗ ಹೊಂದಿದ ನನ್ನ ಹೃದಯವು ತಳಮಳಿಸುತ್ತಿರುವದು. ವಿವೇಕವು ನಷ್ಟವಾಗಿರುವದು. ಸದಸದ್ವಿವೇಕ ಬುದ್ಧಿಯನ್ನು ಕಳೆದುಕೊಂಡ ನನ್ನೊಡನೆ ಮಾತನಾಡುವದರಿಂದ ನಿನಗಾಗುವ ಲಾಭವೇನು? ಪ್ರಾಪ್ತಿಕರಕವಾದ ಕಾರ್ಯವನ್ನು ಎಂದೋ ಸಾಧಿಸಿರುವೆ. ಹೀಗಿದ್ದ ಮೇಲೆ ನನ್ನಲ್ಲಿ ಯಾಚನೆ ಮಾಡುವ ಕಾರಣವೇನು? ನಿನ್ನ ಮೇಲಿನ ಸೇಡು ತೀರಿಸಿಕೊಳ್ಳಬೇಕೆಂಬ ಉಗ್ರಭಾವನೆಯು ನನ್ನಲ್ಲಿ ನೆಲೆಗೊಂಡಿರುವಾಗ ನೀನು ಈಗ ಸಂಧಾನಕ್ಕೆ ಬರುವದರಲ್ಲಿ ಲಾಭವೇನಿರುವದು? ನಿನ್ನಂತೆ ನಾನು ನಿನ್ನ ಧರ್ಮಪತ್ನಿಯಾದ ವ್ರಜಬಾಲೆಯ ಪ್ರಾಪ್ತಿಗಾಗಿ ಹವಣಿಸುವದಿಲ್ಲವೆಂದು ದೃಢವಾಗಿ ನಂಬು. ನಾನು ಪರಸ್ತ್ರೀ ವಂಚಕನಲ್ಲ. ನೀನು ನಿನ್ನ ಲಾವಣ್ಯನಿಧಿಯಾದ ಪತ್ನಿಯೊಡನೆ ಸೌಖ್ಯದಿಂದ ಕಾಲಹರಣ ಮಾಡತೊಡಗಿದರೆ, ಆ ವಿಷಯದಲ್ಲಿ ನನ್ನ ಅಸೂಯೆಯಿಲ್ಲ. ನನ್ನ ಮಾನಸ ಪತ್ನಿಯನ್ನು ಸೆಳೆದೊಯ್ದ ಅಪರಾಧಕ್ಕಾಗಿ ನಿನಗೆ ಶಿಕ್ಷೆ ವಿಧಿಸಬೇಕೆಂದು ನಾನು ನಿರ್ಧರಿಸಿರುವೆನು. ನಿನ್ನ ಮೇಲಿನ ಸೇಡನ್ನು ಭಯಂಕರವಾದ ರೀತಿಯಿಂದ ತೀರಿಸಿಕೊಳ್ಳಬೇಕೆಂಬ ದ್ವೇಷವು ನನ್ನಲ್ಲಿ ಕ್ಷಣಕ್ಷಣಕ್ಕೆ ಬೆಳೆಯ ತೊಡಗಿರುವದು. ನಿನ್ನ ಮುಂದೆ ಪ್ರತಿಜ್ಞೆ ಮಾಡಿದಂತೆ ನಾನು ಅವಿವಾಹಿತನಾಗಿರುವದನ್ನೇ ನಿಶ್ಚಯಿಸಿರುವೆನು. ನಾನು ಸಂಸಾರದಲ್ಲಿ ಔದಾಸೀನ್ಯ ತಳೆದಿದ್ದರೂ, ನನ್ನಲ್ಲಿಯ ಸೇಡು ತೀರಿಸಿಕೊಳ್ಳುವ ಭಾವನೆಯು ಮಾತ್ರ ವರ್ಧಮಾನಸ್ಥಿತಿಯಲ್ಲಿರುವದು. ಈಗ ನೀನು ಏಕಾಂಗಿಯಾಗಿ ನನ್ನ ಕೈಯಲ್ಲಿ ಸಿಲುಕಿರುವೆಯೆಂದು ನಿನ್ನ ಮೇಲೆ ಕೈ ಮಾಡಲಾರೆನು. ಅಸಹಾಯ್ಯ ಸ್ಥಿತಿಯಲ್ಲಿಯೂ ನಿರಾಧಾರಿಗಳಾಗಿಯೂ ಇದ್ದ ಜನರ ಮೇಲೆ ಕೈಮಾಡುವ ಕಪಟ ಕುಶಲಯತೆಯು ನನ್ನಲ್ಲಿಲ್ಲ. ಈ ಎಲ್ಲ ದುರ್ಗುಣಗಳು ನಿನ್ನಲ್ಲಿರುವವು. ಹೀಗಿದ್ದರೂ ಸದ್ಯಕ್ಕೆ

ನಾನು ನಿನ್ನನು ಉಪೇಕ್ಷಿಸಿರುವೆನು.''

"ಗದಾಧರ!'' ಗದಾಧರನ ಮಾತುಗಳನ್ನೆಲ್ಲ ಕೇಳಿ ಸೋಜಿಗ, ಖಿನ್ನತೆ, ಪಶ್ಚಾತ್ತಾಪ ಮೊದಲಾದವುಗಳಿಂದ ಯುಕ್ತನಾದ ಕಾಲಾಚಾಂದನು ಅವನನ್ನು ಕುರಿತು:—"ನಾನು ಅಪರಾಧಿಯು. ದುರಾಚಾರಿಯಾದ ನನ್ನಿಂದ ಅಲ್ಲದ-ಸಲ್ಲದ ಕೃತಿಗಳು ಘಟಿಸಿದ್ದಕ್ಕಾಗಿ ಪಶ್ಚಾತ್ತಾಪವಾಗಿದೆ. ಈಗ ನಾವಿಬ್ಬರೂ ಸಮ ದುಃಖಿಗಳಾಗಿರುವೆವು. ನಾನು ಲಾವಣ್ಯಮಯಿಯ ಕೈ ಹಿಡಿದು ಹೇಗೆ ಮೂರ್ಖತನ ಮಾಡಿದೆನೆಂಬದನ್ನು ತಿಳಿಸುವದಕ್ಕಾಗಿಯೆ ನಿನ್ನ ಬಳಿಗೆ ಧಾವಿಸಿ ಬಂದಿರುವೆನು.''

ಬಳಿಕ ಕಾಲಾಚಾಂದನು ವಿವಾಹದ ಎಲ್ಲ ಸಂಗತಿಗಳನ್ನು ತಿಳಿಸಿ, ವ್ರಜಬಾಲೆಯು ವೀರಜಾವನದಲ್ಲಿ ತನ್ನೊಡನೆ ಜಗಳಾಡಿ ಹೋದ ಸುದ್ದಿಯನ್ನು ಹೇಳಿದನು. ಅನಂತರದಲ್ಲಿ ಅವನು:—"ಗದಾಧರ, ವ್ರಜಬಾಲೆಯು ನಿನ್ನಲ್ಲಿ ಹೆಚ್ಚಾಗಿ ಪ್ರೇಮವುಳ್ಳವಳಿದ್ದುದರಿಂದ ಅವಳು ನಿನ್ನ ಬಳಿಗೆ ಬಂದಿರಬಹುದೆಂದು ನಾನು ಊಹಿಸುತ್ತೇನೆ."

"ವ್ರಜಬಾಲೆಯು ನನ್ನ ಬಳಿಗೆ ಬಂದಿಲ್ಲ.''

"ಅವಳು ನಿನ್ನ ಬಳಿಗೆ ಬಂದಿಲ್ಲವೆ? ಹಾಗಾದರೆ ಎಲ್ಲಿಗೆ ಹೋಗಿರುವಳು.''

"ಆ ಸಂಗತಿಯು ನನಗೆ ಹೇಗೆ ತಿಳಿಯಬೇಕು?''

"ನೀನು ಸುಳ್ಳು ಮಾತನಾಡುವೆ. ಅವಳು ನಿನ್ನ ವಿಷಯದಲ್ಲಿ ಅವರ್ಣನೀಯ ಪ್ರಣಯವುಳ್ಳವಳಿರುವದರಿಂದ ನಿನ್ನನ್ನು ಬಿಟ್ಟು ಬೇರೆ ಕಡೆಗೆ ಹೋಗಿರಲಾರಳು.''

"ವ್ರಜಬಾಲೆಯು ನನ್ನಲ್ಲಿ ಪ್ರೇಮವುಳ್ಳವಳಿದ್ದರೆ ಈಗ ಆ ಪ್ರೇಮದ ಉಪಯೋಗವೇನು! ಕಾಲಾಚಾಂದ ವಿವಾಹಬಂಧನೆಯಿಂದ ನನಗೆ ಅವಳು ಪರಸ್ತ್ರೀಯಾಗಿರುವಳು. ಅನ್ಯರ ಸ್ತ್ರೀಯರನ್ನು ಅಪೇಕ್ಷಿಸುವಂತಹ ಕ್ಷುದ್ರಮನೋವೃತ್ತಿಯವನು ನಾನಲ್ಲ. ನನ್ನಲ್ಲಿಗೆ ವ್ರಜಬಾಲೆಯು ನಿಜವಾಗಿಯೂ ಬಂದಿಲ್ಲ.''

"ಸುಳ್ಳು ಮಾತನಾಡುವೆ.''

"ಈ ಗದಾಧರನು ಕಾಲತ್ರಯದಲ್ಲಿಯೂ ಅಸತ್ಯ ಭಾಷಣಗಳ ನ್ನಾಡಲಾರನು."

"ಒಂದು ವೇಳೆ ವ್ರಜಬಾಲೆಯು ನಿನ್ನಲ್ಲಿ ಪ್ರೇಮಯಾಚನೆಗಾಗಿ ಬಂದರೆ ನೀನು ಅವಳ ಆಶಾಭಂಗ ಮಾಡುವೆಯಾ?

"ಕಾಲಾಚಾಂದ, ನಿನ್ನೊಡನೆ ನೂರಾರು ಮಾತುಗಳನ್ನಾಡುತ್ತ ನಿಲ್ಲಲಿಕ್ಕೆ ನನ್ನ ಇಚ್ಛೆಯಿಲ್ಲ. ಈ ಗದಾಧರನು ಉಚ್ಚ ಮನೋವೃತ್ತಿ ಯುವನಿರುವನೆಂದು ಒಂದೇ ಮಾತಿನಲ್ಲಿ ಹೇಳುವೆನು."

"ಗದಾಧರ, ವ್ರಜಬಾಲೆಯು ಸ್ವೈರಿಣಿಯಿರುವಳು. ಅವಳ ಸ್ವಭಾವದ ಪಡಿಕಟ್ಟು ನನಗೆ ಮೊದಲು ತಿಳಿದಿದ್ದಿಲ್ಲ. ಅವಳು ನನ್ನ ಆಶೆ ಯನ್ನು ಮಣ್ಣುಪಾಲು ಮಾಡಿದ್ದಲ್ಲದೆ, ಗ್ರಾಮತ್ಯಾಗ ಮಾಡಲಿಕ್ಕೆ ತೊಡಗಿಸಿದಳು."

"ಕಾಲಾಚಾಂದ, ನೀನು ಮೂರ್ಖನಿರುವೆ. ವ್ರಜಬಾಲೆಯಂತಹ ಮಹಾ ಸಾಧ್ವಿಗೆ ಅನುಚಿತವಾಡಿದರೆ ನಿಜವಾಗಿಯೂ ಅಧೋಗತಿಯನ್ನು ಹೊಂದುವೆ. ಪ್ರಣಯಭಂಗವಾದುದರಿಂದ ಅವಳು ಸಂತಪ್ತಳಾಗಿ ನಿನಗೆ ಮನಬಂದಂತೆ ಮಾತಾಡಿರುವಳು. ನಿನ್ನಲ್ಲಿ ಪ್ರೇಮಸಂಬಂಧ ಮಾಡಿ ದರೆ ಪಾಪವೊದಗುವದೆಂಬ ಉದ್ದೇಶದಿಂದಲೇ ಅವಳು ಗೃಹತ್ಯಾಗ ಮಾಡಿರುವಳು. ಅಟ್ಟದ್ದುಣ್ಣದಿದ್ದರೆ ಬಿಟ್ಟೀತೆ? ನೀನು ಈರ್ಷೆಯಿಂದ ಪ್ರತಿಜ್ಞಾ ಮಾಡಿದ್ದರ ಪರಿಣಾಮವೇನಾಯಿತೆಂಬದನ್ನು ಚನ್ನಾಗಿ ಲಕ್ಷ್ಯತ ದಲ್ಲಿಡು. ನಿನ್ನ ಈ ದುಷ್ಕೃತಿಯ ಪರ್ಯವಸಾನವು ಅತ್ಯಂತ ಭಯಂಕರ ಸ್ಥಿತಿಯಲ್ಲಾಗದೆ ಇರಲಾರದು. ಈ ದೇಹವು ಭೂಮಿಗೆ ಬೀಳುವ ವರೆಗೂ ನಾನು ನಿನ್ನ ಮೇಲಿನ ಸೇಡು ತೀರಿಸಿಕೊಳ್ಳುವದಕ್ಕೆ ಯತ್ನಿಸುವವನೇ. ವ್ರಜಬಾಲೆಯಾದರೂ ನಿನಗೆ ಕಡು ವೈರಿಣಿಯಾಗುವಳೆಂಬದನ್ನು ಮರೆಯ ಬೇಡ."

"ಅಪಮಾನದಿಂದ ಮುಖಭಂಗಿತನಾದ ನಾನು ವೀರಜಾವನದಲ್ಲಿರ ಲಿಕ್ಕೆ ಮನಸ್ಸಿಲ್ಲದವನಾಗಿ ಮನೆ ಬಿಟ್ಟೆನು."

"ಮುಂದ ನೀನು ಎಲ್ಲಿ ವಾಸಮಾಡಬೇಕೆಂದು ಯೋಚಿಸಿರುವೆ?"

'ಗೌಡರಾಜಧಾನಿಯಲ್ಲಿ ವಾಸವಾಗಿರಬೇಕೆಂದು ಯೋಚಿಸಿರುವೆನು

"ಅಲ್ಲಿಗೆ ಹೋಗುವದರ ಉದ್ದೇಶವೇನು?"

"ಗದಾಧರ, ನಾನು ನನ್ನ ಮನಸ್ಸಿನ ವಿರುದ್ಧವಾದ ಕೃತಿಯನ್ನು ಮಾಡಬೇಕೆಂದು ಯೋಚಿಸಿರುವೆನು. ನಾನು ವೀರಜಾವನದಲ್ಲಾಗಲಿ, ಮತ್ತೊಂದು ಸ್ಥಳದಲ್ಲಾಗಲಿ ನೊಣ ಬಡಿಯುತ್ತ ಕುಳಿತುಕೊಂಡರೆ, ಯಾವ ಪುರುಷಾರ್ಥವನ್ನು ಸಾಧಿಸಿದಂತಾಯಿತು? ಗೌಡ ಪಟ್ಟಣಕ್ಕೆ ಹೋದರೆ ನನ್ನ ಅಭ್ಯುದಯವಾಗುವದೆಂಬದರಲ್ಲಿ ಸಂದೇಹವಿಲ್ಲ. ಮುಖ ಭಂಗಿತರಂತೆ ಅವಸ್ಥೆ ಹೊಂದಿದ ನನ್ನಿಂದ ವೀರಜಾವನದಲ್ಲಿರುವದು ಸಾಧ್ಯವಿಲ್ಲ."

"ನೀನು ಮುಖಭಂಗಿತರಂತೆ ಅವಸ್ಥೆಯನ್ನು ಹೊಂದಿರುವೆ; ಸ್ವತಃ ಮುಖಭಂಗಿತನಾಗಿಲ್ಲವೆಂದು ನಿನ್ನ ಅಭಿಪ್ರಾಯವಿದ್ದಂತೆ ತೋರುವದು."

"ಏನಾದರೂ ಅನ್ನು. ನಾನು ವೀರಜಾವನದಲ್ಲಿರಲಾರದೆ ಗೌಡ ರಾಜಧಾನಿಗೆ ಹೊರಟಿರುವೆನು."

"ವೀರಜಾವನವನ್ನು ಬಿಟ್ಟರೆ ಗೌಡರಾಜಧಾನಿಗೇ ಹೋಗಬೇಕೆಂದು ಶಾಸ್ತ್ರಾಜ್ಞೆಯಿರುವದೇನು? ಗೌಡರಾಜಧಾನಿಯನ್ನು ಬಿಟ್ಟು ದೇಶದಲ್ಲಿ ಯಾವ ಪಟ್ಟಣಗಳೂ ಇಲ್ಲವೆಂದು ನಿನ್ನ ಭಾವನೆಯಿದ್ದಂತೆ ತೋರುತ್ತದೆ. ಏನೇ ಇರಲಿ, ಅಲ್ಲಿ ನಿನ್ನ ಅಭ್ಯುದಯವಾಗುವಂತಹ ಅನುಕೂಲ ಸ್ಥಿತಿಯೇನಿರುವದು?"

"ನಾನು ನವಾಬನ ಸೇವೆಯನ್ನು ಕೈಕೊಳ್ಳಬೇಕೆಂದು ಮಾಡಿರುವೆನು."

ಕಾಲಾಚಾಂದನ ಮಾತು ಕೇಳಿ ಗದಾಧರನು ಬೆಚ್ಚಿಬಿದ್ದನು. ಕಾಲಾಚಾಂದನಲ್ಲಿ ವಿಲಕ್ಷಣವಾದ ವಿಚಾರಕ್ರಾಂತಿಯಾದದ್ದನ್ನು ನೋಡಿ ಅವನಿಗೆ ಬಹಳೇ ಸೋಜಿಗವಾಯಿತು.

"ಅಧಃಪಾತ! ಅಧಃಪಾತ!!"

"ಗದಾಧರ, ನೀನು ಇಷ್ಟೇಕೆ ಭಾವನಾಪ್ರಧಾನನಿರುವೆ? ಗೌಡ ಸುಲತಾನನು ನಮ್ಮ ದೇಶಕ್ಕೆ ಅರಸನಿರುವನು. ಅವನಲ್ಲಿ ಸೇವಾವೃತ್ತಿ

ಯನ್ನು ಕೈಕೊಂಡು ಹಿಂದುಪ್ರಜೆಗಳ ಕಲ್ಯಾಣಕ್ಕಾಗಿ ಯತ್ನಿಸುವದು ಸಾಧ್ಯವಿಲ್ಲವೇನು?''

"ನನಗೆ ಈ ಮಾತು ತಿಳಿಯದು. ಯವನರನ್ನು ನೀರಲ್ಲಿ ನೋಡು ತ್ತಿದ್ದ ನೀನು, ಅವರ ಪಾದಧೂಳಿಯನ್ನು ತಲೆಯ ಮೇಲೆ ಹೊತ್ತುಕೊಳ್ಳು ವದನ್ನು ನೋಡಿದರೆ, ನಿನ್ನ ಮನಸ್ಸಿನಲ್ಲಿ ವಿಲಕ್ಷಣ ಕ್ರಾಂತಿಯಾಗಿರುವ ದೆಂದು ನಿರಾತಂಕವಾಗಿ ಹೇಳಬಹುದು."

"ನಾನಂತೂ ಮನಶ್ಶಾಂತಿಗಾಗಿ ಯವನರ ಸೇವೆಯಲ್ಲಿ ತೊಡಗ ಬೇಕೆಂದು ನಿಶ್ಚಯಿಸಿರುವೆನು.''

"ನಿರ್ಲಜ್ಜನೂ, ಸದಭಿಮಾನಶೂನ್ಯನೂ ಆದ ನಿನ್ನ ಮುಖವನ್ನು ನಾನು ನೋಡಲಾರೆನು!'' ಎಂದು ಗದಾಧರನು ಕ್ರೋಧೋದ್ಗಾರ ತೆಗೆ ದವನೇ ಸಾಂತೋಡೆಗೆ ತೆರಳಿದನು.

---

## ಖೂನಾ.

ವಂಗ ಸಿಂಹಾಸನದ ಮೇಲೆ ಸಲಿಮನಶಹನು ವಿರಾಜಮಾನನಾಗಿದ್ದನು. ಇವನು ಅತ್ಯಂತ ಶೂರನಾಗಿದ್ದನು. ಒಹಾದೂರಶಹ-ಜಲಾಲುದ್ದೀ ನರು ಮರಣ ಹೊಂದಿದ ಮೇಲೆ ಈ ಸಲಿಮನನು ಬಂಗಾಲವನ್ನು ಪಾದಾ ಕ್ರಾಂತ ಮಾಡಿಕೊಂಡನು. ವಂಗ ಸಿಂಹಾಸನವು ಸ್ವಾಧೀನವಾದ ಕೂಡಲೆ ತನ್ನ ಆಳಿಕೆಗೆ ಸ್ಥೈರ್ಯವುಂಟಾಗಬೇಕೆಂದು ಇವನು ದಿಲ್ಲೀ ಶ್ವರನೊಡನೆ ಸ್ನೇಹಬಳೆಯಿಸಿದನು. ಸಲಿಮನನು ಆಗಂತುಕನೂ ಪರ ದೇಶಿಯೂ ಆಗಿದ್ದರೂ ನ್ಯಾಯಪರಾಯಣನೂ ಪ್ರಜಾರಂಜನರತನೂ ಆಗಿ ದ್ದನು. ಇವನು ಗೌಡನಗರವನ್ನು ತನ್ನ ರಾಜಧಾನಿಯನ್ನಾಗಿ ಮಾಡಿ ಕೊಂಡಿದ್ದನು. ಇದು ಆದಿಶೂರನ ಅಥವಾ ಬಲ್ಲಾಳಸೇನನ ಗೌಡನಗರ ವಲ್ಲ; ಈ ಗೌಡವು ಮುಸಲಮಾನರದೇ ಆಗಿತ್ತು. ಸಲಿಮನನ ಆಳಿಕೆ ಯಲ್ಲಿ ಈ ನಗರವು ಒಳ್ಳೆಯ ಊರ್ಜಿತಾವಸ್ಥೆಯಲ್ಲಿತ್ತು. ಇಡೀ ಭರತ ಖಂಡದಲ್ಲಿ ಇದು ಮೊದಲನೆಯ ದೊಡ್ಡ ಪಟ್ಟಣವಾಗಿತ್ತು. ಬಂಗಾ

ಲದ ಫಲವತ್ತಾದ ಭೂಮಿಯಿಂದ ಹೇರಳವಾದ ತೆರಿಗೆಯು ರಾಜಕೋಶದಲ್ಲಿ ತುಂಬಲ್ಪಡುತ್ತಿತ್ತು. ಇದಲ್ಲದೆ ಪ್ರಜೆಗಳ ಜೀವವನ್ನು ಹಿಂಡಿ ಹಣವನ್ನು ಸೆಳೆದುಕೊಳ್ಳುವ ಪದ್ಧತಿಯು ಯವನ ಭೂಪಾಲರಲ್ಲಿ ನೆಲೆಗೊಂಡಿತ್ತು. ಈ ಪ್ರಾಘಾತವು ಒಂದೆರಡು ವರ್ಷಗಳಿಂದ ನೆಲೆಗೊಂಡಿದ್ದಲ್ಲ; ಎರಡು ನೂರು ಮೂರು ನೂರು ವರ್ಷಗಳಿಂದ ಈ ಬಗೆಯ ದಬ್ಬಾಳಿಕೆಯು ಉತ್ತರಭಾರತದಲ್ಲಿ ವ್ಯಾಘಾತಿಯಿಲ್ಲದೆ ನಡೆದಿತ್ತು. ವಂಗದೇಶವು ಈ ನಿಯಮಕ್ಕೆ ಒಳಪಟ್ಟದ್ದಾಗಿತ್ತು. ಒತ್ತಾಯದ ಆಳಿಕೆಯಿಂದ ಬಂಗಾಲದ ರಾಜಕೋಶವು ಅಗಣಿತವಾದ ಐಶ್ವರ್ಯದಿಂದ ತುಂಬಿತ್ತು. ಭಾರತದೊಳಗಿನ ಎಲ್ಲ ಪಟ್ಟಣಗಳಿಗಿಂತ ಗೌಡರಾಜಧಾನಿಯು ಪ್ರತಿಯೊಂದು ಬಗೆಯಿಂದಲೂ ವರಿಷ್ಠವೆನಿಸಿಕೊಳ್ಳುತ್ತಿತ್ತು. ಅಂತಹ ಗೌಡರಾಜಧಾನಿಯ ಸ್ಥಿತಿಯು ಈಗ ಏನಾಗಿರುವದು? ಅದು ಈಗ ಮಣ್ಣಲ್ಲಿ ಮುಚ್ಚಿಹೋಗಿರುವದು! ಸರ್ವಭಕ್ಷಕನಾದ ಕಾಲನ ದೊಡ್ಡ ಉದರದಲ್ಲಿ ಅನೇಕ ಸಮ್ರಾಟರೂ, ಸಾಮ್ರಾಜ್ಯಗಳೂ, ಮಹಾಪ್ರತಾಪಿ ವೀರರೂ ವಿಶ್ರಾಂತಿ ಹೊಂದುತ್ತಿರುವಂತೆ, ಈ ಗೌಡನಗರವಾದರೂ ವಿಶ್ರಮಿಸಿದ್ದರೆ ಆಶ್ಚರ್ಯವೇನು?

"ಸದ್ಯಕ್ಕೆ ಗೌಡನಗರದ ಸ್ಥಿತಿಯು ಹೇಗಿದ್ದರೂ ಇರಲೊಲ್ಲದೇಕೆ ನಮ್ಮ ಕಥಾನಕಕಾಲದಲ್ಲಿ ಅದು ಉತ್ತರಭಾರತದ ರಾಜಧಾನಿಯಾದ ದಿಲ್ಲಿಯನ್ನು ಹಿಂದುಳಿಸುವಂತಿತ್ತು. ರಾಜಧಾನಿಯ ಕೋಟೆಯ ಮೇಲೆ ಉಡ್ಡಾಣ ಮಾಡುತ್ತಿದ್ದ ಅರ್ಧಚಂದ್ರಾಂಕಿತವಾದ ಹರಿತಧ್ವಜವು ಯಾರಿಗೂ ಬಾಗದಂತೆ ಗರ್ವದಿಂದ ಮೆರೆಯುತ್ತಿತ್ತು. ಸಲಿಮನಶಹನು ಮುಖ್ಯಮಂತ್ರಿಯಾದ ಖಾನಜಹಾನ ಲೋಡಿಯ ಬುದ್ಧಿಬಲದ ಹಾಗು ಕತಲೂಖಾನ ಸೇನಾಪತಿಯ ಬಾಹುಬಲದ ಸಹಾಯದಿಂದ ವಂಗರಾಜ್ಯಶಕಟವನ್ನು ಸುಸೂತ್ರವಾಗಿ ಸಾಗಿದ್ದಸಿನು. ಇವನು ನಾಮಾಂಕಿತ ರಾಜಕಾರಣಪಟುವು; ಅದ್ವಿತೀಯ ವಿಕ್ರಮಶಾಲಿಯು. ಕರ್ತವ್ಯರತನೂ ಸಮಯನಿಷ್ಠನೂ ನಿರಲಸ್ವಭಾವದವನೂ ಆದ ಸಲಿಮನಶಹ ಸುಲ್ತಾನನ ವರ್ಚಸ್ಸವು ಉತ್ತರಭಾರತದಲ್ಲಿ ಒಳಿತಾಗಿ ಪ್ರಖ್ಯಾತಿ ಹೊಂದಿತ್ತು.

ಸಲಿಮನಶಹನು ಒಡ್ಡೋಲಗದಲ್ಲಿ ತನ್ನ ರತ್ನಖಚಿತ ಸಿಂಹಾಸನದ ಮೇಲೆ ಮಂಡಿಸಿದ್ದನು. ಮಂತ್ರಿ, ಸಾಮಂತಾದಿಗಳೂ ಸರದಾರ ಸೇನಾಪತಿಗಳೂ ತಮ್ಮ ತಮ್ಮ ಆಸನಗಳಲ್ಲಿ ಕುಳಿತಿದ್ದರು. ಓಲಗದಕಾರ್ಯವು ಅದೇ ಪ್ರಾರಂಭವಾಗಿತ್ತು. ಅಷ್ಟರಲ್ಲಿ ಸೌಂದರ್ಯಸಂಪನ್ನನಾದ ತೇಜಸ್ವಿ ತರುಣನೊಬ್ಬನು ಓಲಗವನ್ನು ಪ್ರವೇಶಿಸಿದನು. ಅವನು ಬೆಲೆಯುಳ್ಳ ವಸ್ತ್ರಗಳನ್ನು ಧರಿಸಿದ್ದನು. ಟೊಂಕದಲ್ಲಿ ಅಲೆದಾಡುತ್ತಿದ್ದ ದೊಡ್ಡ ಖಡ್ಗವು ಅವನೊಳ್ಳೇ ಶಕ್ತಿವಂತನೆಂಬದಕ್ಕೆ ಸಾಕ್ಷೀಭೂತವಾಗಿತ್ತು. ಗಂಭೀರವಾದ ಮುಖವು ಅವನ ಧೈರ್ಯಸಾಹಸಗಳನ್ನು ವ್ಯಕ್ತಮಾಡುತ್ತಿತ್ತು. ಈ ಆಗಂತುಕ ತರುಣನ ಕಡೆಗೆ ಎಲ್ಲರ ಲಕ್ಷ್ಯವು ಹೋಗಿತ್ತು. ಸುಲತಾನನಾದರೂ ಅವನನ್ನು ವಿಸ್ಮಯದೃಷ್ಟಿಯಿಂದ ನೋಡಲಾರಂಭಿಸಿದ್ದನು. ಸುಲತಾನನ ದೃಷ್ಟಿಯು ತನ್ನ ಕಡೆಗೆ ಹೊರಳಿದ ಕೂಡಲೆ ಆ ತರುಣನು ಅವನಿಗೆ ನೆಲಮುಟ್ಟಿ ನಮಸ್ಕಾರ ಮಾಡಿದನು. ಅನಂತರದಲ್ಲಿ ಅವನು ಸುಲತಾನನನ್ನು ಕುರಿತು "ಸುಲತಾನರೆ, ನನ್ನದೊಂದು ಪ್ರಾರ್ಥನೆಯುಂಟು."

ಆ ತರುಣನು ಸುಲತಾನನ ಮನಸ್ಸನ್ನು ಚನ್ನಾಗಿ ಆಕರ್ಷಿಸಿದ್ದನು. ಯಾವದೊಂದು ವಿಷಯದಲ್ಲಿ ನ್ಯಾಯಬೇಡುವದಕ್ಕಾಗಿ ಅವನು ಬಂದಿರುವನೆಂದು ಸುಲತಾನನ ಭಾವನೆಯಾತು. ಆಗ ಅವನು ಆ ತರುಣನನ್ನು ಕುರಿತು—"ನೀನು ಯಾವದೊಂದು ಮಾತಿನ ನ್ಯಾಯ ಪಡೆಯುವದಕ್ಕಾಗಿ ಬಂದಿರುವೆಯೇನು?"

"ಇಲ್ಲ"

"ಯಾವದೊಂದು ಜಹಾಗೀರನ್ನು ಪಡೆಯಬೇಕೆಂದು ನಿನ್ನ ಇಚ್ಛೆಯಿರುವದೆ?"

"ಇಲ್ಲ."

"ಹಾಗಾದರೆ ನೀನು ಬಂದ ಉದ್ದೇಶವೇನು?"

"ನಿಮ್ಮ ಓಲಗದಲ್ಲಿ ಒಂದು ಕೆಲಸ ದೊರಕಿಸುವ ಇಚ್ಛೆಯಿಂದ ಬಂದಿರುವೆನು."

"ನಿನಗೆ ಯಾವ ಅಧಿಕಾರವು ಬೇಕು? ಬೊಕ್ಕಸದ ಮೇಲೆ ನಿನ್ನನ್ನು

ನಿಯಮಿಸಲೇನು?"

"ಆ ಕೆಲಸವು ನನಗೆ ಬೇಡ."

"ಮಂತ್ರಿಪದವು ನಿನಗೆ ಬೇಕಾಗಿರುವದೇನ ?"

"ಹುಜೂರ, ಮಂತ್ರಿಪದವನ್ನು ಬೇಡುವಂತಹ ಹುಚ್ಚನು ನಾನಲ್ಲ."

"ನಿನಗೆ ಯಾವ ಅಧಿಕಾರವು ಬೇಕು?"

"ನನ್ನನ್ನು ಸೈನ್ಯದಲ್ಲಿ ಸೇರಿಸಿರಿ."

ಆ ತರುಣನ ಬೇಡಿಕೆಯನ್ನು ಕೇಳಿ ಓಲಗದ ಜನರು ವಿಸ್ಮಿತರಾದರು. ಸಂತುಷ್ಟನಾಗಿದ್ದ ಸುಲತಾನನು ಯಾವದೊಂದು ಜಹಾಗೀರನ್ನಾಗಲಿ ಮಂತ್ರಿಪದವನ್ನಾಗಲಿ ಕೊಡಲಿಕ್ಕೆ ಸಿದ್ಧನಿದ್ದರೂ ಆ ತರುಣನು ಅದರ ಲಾಭ ತೆಗೆದುಕೊಳ್ಳದ್ದನ್ನು ನೋಡಿ, ಅವನು ನಿಜವಾಗಿ ಅದೂರದರ್ಶಿಯೂ ಅವಿಚಾರಿಯೂ ಇರುವನೆಂದು ಓಲಗದವರು ಅಭಿಪ್ರಾಯಪಟ್ಟರು. ಯಃಕಶ್ಚಿತ್ ಸೈನಿಕನಾಗಲಿಕ್ಕೆ ಆ ತರುಣನು ಬಯಸಿದ್ದನ್ನು ನೋಡಿ, ಸುಲತಾನನಿಗಾದರೂ ಬಹಳೇ ಸೋಜಿಗವಾಯಿತು. ಆಗ ಅವನು ಆ ತರುಣನನ್ನು ಉದ್ದೇಶಿಸಿ:—"ನಿನಗೆ ಖಡ್ಗವನ್ನು ಹಿಡಿಯಲಿಕ್ಕೆ ಬರುತ್ತದೇನು."

"ಬರುತ್ತದೆ."

"ನಿನ್ನ ವಿದ್ಯೆಯ ಪರೀಕ್ಷೆ ಕೊಡಲಿಕ್ಕೆ ಸಿದ್ಧನಿರುವಿಯಾ?"

"ಓಹೋ! ಅವಶ್ಯವಾಗಿ ಪರೀಕ್ಷಿಸಬಹುದು. ಶಸ್ತ್ರವಿದ್ಯೆಯಲ್ಲಿ ನನ್ನ ಪರೀಕ್ಷೆ ತೆಗೆದುಕೊಳ್ಳುವಂತಹ ಜನರು ಇಡಿಯ ವಂಗದೇಶದಲ್ಲಿ ದೊರೆಯಲಾರರು."

"ನೀನು ಅಂಥ ಶಸ್ತ್ರಕುಶಲನೇನು?" ಎಂದು ನಗುತ್ತ ಸುಲತಾನನು ಕೇಳಿದ ಕೂಡಲೆ, ಆ ತರುಣನು ತೀವ್ರಸ್ವರದಿಂದ:—"ಹುಜೂರ, ನನ್ನ ಶಸ್ತ್ರವಿದ್ಯಾ ಪ್ರವೀಣತೆಯನ್ನು ಬಾಯಿಂದ ಬಣ್ಣಿಸಿದರೆ ಆತ್ಮ ಪ್ರಶಂಸೆಯ ದೋಷವು ಬರುವದು. ನನ್ನ ಪರೀಕ್ಷೆಯನ್ನು ತೆಗೆದು ಕೊಳ್ಳಲಪೇಕ್ಷಿಸುತ್ತಿದ್ದರೆ ನನ್ನ ಸಿದ್ಧತೆಯಿರುವದು."

"ನಿನ್ನ ಹೆಸರೇನು?"

"ಕಾಲಾಚಾಂದರಾಯ."

"ನಿನ್ನ ತಂದೆಯ ಹೆಸರು?"

"ನಯನಚಾಂದರಾಯ."

"ಏನು, ನಯನಚಾಂದರಾಯನೆ?" ಎಂದು ವಿಸ್ಮಯವಾಣಿಯಿಂದ ಸುಲತಾನನು ನುಡಿದು:—"ಯಾವ ನಯನಚಾಂದರಾಯನು?"

"ನಿಮ್ಮ ಓಲಗದಲ್ಲಿ ಸರದಾರನಾಗಿದ್ದ ನಯನಚಾಂದರಾಯನು." ಎಂದು ಕಾಲಾಚಾಂದರಾಯನು ನುಡಿದು, ಗಂಭೀರತೆಯಿಂದ:—"ಕುಲೀ ಬೇಗನನ್ನು ಹೊಡೆದಟ್ಟಿ, ಗೌಡರಾಜಸಿಂಹಾಸನವನ್ನು ಸಮ್ರಾಟ ಶೀರಶಹ ರಿಗೆ ದೊರಕಿಸಿಕೊಟ್ಟ ನಯನಚಾಂದರೇ ನನ್ನ ತೀರ್ಥರೂಪರು."

"ಕಾಲಾಚಾಂದ, ನಯನಚಾಂದನ ಹೆಸರು ಬಹಳೇ ವಿಖ್ಯಾತವಿರು ವದು. ಅವನು ಅಪ್ರತಿಮ ಸ್ವಾಮಿನಿಷ್ಠನಿದ್ದನು. ಅವನ ಶೌರ್ಯ- ಸಾಹಸಗಳು ಅವರ್ಣನೀಯವಿದ್ದವು. ವಂಗರಾಜ್ಯಕರ್ತರು ನಿನ್ನ ತಂದೆ ಯನ್ನು ಚನ್ನಾಗಿ ಗೌರವಿಸಿರುವರು. ನೀನು ನಿನ್ನ ವಂಶದ ಮಾನ- ಮರ್ಯಾದೆಗಳನ್ನು ವೃದ್ಧಿಗೊಳಿಸುವೆಯೆಂದು ನಾನು ನಂಬಿರುವೆನು. ನಿನ್ನ ಉಚ್ಚ ಕುಲದ ಕಡೆಗೆ ದೃಷ್ಟಿಯನ್ನಿಟ್ಟು ನಾನು ನಿನ್ನನ್ನು ನಿನ್ನ ತಂದೆಯ ಸ್ಥಳದಲ್ಲಿ ನಿಯಮಿಸುವೆನು. ರಾಜನಿಷ್ಠ ಪಿತನ ಕೀರ್ತಿಗೆ ಕಲಂಕ ಹಚ್ಚದಂತೆ ನಡೆದು, ಪೂರ್ವಲೌಕಿಕದ ಹೆಚ್ಚಳ ಮಾಡುವೆಯೆಂದು ನನ್ನ ಆತ್ಮವಿಶ್ವಾಸವಿರುವದು."

ಕಾಲಾಚಾಂದನು ಸುಲತಾನನ ಮಾತುಗಳನ್ನು ಕೇಳಿ ಆನಂದಭರಿತ ನಾದನು. ಅವನು ತನ್ನ ಖಡ್ಗವನ್ನು ಒರೆಯಿಂದ ಹಿರಿದು ಸುಲತಾನ ನನ್ನು ಮೂರು ಸಾರೆ ನಮಸ್ಕರಿಸಿ, ಪರಂಪರ ಸಾಂಪ್ರದಾಯದಂತೆ ಆ ಖಡ್ಗವನ್ನು ಸಿಂಹಾಸನದ ಮುಂದೆ ಇಟ್ಟನು. ಆ ಮೇಲೆ ಸುಲತಾನನ ಆದೇಶಾನುಸಾರವಾಗಿ ಮುಖ್ಯ ಮಂತ್ರಿಯಾದ ಖಾನಜಹಾನ ಲೋದಿಯು ಆ ಖಡ್ಗವನ್ನು ತನ್ನ ಹಸ್ತದಿಂದ ಕಾಲಾಚಾಂದನಿಗೆ ಸಮರ್ಪಿಸಿದನು. ಕಾಲಾಚಾಂದನು ಅದನ್ನು ಕೈಯಲ್ಲಿ ತೆಗೆದುಕೊಂಡು, ಓಲಗದ ಪದ್ಧತಿ

ಯಂತೆ ಸುಲತಾನನಿಗೆ ಮತ್ತೊಮ್ಮೆ ನಮಸ್ಕಾರ ಮಾಡಿದನು.

"ಹುಜೂರ!" ಕಾಲಾಚಾಂದನು ಆನಂದಯುಕ್ತ ಸ್ವರದಿಂದ— "ತಾವು ನನ್ನ ಮೇಲೆ ದಯೆದೋರಿದ್ದಕ್ಕಾಗಿ ಅತ್ಯಂತ ಕೃತಜ್ಞನಾಗಿರುವೆನು."

ನಯನಚಾಂದನು ನಗರ ರಕ್ಷಕನಾಗಿದ್ದನು. ತಂದೆಯ ಕೆಲಸವೇ ತನಗೆ ದೊರೆತದ್ದಕ್ಕಾಗಿ ಕಾಲಾಚಾಂದನು ಸಂಭ್ರಮಗೊಂಡನು. ನಗರ ಪಾಲನ ಅಧಿಕಾರವು ಸಾಮಾನ್ಯವಾದದ್ದಲ್ಲ. ರಾಜಧಾನಿಯನ್ನು ರಕ್ಷಿಸುವ ಕಾರ್ಯವು ನಗರಪಾಲನನ್ನೇ ಅವಲಂಬಿಸಿರುತ್ತಿತ್ತು. ನಗರದೊಳಗಿನ ಎಲ್ಲ ಸೈನಿಕರು ಕಾವಲುಗಾರರು ಗುಪ್ತಚರರು ರಾಜಮಂದಿರದ ಸೇವಕ ವರ್ಗದ ಜನರು ಮೊದಲಾದವರು ನಗರಪಾಲನಿಗೆ ಅಂಕಿತರಾಗಿರುತ್ತಿದ್ದರು. ಇಷ್ಟಲ್ಲದೆ ರಾಜಧಾನಿಯೊಳಗಿನ ಅಪರಾಧಿಗಳನ್ನು ಶೋಧಿಸುವದೂ, ಅವರ ನ್ಯಾಯ ವಿಚಾರಣೆ ಮಾಡುವದೂ, ಅಪರಾಧಿಗಳಿಗೆ ಶಿಕ್ಷೆ ವಿಧಿಸುವದೂ ಮುಂತಾದ ಕಾರ್ಯಗಳನ್ನು ಅವನು ಮಾಡಬೇಕಾಗುತ್ತಿತ್ತು. ಇಂತಹ ದೊಡ್ಡ ಅಧಿಕಾರವು ದೊರೆತ ಮೇಲೆ ಕಾಲಾಚಾಂದನಿಗೆ ಆನಂದವಾದದ್ದರಲ್ಲಿ ಆಶ್ಚರ್ಯವೇನು?

ಸುಲತಾನನ ಆಜ್ಞೆಯ ಮೇರೆಗೆ ಮುಖ್ಯ ಮಂತ್ರಿಯು ಕಾಲಾಚಾಂದನಿಗೆ ನಗರಪಾಲನ ಅಧಿಕಾರದಾನ ಮಾಡಿದ ಬಗ್ಗೆ ಆಜ್ಞಾಪತ್ರವನ್ನು ಓಲಗದ ಕರಣಿಕನಿಂದ ಬರೆಯಿಸಿ, ಅದಕ್ಕೆ ತನ್ನ ರುಜು ಮಾಡಿ ರಾಜಮುದ್ರೆ ಹಾಕಿದನು. ಸುಲತಾನನು ಆ ಆಜ್ಞಾಪತ್ರವನ್ನೂ ನಗರಪಾಲಾಧಿಕಾರದ ವಸ್ತ್ರಗಳನ್ನೂ ಸ್ವಹಸ್ತದಿಂದ ಕಾಲಾಚಾಂದನಿಗೆ ಕೊಟ್ಟನು. ಸಾಮಾನ್ಯ ತರದ ಸೈನಿಕನ ಕೆಲಸ ಬೇಡುತ್ತಿದ್ದ ಕಾಲಾಚಾಂದನಿಗೆ ಸುಲತಾನನು ದೊಡ್ಡ ಅಧಿಕಾರ ಕೊಟ್ಟದ್ದಕ್ಕಾಗಿ ಸಭಿಕರು ನೋಜಿಗಗೊಂಡರು. ಕಾಲಾಚಾಂದನಿಗೆ ವಸ್ತ್ರಗಳನ್ನರ್ಪಿಸಿದ ಬಳಿಕ ಅಂದಿನ ಓಲಗವು ವಿಸರ್ಜಿಸಲ್ಪಟ್ಟಿತು.

ನಗರಪಾಲನು ವಾಸಮಾಡುವದಕ್ಕಾಗಿ ಒಂದು ಸ್ವತಂತ್ರ ಮಂದಿರವಿತ್ತು. ಅಲ್ಲಿಯೇ ಅವನು ತನ್ನ ಓಲಗದ ಕಾರ್ಯಗಳನ್ನು ಮಾಡ

ಬೇಕಾಗುತ್ತಿತ್ತು. ಈ ನಗರಪಾಲ ಮಂದಿರವು ರಾಜ ಮಂದಿರದಿಂದ ತೀರ ಸಮೀಪದಲ್ಲಿತ್ತು. ಅಧಿಕಾರಾರೂಢನಾದ ದಿನದಿಂದ ಕಾಲಾಚಾಂದನು ಆ ನಗರಪಾಲ ಮಂದಿರದಲ್ಲಿಯೇ ವಾಸಮಾಡತೊಡಗಿದ್ದನು.

ಕಾಲಾಚಾಂದನು ತನ್ನ ದೇಹವನ್ನು ಯವನ ಸೇವೆಯಲ್ಲಿ ತೊಡಗಿಸಿದ್ದರೂ ಮನಸ್ಸನ್ನು ಮಾತ್ರ ತನ್ನ ಅಧೀನದಲ್ಲಿಟ್ಟುಕೊಂಡಿದ್ದನು. ಅವನು ಅತ್ಯಂತ ನಿಸ್ಪೃಹತೆಯಿಂದ ತನ್ನ ಕರ್ತವ್ಯವನ್ನು ನೆರವೇರಿಸುತ್ತಿದ್ದನು. ನಿರ್ದಾಕ್ಷಿಣ್ಯದವನಾದ ಕಾಲಾಚಾಂದನು ಪ್ರಸಂಗದಲ್ಲಿ ಪ್ರತ್ಯಕ್ಷ ಸುಲತಾನನಿಗೆ ಸಹ ಸೊಪ್ಪು ಹಾಕುತ್ತಿದ್ದಿಲ್ಲ. ರಾಜನಿರಲಿ, ರಾಜ್ಯಾಧಿಕಾರಿಗಳಿರಲಿ, ರಾಜಪರಿಚಾರಕರಿರಲಿ, ರಾಜಸಂಬಂಧಿಕರಿರಲಿ; ಬೇಕಾದವರಾಗಿದ್ದರೂ ನ್ಯಾಯ ವಿಚಾರಣೆಯ ಪ್ರಸಂಗದಲ್ಲಿ ತನ್ನ ನ್ಯಾಯಬುದ್ಧಿಗೆ ತೋಚಿದ್ದನ್ನು ಯಾವ ಭಯವಿಲ್ಲದೆ ನಿರ್ಣಯಿಸಿ ಬಿಡತ್ತಿದ್ದನು. ಅವನಲ್ಲಿ ದೃಷ್ಟಿಭೇದವೂ ಪಕ್ಷಪಾತ ಬುದ್ಧಿಯೂ ಇರಲಿಲ್ಲ. ಆಗ ಹಿಂದು ಅಪರಾಧಿಗಳ ನ್ಯಾಯ ವಿಚಾರಣೆಯ ಪದ್ಧತಿಯು ಬೇರೆ; ಯವನ ಅಪರಾಧಿಗಳ ನ್ಯಾಯ ವಿಚಾರಣೆಯ ಪದ್ಧತಿಯು ಬೇರೆ. ವಸ್ತುಸ್ಥಿತಿಯು ಹೀಗಿದ್ದರೂ ಕಾಲಾಚಾಂದನು ಯಾವ ವಿಧದ ಮುರವತ್ತಿಗೂ ಒಳಗಾಗದೆ ಸತ್ಪಕ್ಷಪಾತ ಬುದ್ಧಿಯಿಂದ ಕಾರ್ಯ ಮಾಡುತ್ತಿದ್ದನು. ಇವನು ಸುಲತಾನನ ಪ್ರೇಮ ಸಂಪಾದನೆಗಾಗಿ ತನ್ನ ಮನಸ್ಸಿನ ವಿರುದ್ಧವಾಗಿ ಯಾವ ಕಾರ್ಯಗಳನ್ನೂ ಮಾಡುತ್ತಿರಲಿಲ್ಲ. ಇವನಿಗೆ ಬಣ ಆಡಂಬರವು ಸೇರುತ್ತಿದ್ದಿಲ್ಲ. ನ್ಯಾಯಬುದ್ಧಿಯಿಂದ ಕರ್ತವ್ಯ ಮಾಡುತ್ತಿರುವಾಗ ಇವನು ಜನರ ಸ್ತುತಿ-ನಿಂದೆಗಳ ಕಡೆಗೆ ಲಕ್ಷ್ಯಗೊಡುತ್ತಿದ್ದಿಲ್ಲ.

ಯಾವದೊಂದು ಅನಿವಾರ್ಯ ಕಾರಣದ ಮೂಲಕ ಕಾಲಾಚಾಂ-ದನು ಯವನ ಸೇವೆಯನ್ನು ಸ್ವೀಕರಿಸಿದ್ದನು. ಅವನು ಮನಸ್ಸಿನಿಂದಲೂ ಶರೀರದಿಂದಲೂ ಹಿಂದುವಾಗಿದ್ದನು; ಧರ್ಮನಿಷ್ಠ ಬ್ರಾಹ್ಮಣನಾಗಿದ್ದನು. ಅವನು ಸೂರ್ಯೋದಯವಾದೊಡನೆಯೆ ಓಲಗದ ಕಾರ್ಯವನ್ನು ಪ್ರಾ-ರಂಭ ಮಾಡಬೇಕಾಗುತ್ತಿತ್ತು. ಅರುಣೋದಯವಾದ ಕೂಡಲೆ ನದಿಯಲ್ಲಿ ಸ್ನಾನ ಮಾಡಿ ತನ್ನ ಪ್ರಾತರಾಹ್ನಿಕಗಳನ್ನು ಮುಗಿಸಿಕೊಂಡು ಓಲ

ಗಕ್ಕೆ ತೆರಳುತ್ತಿದ್ದನು. ಒಲಗದಿಂದ ಬಂದ ಕೂಡಲೆ ಅವನು ಮತ್ತೆ ಸ್ನಾನ ಮಾಡಿ ಪುರಾಣಗ್ರಂಥಗಳನ್ನೋದುತ್ತಿದ್ದನು. ಆಗಿನ ಕಾಲದಲ್ಲಿ ಯುವನರು ಅಸ್ಪೃಶ್ಯರೆಂದು ತಿಳಿಯಲ್ಪಡುತ್ತಿದ್ದರು. ಶುದ್ಧಾಚರಣೆಯೂ ಧಾರ್ಮಿಕನೂ ಆದ ಕಾಲಾಚಾಂದನು ಒಲಗದಿಂದ ಬಂದ ಕೂಡಲೆ ಸ್ನಾನ ಮಾಡುತ್ತಿದ್ದನು. ಅವನು ಯುವನ ಜನಪದದಲ್ಲಿ ವಾಸವಾಗಿದ್ದರೂ, ಯುವನರ ಸಹವಾಸದಲ್ಲಿ ವೇಳೆಗಳೆಯುತ್ತಿದ್ದರೂ ಅವನ ಆರ್ಯ ಸಂಸ್ಕೃತಿಯು ಅಚ್ಚಳಿಯದೆ ಉಳಿದಿತ್ತು.

ಒಂದು ದಿನ ಕಾಲಾಚಾಂದನು ಭಗವದ್ಗೀತೆಯನ್ನೋದುತ್ತ ಮನೆಯಲ್ಲಿ ಕುಳಿತುಕೊಂಡಿದ್ದನು. ರಾಜ್ಯದಾಶೆಗಾಗಿ ಸ್ವಜನರನ್ನು ಕೊಲ್ಲಲಾರೆನೆಂದು ಕುಳಿತ ಅರ್ಜುನನಿಗೆ ಭಗವನ್ ಶ್ರೀ ಕೃಷ್ಣನು ಜ್ಞಾನಾಮೃತ ಪಾನಮಾಡಿಸಿ ಕರ್ತವ್ಯರತನನ್ನು ಮಾಡಿದ ಅತುಲನೀಯವಾದ ಗೀತಾಮೃತ ಪಾನಮಾಡುತ್ತ ಅವನು ತಲ್ಲೀನತೆಯನ್ನು ಹೊಂದಿದ್ದನು. ಮನುಷ್ಯನು ಮೋಹವಶನಾಗದೆ ನಿಷ್ಕಾಮ ಬುದ್ಧಿಯಿಂದ ಸ್ವಕರ್ತವ್ಯವನ್ನು ನೆರವೇರಿಸುವದರಿಂದಲೇ ಇಹ-ಪರಗಳಲ್ಲಿ ಸೌಖ್ಯವು ಲಭಿಸುವದೆಂಬ ಗೀತೆಯ ಸಿದ್ಧಾಂತವು ಅವನ ಮನಸ್ಸಿನಲ್ಲಿ ಚನ್ನಾಗಿ ಬಿಂಬಿಸಿತು. ಅವನು ಒಂದು ಪ್ರಹರದ ವರೆಗೆ ಭಗವದ್ಗೀತೆಯನ್ನೋದಿದನು. ಅತ್ಯಂತ ಮಹತ್ವದ್ದಾದ ಆ ಗ್ರಂಥದ ನಿತ್ಯ ಪಾರಾಯಣ ಮಾಡಬೇಕೆಂದು ಅವನು ನಿರ್ಧರಿಸಿಕೊಂಡನು. ಅನಂತರದಲ್ಲಿ ಅವನು ಊಟ-ಉಡಿಗೆಗಳನ್ನು ತೀರಿಸಿ ವಿಶ್ರಾಂತಿಗಾಗಿ ತನ್ನ ಕೋಣೆಯಲ್ಲಿ ಹೋದನು. ಅಷ್ಟರಲ್ಲಿ ಸುಮಾರು ಹದಿನಾರು ಹದಿನೆಂಟು ವರ್ಷದ ಒಬ್ಬ ಬಾಲಕನು ಅವನ ಒಳಗೆ ಬಂದು ವಿನಯದಿಂದ ನಮಸ್ಕಾರ ಮಾಡಿದನು. ಇವನ ಮುಖಚರ್ಯೆಯನ್ನು ನೋಡಿದೊಡನೆಯೆ ಕಾಲಾಚಾಂದನ ಮನಸ್ಸು ಒಂದು ತರಹದ್ದಾಯಿತು. ತಾನು ಅವನನ್ನು ಎಲ್ಲಿಯೋ ನೋಡಿದಂತೆ ಕಾಲಾಚಾಂದನ ಗ್ರಹಿಕೆಯಾಯಿತು. ಆಗ ಅವನು ಆ ಬಾಲಕನನ್ನು ಕುರಿತು: —

"ತಮ್ಮಾ, ನೀನು ಎಲ್ಲಿಂದ ಬಂದೆ?"

"ಮಹಾರಾಜರೆ, ನಾನು ವೀರಜಾವನದಿಂದ ಬಂದೆನು."

ವೀರಜಾವನದ ಹೆಸರು ಕೇಳಿದೊಡನೆಯೆ ಕಾಲಾಚಾಂದನ ಹೃದಯವು ನಡುಗಿತು. ಹಿಂದೆ ನಡೆದ ಎಲ್ಲ ಒಳಿತು-ಹೀನ ಕೃತಿಗಳು ಅವನ ದೃಷ್ಟಿಪಥದಲ್ಲಿ ಮೂರ್ತಿಮಂತಾಗಿ ನಿಂತುಕೊಂಡವು. ಗೌಡಪಟ್ಟಣಕ್ಕೆ ಬಂದ ಮೇಲೆ ಅವನು ವೀರಜಾವನದ ಹೆಸರನ್ನು ಕನಸಿನಲ್ಲಿ ಸಹ ನೆನೆಯಿಸಿದ್ದಿಲ್ಲ. ಇಂದಿನ ಆಕಸ್ಮಿಕ ಪ್ರಸಂಗದಿಂದ ಹಿಂದೆ ನಡೆದ ಎಲ್ಲ ವಿಧದ ಸಂಗತಿಗಳು ತಾವಾಗಿ ಅವನ ಸ್ಮರಣೆಯಲ್ಲಿ ಬರತೊಡಗಿದವು. ಅವನಿಗೆ ಪ್ರೇಮಳ ಹೃದಯದ ತಾಯಿಯು ನೆನಪಾಗಲು ಅವನ ಅಂತಃಕರಣವು ದ್ರವಿಸಿತು. ತಾಯಿಯು ಮುಪ್ಪಿನ ಕಾಲದಲ್ಲಿ, ತನ್ನಿಂದ ಯಾವ ವಿಧದ ಸೇವೆಯೂ ಘಟಿಸದಂತಾಯಿತೆಂದು ಅವನು ಬಹಳವಾಗಿ ಕ್ಲೇಶಗೊಂಡನು. ಪರಕ್ಷಣದಲ್ಲಿ ವ್ರಜಬಾಲೆಯ ನೆನಪಾಗಿ ಅವಳ ಪಾತಕಿಯಾದ ವರ್ತನದ ಬಗ್ಗೆ ಅವನಲ್ಲಿ ತಿರಸ್ಕಾರ ಸಂತಾಪಗಳು ಉತ್ಪನ್ನವಾದವು. ಬಾಲಮಿತ್ರನಾದ ಗದಾಧರನ ನೆನಪಿನಿಂದ ಅವನ ಹೃದಯವು ಅಲ್ಲೋಲ-ಕಲ್ಲೋಲವಾಗತೊಡಗಿತು. ಈರ್ಷೆಯ ಲಹರಿಯಲ್ಲಿ ಸಿಲುಕಿದ ತನ್ನಿಂದ ತನ್ನ ಪ್ರಿಯ ಮಿತ್ರನ ಆಯುಷ್ಯವನ್ನೇ ದುಃಖಮಯ ಮಾಡುವಂತಹ ಭಯಂಕರ ಕೃತಿಯು ಘಟಿಸಿತೆಂದು ಅವನು ಹೆಚ್ಚಾಗಿ ಖಿನ್ನತೆಯನ್ನು ತಳೆದನು. ಎಷ್ಟೋ ವೇಳೆಯ ವರೆಗೆ ಅವನು ನಾನಾ ವಿಧವಾಗಿ ವಿಚಾರಗಳಲ್ಲಿ ತೊಡಗಿ ಮೌನದಿಂದಿದ್ದನು. ಅನಂತರದಲ್ಲಿ ವೀರಜಾವನದಿಂದ ಬಂದ ಬಾಲಕನನ್ನು ಕುರಿತು ಅವನು ಕ್ಲೇಶಯುಕ್ತ ಧ್ವನಿಯಿಂದ: — "ಬಾಲಕಾ, ನೀನು ವೀರಜಾವನದಿಂದ ಬಂದೆಯಾ? ಪುತ್ರವಿಯೋಗದಿಂದ ನನ್ನ ತಾಯಿಯು ಬಹಳೇ ದುಃಖಿತಳಾಗಿರಬಹುದಲ್ಲವೆ?"

"ಹೌದು. ಅವ್ವನವರು ಯಾವಾಗಲೂ ನಿಮ್ಮನ್ನು ನೆನೆಯಿಸುತ್ತಿರುವರು. ಈಗ ಅವರೇ ನನ್ನನ್ನು ನಿಮ್ಮ ಕಡೆಗೆ ಕಳುಹಿಸಿಕೊಟ್ಟರು."

"ಅವ್ವನು ನಿನ್ನನ್ನು ಕಳುಹಿಸಿದಳೆ?" "ಅಹುದು."

"ಆದೇಕೆ?"

"ವೀರಜಾವನಕ್ಕೆ ಬರಬೇಕೆಂದು ಅವರು ನಿರೋಪ ಕಳುಹಿಸಿರುವರು."

"ನಾನು ವೀರಜಾವನಕ್ಕೆ ಬರುವದಿಲ್ಲ. ತಾಯಿಯ ಆಜ್ಞೆಯನ್ನೂ ಮನಸ್ಸನ್ನೂ ಮುರಿಯಬೇಕಾದರೆ ನನಗೆ ಅತಿರೇಖವಾದ ದುಃಖವಾಗುವದು; ಆದರೆ ಏನು ಮಾಡಲಿ? ವೀರಜಾವನದಲ್ಲಿರುವದು ನನಗೆ ಅಸಾಧ್ಯವಾದದ್ದರಿಂದ ಇತ್ತ ಹೊರಟು ಬಂದಿರುವೆನು."

"ನೀವು ಎಂದೂ ಮನೆಗೆ ಬರುವದಿಲ್ಲವೆ?"

"ಇಲ್ಲ; ನಾನು ಅಲ್ಲಿಗೆ ಎಂದೂ ಬರುವದಿಲ್ಲ. ನನ್ನ ಈ ಕಠೋರ ಸ್ವಭಾವವನ್ನು ನೋಡಿ ಜನರು ಬೇಕಾದ ಹಾಗೆ ಹೆಸರಿಡಲಿ; ನಾನು ನನ್ನ ಆಯುಷ್ಯದಲ್ಲಿ ಒಮ್ಮೆ ಸಹ ಜನ್ಮಗ್ರಾಮಕ್ಕೆ ಹೋಗಬಾರದೆಂದು ದೃಢ ಸಂಕಲ್ಪ ಮಾಡಿಕೊಂಡಿರುವೆನು. ಜನನಿಯೂ ಜನ್ಮಭೂಮಿಯೂ ಸ್ವರ್ಗಕ್ಕಿಂತಲೂ ಶ್ರೇಷ್ಠವೆಂಬದೇನೋ ನಿಜವು; ಆದರೆ ನನಗೆ ಮಾತ್ರ ಇವೆರಡು ವಿಷಯಗಳು ತಿರಸ್ಕರಣೀಯವಾಗಿರುವವು. ನಾನು ಮನಸ್ಸಿನಿಂದ ಜನನಿಯನ್ನೂ ಜನ್ಮಭೂಮಿಯಾದ ವೀರಜಾವನವನ್ನೂ ತಿರಸ್ಕರಿಸದಿದ್ದರೂ, ದುರ್ದೈವದಿಂದ ನಾನು ಅವೆರಡೂ ವಿಷಯಗಳಲ್ಲಿ ನಾಸ್ತಿಕ ಭಾವನೆಯನ್ನು ತಳೆಯಬೇಕಾಗಿದೆ. ನೀಚಳಾದ ವ್ರಜಬಾಲೆಯು ನನ್ನ ಮನಸ್ಸಿನ ಮೇಲೆ ಹೀಗೆ ವಿಲಕ್ಷಣವಾದ ಪರಿಣಾಮವನ್ನುಂಟುಮಾಡಿರುವಳು."

"ನೀವು ನಿಶ್ಚಯವಾಗಿಯೂ ವೀರಜಾವನಕ್ಕೆ ಬರುವದಿಲ್ಲವೆ?"

"ಇಲ್ಲ; ನಿಶ್ಚಯವಾಗಿಯೂ ಬರುವದಿಲ್ಲ."

ಕಾಲಾಚಾಂದನ ಮಾತುಗಳಿಂದ ಆ ಬಾಲಕನು ವಿಷಾದಗೊಂಡನು. ಅವನು ಪ್ರತ್ಯುತ್ತರ ಕೊಡದೆ ಎಷ್ಟೋ ವೇಳೆಯ ವರೆಗೆ ಸುಮ್ಮನೆ ಕುಳಿತನು. ಅನಂತರದಲ್ಲಿ ಕಾಲಾಚಾಂದನು ಆ ಹುಡುಗನನ್ನು ಕುರಿತು:— "ನಿನ್ನನ್ನು ನಾನು ಎಲ್ಲಿಯೋ ನೋಡಿದಂತೆ ಭಾಸವಾಗುತ್ತದೆ."

"ನನ್ನನ್ನು ನೀವು ನೋಡಿರುವಿರಾ?" ವಿಸ್ಮಯದಿಂದ ಬಾಲಕನು ಕಾಲಾಚಾಂದನನ್ನು ಕೇಳಿ:—"ಈ ಜಗತ್ತಿನಲ್ಲಿ ನನ್ನಂತೆ ಹೋಲಿಕೆಯುಳ್ಳ ಜನರು ಅನೇಕರಿರುವರು. ಅವರಲ್ಲಿ ಯಾರನ್ನಾದರೂ ನೀವು ಕಂಡಿರಬಹುದು. ನಾನಂತೂ ನಿಮ್ಮನ್ನು ಇಂದೇ ನೋಡಿರುವೆನು."

"ನೀನು ವೀರಜಾವನದವನು ಅಲ್ಲವೇನು?"

"ಅಲ್ಲಃ ವೀರಜಾವನದ ಬಳಿಯಲ್ಲಿರುವ ಒಂದು ಹಳ್ಳಿಯಲ್ಲಿ ನಾನು ಇರುತ್ತಿದ್ದೆನು. ಒಂದು ದಿವಸ ನನಗೆ ಅವ್ವನವರ ಭೆಟ್ಟಿಯಾಯಿತು. ಅವರು ನನ್ನನ್ನು ಅಡಿಗೆಯು ಸಲುವಾಗಿ ತಮ್ಮ ಬಳಿಯಲ್ಲಿರಿಸಿಕೊಂಡರು."

"ನೀನು ನನ್ನ ತಾಯಿಯು ವಿಶ್ವಾಸಕ್ಕೆ ಪಾತ್ರನಾಗಿರುವೆಯೆಂಬಂತೆ ತೋರುವದು."

"ಅವರು ನನ್ನನ್ನು ಹೊಟ್ಟೆಯು ಮಗನಂತೆ ರಕ್ಷಿಸುವರು." ಎಂದು ಆ ಬಾಲಕನು ನುಡಿದು, ಉತ್ಕಂಠೆಯಿಂದ:—"ನೀವು ವೀರಜಾವನಕ್ಕೆ ಹೋಗುವದಿಲ್ಲವೆಂದ ಹಾಗಾಯಿತು. ಅವ್ವನವರನ್ನಾದರೂ ಇಲ್ಲಿಗೆ ಕರೆತಂದರೆ ಒಳಿತಾಗುವದು."

"ಇಲ್ಲಿಗೆ ಕರೆತರಬೇಕೆ? ಅಶಕ್ಯವು."

"ಅದೇಕೆ?"

"ಮುಸಲಮಾನರ ರಾಜಧಾನಿಯಾದ ಇಲ್ಲಿ ಧರ್ಮವಂತರಾದ ಹಿಂದುಗಳು ವಾಸಮಾಡಿಕೊಂಡಿರುವದು ಕಠಿಣವಿರುವದು."

"ಇಲ್ಲಿ ಹಿಂದುಗಳು ಇರುವದಿಲ್ಲವೇನು?"

"ಇದ್ದರೂ ಸುಖರೂಪವಾಗಿಲ್ಲ. ಅನೇಕ ವಿಧದ ತೊಂದರೆಗಳನ್ನೂ ಅಪಮಾನಗಳನ್ನೂ ಸಹಿಸುವದಕ್ಕೆ ಸಿದ್ಧರಾದವರೇ ಇಲ್ಲಿ ಇರಬೇಕು. ಸಹನಶೀಲತೆಯಿಲ್ಲದ ಜನರು ಇಲ್ಲಿ ವಾಸಮಾಡುವದು ಸಾಧ್ಯವಿಲ್ಲ."

"ನಗರಪಾಲಕರಾದ ನಿಮಗೆ ಸಹ ಈ ಬಗೆಯು ಭೀತಿಯಿರುವದೆ?"

"ಇರದೇನು ಮಾಡೀತು? ಈ ನೇವಾವೃತ್ತಿಯು ತಾಮ್ರಪಟದಲ್ಲಿ ಬರೆದುಕೊಟ್ಟದ್ದೇ? ಈಗಿದ್ದ ಅಧಿಕಾರವು ಇನ್ನೊಂದು ಗಳಿಗೆಗೆ ಇರುವದೋ-ಇಲ್ಲವೋ ಎಂಬದನ್ನು ಹೇಳಲಿಕ್ಕೆ ಯಾರಿಗೆ ಬರುವಂತಿರುವದು?"

"ನೀವು ವೀರಜಾವನಕ್ಕೆ ಹೋಗುವಂತಿಲ್ಲ; ಅವ್ವನವರು ಇಲ್ಲಿಗೆ ಬರುವಂತಿಲ್ಲ. ಹೀಗಾದರೆ ಮುಪ್ಪಿನಕಾಲಕ್ಕೆ ನಿಮ್ಮಿಂದ ಅವರಿಗೆ ಪ್ರಯೋಜನವೇನಾದಂತಾಯಿತು? ಪುತ್ರವಿಯೋಗದಿಂದ ಅವ್ವನವರು ಬಹಳೇ ದುಃಖಿತರಾಗಿರುವರು."

"ಅದಕ್ಕೆ ನನ್ನ ಉಪಾಯವಿಲ್ಲ."

"ನೀವು ನೀರಜಾವನಕ್ಕೆ ಬಾರದಿದ್ದರೆ ನಾನು ಇಲ್ಲಿಯೇ ಇರಬೇಕಾಗುವದು."

"ಎಲ್ಲಿ?"

"ನಿಮ್ಮ ಸಾನ್ನಿಧ್ಯದಲ್ಲಿ!"

"ಅದೇಕೆ?"

"ಅಪ್ಪನವರು ಇದರಂತೆ ಆಜ್ಞಾ ಮಾಡಿರುವರು."

"ನೀನು ಇಲ್ಲಿದ್ದು ಏನು ಮಾಡುವೆ? ಅಪ್ಪನವರ ಬಳಿಯಲ್ಲಿದ್ದು ಅವರ ಸೇವಾ-ಶುಶ್ರೂಷೆ ಮಾಡು."

"ಅವರ ಸೇವಾ-ಶುಶ್ರೂಷೆ ಮಾಡಲಿಕ್ಕೆ ಜನರು ಕಡಿಮೆಯಾಗಿಲ್ಲ. ನಾನು ಇಲ್ಲಿಯೇ ಇದ್ದು ನಿಮ್ಮ ಸೇವೆ ಮಾಡುವೆನು."

"ಬಾಲಕಾ, ನೀನು ಚಿಕ್ಕ ವಯಸ್ಸಿನವನಿರುವೆ. ಇಂತಹ ಸ್ಥಿತಿಯಲ್ಲಿ ಮನೆ-ಮಾರುಗಳನ್ನೂ ತಾಯಿ-ತಂದೆಗಳನ್ನೂ ಬಿಟ್ಟು ನನ್ನ ಬಳಿಯಲ್ಲಿರುವದು ನಿನಗೆ ಸಾಧ್ಯವಾಗುವದೆ?"

"ಮಹಾರಾಜರೆ, ಹೊಟ್ಟೆಯ ಸಲುವಾಗಿ ಹೊರಬಿದ್ದ ಮೇಲೆ ಮನೆ-ಮಾರುಗಳೂ ತಾಯಿ-ತಂದೆಗಳೂ ಹೇಗೆ ದೊರೆಯಬೇಕು? ಎಲ್ಲಿಯಾದರೂ ಹೊಟ್ಟೆ ತುಂಬಿದರೆ ಸಾಕು. ಯಾರು ಅನ್ನ-ವಸ್ತ್ರಗಳನ್ನು ಕೊಡುವರೋ ಅವರೇ ತಾಯಿ-ತಂದೆಗಳು. ಯಾರು ಸೇವಾವೃತ್ತಿಗೆ ಇಟ್ಟುಕೊಳ್ಳುವರೋ ಅವರ ಮನೆಯೇ ನಮ್ಮ ಮನೆಯು. ಹೀಗೆ ಸ್ವಕೀಯ ಭಾವನೆಯು ತಳೆದು ನಡೆಯುವದೇ ನಿಜವಾದ ಸೇವಕರ ಲಕ್ಷಣವು."

"ನೀನು ಯಾವ ಧರ್ಮದವನು?"

"ಬ್ರಾಹ್ಮಣನು."

"ಒಳಿತಾಯಿತು." ಎಂದು ಕಾಲಾಜಾಂದನು ಸಂತೋಷದಿಂದ ನುಡಿದನು:—"ನಿನಗೆ ಚನ್ನಾಗಿ ಅಡಿಗೆ ಮಾಡಲಿಕ್ಕೆ ಬರುವದೆ?"

"ನಾನು ಚನ್ನಾಗಿ ಅಡಿಗೆ ಮಾಡಬಲ್ಲೆನು."

"ದೇವರು ಕೂಡಿಸಿಕೊಟ್ಟನು. ನಾನಾದರೂ ಒಬ್ಬ ಅಡಿಗೆಯವನನ್ನು ಶೋಧಿಸುತ್ತಿದ್ದೆನು. ಇಲ್ಲಿ ಅಂತಹ ಜನರು ದೊರೆಯದ್ದರಿಂದ ಬಹಳೇ ತೊಂದರೆಗೊಳಗಾಗಿದ್ದೆನು. ನೀನು ನಿರಾಯಾಸವಾಗಿ ದೊರೆತದ್ದರಿಂದ ನನಗೆ ಬಹಳೇ ಆನಂದವಾಗಿದೆ. ಬಾಲಕಾ, ನಿನ್ನ ಹೆಸರೇನು?''

"ಮಹಾರಾಜರೆ' ನನ್ನ ಹೆಸರು ಬನಬಿಹಾರಿಯೆಂದಿರುವದು. ಜನರು ಬೂನಾ ಎಂದು ನನ್ನನ್ನು ಸಂಬೋಧಿಸುತ್ತಾರೆ.''

"ಬೂನಾ,''

"ಯಾಕೆ ಮಹಾರಾಜರೆ?''

'ನೀನು ನನ್ನ ಮನಸ್ಸನ್ನು ಚನ್ನಾಗಿ ಆಕರ್ಷಿಸಿರುವೆ. ನೀನು ನನ್ನ ಆಪ್ತಕೋಟಿಯವನೆಂಬಂತೆ ನನ್ನಲ್ಲಿ ಭಾವನೆಯು ಉತ್ಪನ್ನವಾಗಿರುವದು.'

"ಭಾವನಾಪ್ರಧಾನರಾದ ಸದಯ ಹೃದಯಿಗಳ ಸ್ಥಿತಿಯು ಹೀಗೆಯೇ ಸರಿ."

"ನೀನು ನನ್ನನ್ನು ಬಿಟ್ಟು ಎಲ್ಲಿಯೂ ಹೋಗಬೇಡ.''

"ನಾನು ಎಲ್ಲಿಗೆ ಹೋಗಲಿ!''

"ನೀನು ನಿನ್ನ ತಾಯಿ-ತಂದೆಗಳ ಬಳಿಗೆ ಹೋಗುವದಿಲ್ಲವೆ?''

"ಯಾರು ಪಾಲನ-ಪೋಷಣ ಮಾಡುವರೋ ಅವರೇ ತಂದೆ-ತಾಯಿಗಳೆಂದು ತಿಳಿದುಕೊಳ್ಳುವದು ನಿಜವಾದ ಸೇವಕನ ಧರ್ಮವಾಗಿರುವದು.''

"ಬೂನಾ, ನೀನು ಪ್ರಾಮಾಣಿಕ ಬುದ್ಧಿಯವನಿರುವೆ. ಧರ್ಮಭಾವನೆಗಳಾದರೂ ನಿನ್ನಲ್ಲಿ ಜಾಗ್ರತವಿರುವವು.''

"ಮಹಾರಾಜರೆ, ಒಡೆಯನ ಸೇವೆಯನ್ನು ಅತ್ಯಂತ ನಿಷ್ಠೆಯಿಂದ ಮಾಡಬೇಕೆಂಬದನ್ನು ನಾನು ಚನ್ನಾಗಿ ಅರಿತಿರುವೆನು."

"ನಿನಗೆ ಓದು-ಬರಹ ಗೊತ್ತಿರುವದೇನು?''

" ನಾನು ಹೆಚ್ಚಾಗಿ ಕಲಿತಿಲ್ಲ. ಬ್ರಾಹ್ಮಣ ಕುಮಾರನಾದ ನಾನು ಪುರಾಣ-ಪುಸ್ತಕಗಳನ್ನು ಓದಲಿಕ್ಕೆ ಕಲಿತಿರುವೆನು."

"ಬೂನಾ, ನಿನಗೆ ಶಸ್ತ್ರವಿದ್ಯೆಯು ಬರುವದೆ?''

"ಅದನ್ನು ತೆಗೆದುಕೊಂಡು ಮಾಡುವದೇನು? ನಾನು ಶಸ್ತ್ರವಿದ್ಯೆಯನ್ನು ಕಲಿತಿಲ್ಲ."

"ಈಗಿನ ಕಾಲದಲ್ಲಿ ಪ್ರತಿಯೊಬ್ಬನು ಶಸ್ತ್ರವಿದ್ಯಾಕುಶಲನಿರಬೇಕು. ಬೂನಾ, ನಾನು ನಿನಗೆ ಶಸ್ತ್ರವಿದ್ಯೆಯನ್ನು ಕಲಿಸುವೆನು."

"ಹಾಗಾದರೆ ನಾನು ಅವಶ್ಯವಾಗಿ ಕಲಿಯುವೆನು."

"ಬೂನಾ, ನಿನಗೆ ಭಗವದ್ಗೀತೆಯ ಅರ್ಥವು ತಿಳಿಯುವದೇನು?"

"ತಿಳಿಯದಿರಲಿಕ್ಕೆ ಏನಾಗಿದೆ? ನಾನು ಗೀತೆಯ ಸರಳಾರ್ಥವನ್ನು ಬಲ್ಲೆನು."

"ನೀನು ದಿನಾಲು ಒಂದೆರಡು ತಾಸು ಧಾರ್ಮಿಕ ಪುಸ್ತಕಗಳನ್ನು ಓದು. ಇದೊಂದು ನಿನ್ನ ಕರ್ತವ್ಯವೆಂದು ತಿಳಿದುಕೋ."

ಕಾಲಾಚಾಂದನ ಮಾತಿಗೆ ಬೂನಾನು ಒಪ್ಪಿಕೊಂಡನು. ಯೋಗ್ಯನಾದ ಸೇವಕನು ದೊರೆತದ್ದರಿಂದ ಕಾಲಾಚಾಂದನಿಗೆ ಆನಂದವಾಯಿತು. ತನ್ನ ಮನಸ್ಸಿನಂತೆ ಕಾರ್ಯವಾದ್ದರಿಂದ ಬೂನಾನಾದರೂ ಆನಂದ ಶರಧಿಯಲ್ಲಿ ಲೋಲಾಡತೊಡಗಿದನು.

---

## ಸೇಡು ತೀರಿಸಿಕೊಳ್ಳುವ ಭಾವನೆ.

ಪ್ರೇಮಭಂಗ ಹೊಂದಿದ ಮನುಷ್ಯನ ಸ್ಥಿತಿಯು ಬಹಳೇ ವಿಚಿತ್ರವಾಗುತ್ತದೆ. ಪ್ರೇಮಮೃಗಜಲದ ಬೆನ್ನು ಹತ್ತಿ, ಕಡೆಗೆ ಪ್ರಣಯಭಂಗ ಹೊಂದಿ, ತಮ್ಮ ಆಯುಷ್ಯವನ್ನೆಲ್ಲ ನಿರಾಶೆ-ಉದಾಸೀನತೆಯಿಂದ ಕಳೆದವರ ದೃಷ್ಟಾಂತಗಳು ಹೇರಳವಾಗಿ ದೊರೆಯಬಹುದು. ಪ್ರೇಮದಲ್ಲಿ ಸೌಖ್ಯಕ್ಕಿಂತ ದುಃಖದ ಪರಿಮಾಣವು ಹೆಚ್ಚಾಗಿರುವದು. ಹೀಗಿದ್ದರೂ ಮನುಷ್ಯನು ಅಲ್ಪ ಸೌಖ್ಯಕ್ಕಾಗಿ ಪರಿಮಿತಿಯಿಲ್ಲದಷ್ಟು ದುಃಖವನ್ನನುಭವಿಸುತ್ತಾನೆ. ಪ್ರಣಯದ ಮಹಿಮೆಯು ಅವರ್ಣನೀಯವಿರುವದು. ಗದಾಧರನ ಹೃದಯಸಿಂಹಾಸನದ ಅನಭಿಷಕ್ತ ರಾಣಿಯಾದ ವ್ರಜಬಾಲೆಯು ಕಾಲಾಚಾಂದನನ್ನು ವಿವಾಹವಾದಂದಿನಿಂದ ಗದಾಧರನ ಸ್ಥಿತಿಯು ವಿಲಕ್ಷಣವಾ

ಗಿತ್ತು. ತನ್ನ ಮಾನಸ ಪತಿಯು ಮೋಲಲ್ಲದೆ ಅನ್ಯರಲ್ಲಿ ತನ್ನ ಮನಸ್ಸು ಎಂದೂ ಲೀನವಾಗುವದಿಲ್ಲೆಂದು ವ್ರಜಬಾಲೆಯು ಕಾಲಾಚಾಂದನಿಗೆ ಹೇಳಿ, ಅವನ ಮನೆಯಿಂದ ಹೊರಬಿದ್ದ ಸಂಗತಿಯು ತಿಳಿದ ಕೂಡಲೆ ಗದಾಧರನು ವ್ರಜಬಾಲೆಯ ನಿಜವಾದ ಪ್ರೇಮದ ಯೋಗ್ಯತೆಯನ್ನು ಕಂಡು ಹಿಡಿದನು. ಮೊದಲೇ ಪ್ರೇಮಮುಗ್ಧವಾದ ಅವನ ಹೃದಯವು ಮತ್ತಿಷ್ಟು ಭ್ರಮಿಷ್ಟ ವಾಯಿತು. ವಿವಾಹದಿಂದ ವ್ರಜಬಾಲೆಯು ಪರಸ್ತ್ರೀಯಾಗಿರುವಳೆಂಬ ಅವನ ವಿಚಾರವು ಸ್ಮೃತಿಪಟಲದಿಂದ ಹಾರಿ ಹೋಯಿತು. ಆಗ ಅವನು ತನ್ನ ಮನೋಹರೆಯ ಪತ್ರಗಳನ್ನು ಪೆಟ್ಟಿಗೆಯೊಳಗಿಂದ ತೆಗೆದು ಓದಲಾ ರಂಭಿಸಿದನು. ಪತ್ರಗಳನ್ನು ಓದುತ್ತ ಹೋದಂತೆ ಅವನ ಮನಸ್ಸು ಹೆಚ್ಚು ಹೆಚ್ಚು ಭ್ರಾಂತವಾಗಲಾರಂಭಿಸಿತು. ಧರ್ಮಶ್ರದ್ಧೆಯ ಜನ ರಿಗೆ ಪುರಾಣ-ಪುಣ್ಯಕಥೆಗಳನ್ನು ಓದುವದರಿಂದ ಹೇಗೆ ಆನಂದವಾಗು ವದೋ, ಅದರಂತೆ ಪ್ರೇಮಿಜನರಿಗೆ ಪ್ರಣಯಪತ್ರವಾಚನದಿಂದ ಆನಂದ ವೆನಿಸುವದು. ಗದಾಧರನು ವ್ರಜಬಾಲೆಯ ಪ್ರೇಮಪತ್ರಿಕೆಗಳನ್ನು ಅನೇಕ ಸಾರೆ ಪಾರಾಯಣ ಮಾಡಿದನು. ಎಷ್ಟು ಜಾರಿ ಓದಿದರೂ ಅವನ ಮನಸ್ಸು ತೃಪ್ತಿಯಾಗಲೊಲ್ಲದು. ಅವನು ಎಷ್ಟೋ ಹೊತ್ತಿನವರೆಗೆ ಆ ಪತ್ರಗಳನ್ನೋದಿ, ಅನಂತರದಲ್ಲಿ ಅವೆಲ್ಲವುಗಳನ್ನು ಚುಂಬಿಸಿ ಪೆಟ್ಟಿಗೆ ಯಲ್ಲಿರಿಸಿದನು. ತರುವಾಯ ಅವನು ಮತ್ತೊಂದು ಪೆಟ್ಟಿಗೆಯನ್ನು ತೆರೆ ದನು. ಅದರಲ್ಲಿ ಅವನ ಪ್ರಣಯಿನಿಯಾದ ವ್ರಜಬಾಲೆಯ ಭಾವಚಿತ್ರವೂ ಒಂದು ಪತ್ರವೂ ಇತ್ತು. ಅವನು ಭಾವಚಿತ್ರವನ್ನು ಕಣ್ಣುತುಂಬ ನೋಡಿ ಅದನ್ನೊಮ್ಮೆ ಪ್ರೇಮಭರದಿಂದ ಮುದ್ದಿಟ್ಟನು. ಅನಂತರದಲ್ಲಿ ಅವನು ಪತ್ರವನ್ನು ತೆಗೆದುಕೊಂಡು ಓದಲಾರಂಭಿಸಿದನು:

"ಪ್ರಿಯ ಗದಾಧರ,

ನಿಮ್ಮ ಪ್ರಿಯ ಮಿತ್ರನೆಂದು ಹೇಳಿಸಿಕೊಳ್ಳುತ್ತಿದ್ದ ಕಾಲಾಚಾಂದ ನು ನನಗೆ ಕಾಲನಾದನು. ನಿಜವಾಗಿ ಹೇಳಬೇಕಾದರೆ, ಅವನು ನಿಮ್ಮ ಮಿತ್ರನಲ್ಲ; ಶತ್ರುವು.

ನೀವು ವೀರಜಾವನದಿಂದ ಶ್ರೀಪುರಕ್ಕೆ ಬಂದು ಉಷಾಸುಂದರಿಯ

ಮುಖದಿಂದ ನನ್ನ ವಿವಾಹದ ಚರಿತ್ರವನ್ನು ಸಾದ್ಯಂತವಾಗಿ ಕೇಳಿರುವಿರಿ. ನಾನು ಯಾವ ಅನಿವಾರ್ಯ ಪ್ರಸಂಗಗಳ ಮೂಲಕ ಅವನ ರಾಕ್ಷಸೀ ಮಹತ್ವಾಕಾಂಕ್ಷೆಗೆ ಬಲಿಯಾದೆನೆಂಬದಾದರೂ ನಿಮಗೆ ಗೊತ್ತಾಗಿರುವದು. ಜನರ ದೃಷ್ಟಿಯಿಂದ ನಾನು ವಿವಾಹಿತಳಾಗಿದ್ದರೂ ಮನಸ್ಸಿನಿಂದ ಅವಿವಾಹಿತಳಾಗಿಯೇ ಇರುವೆನು. ನನ್ನ ಭಾವನೆಗಳು ಅತ್ಯಂತ ಪವಿತ್ರವಿರುವವೆಂಬದನ್ನು ಗುಣಗ್ರಾಹಿಗಳೂ ನನ್ನ ಪ್ರೇಮದ ನೆಲೆಯನ್ನು ತಿಳಿದವರೂ ಆದ ನಿಮಗೆ ಹೇಳುವ ಆವಶ್ಯಕತೆಯಿಲ್ಲ.

ಕಾಲಾಚಾಂದನಿಗೆ ನನ್ನ ಸಹವಾಸವು ಒಂದೇ ದಿವಸದಲ್ಲಿ ಸಾಕು ಸಾಕಾಗಿ ಹೋಯಿತು. ನಾನು ಅವನ ಜಾಳಿಗೆಯಿಂದ ಪಾರಾಗಿ ಅತ್ತಿತ್ತ ಅಲೆದಾಡತೊಡಗಿರುವೆನು. ಕಾಲಾಚಾಂದನನ್ನು ವಿವಾಹವಾಗುವದಕ್ಕಿಂತ ಮುಂಚಿತವಾಗಿಯೆ ನಾನು ನಿಮ್ಮನ್ನು ಮನಸ್ಸಿನಿಂದ ವರಿಸಿರುವೆನು. ನೀವಾದರೂ ಬಲಾತ್ಕಾರ ವಿವಾಹದ ದೋಷವನ್ನು ಮನಸ್ಸಿನಲ್ಲಿ ತರಲಾರಿರೆಂದು ನನ್ನ ವಿಶ್ವಾಸವಿರುವದು.

ಪ್ರಿಯ ಸಖಾ, ಈ ವ್ರಜಬಾಲೆಯು ತಮ್ಮ ಸ್ವರ್ಗೀಯ ಸಾನ್ನಿಧ್ಯವನ್ನು ಸೇರಲು ಉತ್ಕಂಠಿತಳಾಗಿರುವಳು. ಈ ದಾಸಿಯ ಸೇವೆಯನ್ನು ಸ್ವೀಕರಿಸಲಿಕ್ಕೆ ನಿಮ್ಮ ಮನಸ್ಸಾದರೂ ಆತುರಗೊಂಡಿರಬಹುದು. ನಮ್ಮೀರ್ವರ ಪ್ರೇಮಸಂಯೋಗದಿಂದ ಉಭಯತರ ಭಾವೀ ಆಯುಷ್ಯವು ಆನಂದಮಯವಾಗುವದೆಂಬದನ್ನು ಬೇರೆ ಹೇಳುವ ಕಾರಣವಿಲ್ಲ.

ಪ್ರಾಣಪ್ರಿಯರೆ, ತಮ್ಮ ಸಾನ್ನಿಧ್ಯವನ್ನು ಸೇರುವದಕ್ಕಾಗಿ ಮನಸ್ಸು ಧಾವಿಸುತ್ತಿರುವದು. ನಿರ್ಮಲಾಂತಃಕರಣಿಗಳೂ ಸದಸದ್ವಿವೇಕ ಬುದ್ಧಿಯುವರೂ ಆದ ನೀವು, ಈ ಬಡ ದಾಸಿಯನ್ನು ಪ್ರೇಮದಿಂದ ಸ್ವೀಕರಿಸುವಿರೆಂದು ಕುತೂಹಲವುಳ್ಳವಳಾಗಿರುವೆನು.

ಈ ಚಾತಕವು ತಮ್ಮ ದರ್ಶನಕ್ಕಾಗಿ ಅತ್ಯಂತ ಆತುರಗೊಂಡಿದೆ. ಹೃದಯದೇವತೆಗಳೆ, ನೀವು ಈ ಇಚ್ಛೆಯನ್ನು ಈಡೇರಿಸುವಿರೇನು?

ತಮ್ಮ ದರ್ಶನಾಕಾಂಕ್ಷಿ ಪ್ರಣಯಿನಿ,

ವ್ರಜಬಾಲೆ''

ಗದಾಧರನು ಆ ಪತ್ರವನ್ನು ಎರಡು ಮೂರು ಸಾರೆ ಓದಿದನು ಮೊದಲು ಪ್ರಸನ್ನವಾಗಿದ್ದ ಅವನ ಮುಖವು ಬರಬರುತ್ತ ಉಗ್ರವಾಯಿತು ಪರಕ್ಷಣದಲ್ಲಿ ಉದಾಸೀನತೆಯಿಂದ ತೇಜೋಹೀನವಾಯಿತು. ಮತ್ತೊಂದು ನಿಮಿಷಕ್ಕೆ ಅವನು ದುಃಖದಿಂದ ದೀರ್ಘನಿಶ್ವಾಸ ಬಿಟ್ಟನು. ತರುವಾಯ ಅವನು ಆ ಪತ್ರವನ್ನು ಹರಿದು ಹೊರಗೆ ಚಲ್ಲಿದನು. ಮುಂದೆ ಸ್ವಲ್ಪ ವೇಳೆಯ ಮೇಲೆ ವ್ರಜಬಾಲೆಯ ಭಾವಚಿತ್ರವೂ ಉಳಿದ ಪ್ರಣಯ ಪತ್ರಿಕೆಗಳೂ ಅದೇ ವಿಧದ ದುರವಸ್ಥೆ ಹೊಂದಿದವು. ಗದಾಧರನಿಂದ ಈ ಬಗೆಯ ಹುಚ್ಚುತನದ ಕೃತಿಗಳು ಘಟಿಸಿದ ಕಾರಣವೇನಿರಬಹುದು?

ವ್ರಜಬಾಲೆಯ ಪತ್ರವು ಮುನ್ನಾ ದಿನವೇ ಅಲ್ಲಿಗೆ ಬಂದಿತ್ತು. ಆ ಪತ್ರವು ಬಂದಾಗ ಗದಾಧರನು ಮನೆಯಲ್ಲಿಲ್ಲದ್ದರಿಂದ ಅವನ ಸೇವಕನು ಅದನ್ನು ಪೆಟ್ಟಿಗೆಯಲ್ಲಿ ಹಾಕಿದ್ದನು. ಪ್ರಣಯ ಭಾವನಾವಶನಾದ ಗದಾಧರನಿಗೆ ವ್ರಜಬಾಲೆಯು ಪರಸ್ತ್ರೀಯೆಂಬ ಸಂಗತಿಯು ಮರೆತಿತ್ತು. ಅವನು ತನ್ನ ಪ್ರಣಯಿನಿಯ ಪ್ರೇಮ ಪತ್ರಗಳನ್ನು ಬಳ್ಳೇ ಆತುರತೆಯಿಂದ ಓದಲಾರಂಭಿಸಿದನು. ಪ್ರಣಯ ಮೂಢನಾದ ಅವನು ಪ್ರೇಮಪರವಶನಾಗಿ ಅವುಗಳನ್ನು ಚುಂಬಿಸತೊಡಗಿದನು. ಅವಳ ಭಾವಚಿತ್ರವನ್ನು ಮುದ್ದಿಟ್ಟನು. ಕಡೆಯ ಪತ್ರದೊಳಗಿನ ಸಂಗತಿಗಳನ್ನು ಓದಿದೊಡನೆಯೆ ಅವನ ಪ್ರೇಮಾಂಧವಾದ ಮನಸ್ಸು ವಿವೇಕವನ್ನು ಹೊಂದಿತು. ವಿವಾಹದಿಂದ ವ್ರಜಬಾಲೆಯು ಪರಸ್ತ್ರೀಯಾಗಿರುವಳೆಂಬುದು ಅವನ ಲಕ್ಷ್ಯದಲ್ಲಿ ಬಂದಿತು. ಪರವನಿತೆಯನ್ನು ಪ್ರೀತಿಸುವದಕ್ಕೆ ಈ ಪತ್ರಗಳೇ ಕಾರಣವಾದವೆಂದು ಅವನು ಆ ಎಲ್ಲ ಪತ್ರಗಳನ್ನು ಹರಿದು ಚಲ್ಲಿದನು. ಭಾವಚಿತ್ರವು ಬಳಿಯಲ್ಲಿದ್ದರೆ ಒಮ್ಮೆಲ್ಲೊಮ್ಮೆಯಾದರೂ ಮನಸ್ಸಿನಲ್ಲಿ ಕೆಟ್ಟ ಭಾವನೆಗಳೂ ಹುಟ್ಟಬಹುದೆಂದು ತಿಳಿದು, ಅವನು ಆ ಚಿತ್ರವನ್ನಾದರೂ ನಾಶ ಮಾಡಿದನು. ವಿವಾಹದಿಂದ ವ್ರಜಬಾಲೆಯು ಕಾಲಾಚಾಂದನ ಧರ್ಮಪತ್ನಿಯಾಗಿದ್ದರೂ, ತನ್ನ ಮೇಲೆ ಪ್ರಣಯವುಳ್ಳವಳಾದದ್ದನ್ನು ನೋಡಿ, ಗದಾಧರನು ಅವಳ ವರ್ತನವು ಶುದ್ಧವಾದದ್ದಲ್ಲವೆಂದು ಭಾವಿಸಿದನು. ಅವನು ವ್ರಜಬಾಲೆಗೆ ಸ್ವೈರಿಣಿಯೆಂಬ ದೋಷವನ್ನೀಯುವ

ದಕ್ಕಾದರೂ ಹಿಂದೆ ಮುಂದೆ ನೋಡಲಿಲ್ಲ.

ಪ್ರಣಯಭಂಗ ಹೊಂದಿದ ಗದಾಧರನ ಮನಸ್ಸು ಚಂಚಲತೆಯನ್ನು ಹೊಂದಿತ್ತು. ಉಚ್ಚವಾವದು, ನೀಚವಾವದು ಎಂಬದನ್ನು ತಿಳಿಯುವಷ್ಟು ವಿವೇಕವು ಅವನಲ್ಲಿ ಚನ್ನಾಗಿ ಉಳಿದಿದ್ದಿಲ್ಲ. ವಿವಾಹವಾದ ಮೇಲಾದರೂ ಪ್ರೇಮಪ್ರಭಾವದಿಂದ ವ್ರಜಬಾಲೆಯು ತನ್ನ ಕಡೆಗೆ ಧಾವಿಸತೊಡಗಿದ್ದನ್ನು ನೋಡಿ, ಗದಾಧರನು ಅವಳ ಗುಣ-ಗೌರವವನ್ನು ಚನ್ನಾಗಿ ಹೊಗಳುತ್ತಿದ್ದನು. ವಿವಾಹಿತಳಾದವಳು ಪರಪುರುಷರ ಪ್ರೇಮಸಂಪಾದನೆಗಾಗಿ ಯತ್ನಿಸುವದು ಅತ್ಯಂತ ನೀಚತನದ ಕೃತಿಯೆಂದು ತಿಳಿದು ಅವಳ ನಿರ್ಭತ್ಸ೯ನೆ ಮಾಡುತ್ತಿದ್ದನು. ಚಿತ್ತಚಾಂಚಲ್ಯವನ್ನೂ ವಿಭ್ರಮತೆಯನ್ನೂ ಹೊಂದಿದ ಗದಾಧರನಿಗೆ ಉಚ್ಚ-ನೀಚ ಮಾರ್ಗಗಳ ದೃಢವಾದ ಕಲ್ಪನೆಯಾಗದೆ, ಅವನು ಪ್ರವಾಹ ಪತಿತನಂತೆ ದುರವಸ್ಥೆಯನ್ನು ಹೊಂದಿದ್ದನು.

ಅನೇಕ ವಿಧದ ವಿಚಾರಗಳಿಂದ ಕ್ಷುಬ್ಧಮನಸ್ಕನಾದ ಗದಾಧರನು ಮನಸ್ಸಿನ ಶಾಂತತೆಗಾಗಿ ತನ್ನ ಉದ್ಯಾನಕ್ಕೆ ಹೋದನು. ಅಲ್ಲಿ ಅವನು ಜಾಜಿಮಂಟಪದ ಬಳಿಯ ಶಿಲಾತಲ್ಪದ ಮೇಲೆ ಕುಳಿತುಕೊಂಡನು. ಉದ್ಯಾನದ ಶೋಭೆಯನ್ನು ನೋಡಿ ಅವನ ಔದಾಸೀನ್ಯವು ತೊಲಗಲಿಲ್ಲ. ತಣಿವಣ್ಣಗಳನ್ನು ಮೆದ್ದು ಮಧುರಾಲಾಪ ಮಾಡುತ್ತಿರುವ ಕೀರಕೋಕಿಲೆಗಳು ಅವನ ಚಂಚಲವಾದ ಮನಸ್ಸನ್ನು ಆಕರ್ಷಿಸಲಿಲ್ಲ. ಪುಟನೆಗೆಯುತ್ತಿರುವ ಕಾರಂಜಿಯ ತುಷಾರಗಳು ಅವನ ಮನಸ್ಸಿನ ಸಂತಾಪದಾಹವನ್ನು ಶಾಂತಮಾಡಲಿಲ್ಲ. ಪುಷ್ಪ-ಗಂಧವನ್ನು ಹೊತ್ತುಕೊಂಡು ಮೆಲ್ಲಮೆಲ್ಲನೆ ಸಾಗಿರುವ ಗಂಧವಹನು ಅವನ ತಲ್ಲಣವನ್ನು ನಿವಾರಿಸಲಿಲ್ಲ. ವಿದಗ್ಧ ಮನಸ್ಕರಿಗೆ ಶಾಂತಿಯೆಲ್ಲಿ? ಸಮಾಧಾನವೆಲ್ಲಿ? ಗದಾಧರನು ವ್ರಜಬಾಲೆಯ ಆಶೆಯನ್ನು ಬಿಟ್ಟವನಾಗಿದ್ದರೂ, ಮನಸ್ಸಿನೊಳಗಿನ ದುಗುಡವು ಮಾತ್ರ ಅವನನ್ನು ತೊಲಗಿದ್ದಿಲ್ಲ. ಅವನಿಗೆ ಭಾವೀ ಆಯುಷ್ಯವು ಶೂನ್ಯವಾಗಿ ತೋರುತ್ತಿತ್ತು. ಪ್ರತಿಭಾಶಾಲಿಯಾದ ಅವನ ಕಾರ್ಯೋತ್ಸಾಹವೂ ಶೌರ್ಯ-ಸಾಹಸಗಳೂ ಲುಪ್ತಪ್ರಾಯವಾಗಿದ್ದವು. ತನ್ನಿಂದ

ದೊಡ್ಡ ಪುರುಷಾರ್ಥವು ನೆರವೇರಬಹುದೆಂಬ ಅವನ ಆಶೆಯು ಬಯಲಾಗಿತ್ತು. ದೀರ್ಘಕಾಲದ ರೋಗಿಯಂತೆ ತನ್ನ ಇಡಿಯ ಆಯುಷ್ಯವನ್ನು ತೊಳಲುತ್ತ ಬಳಲುತ್ತ ಕಳೆಯಬೇಕಾಗುವದೆಂದು ಅವನು ತಿಳಿದುಕೊಂಡಿದ್ದನು.

ಗದಾಧರನು ಉದಾಸೀನತೆಯಿಂದ ಕುಳಿತಾಗ ಉದ್ಯಾನದ ಕಾವಲುಗಾರನು ಅವನ ಬಳಿಗೆ ಬಂದು, ಯಾವಳೋ ಒಬ್ಬ ಸ್ತ್ರೀಯು ನಿಮ್ಮನ್ನು ಕಾಣಬೇಕೆಂದು ಬಂದಿರುವಳೆಂಬ ಸುದ್ದಿಯನ್ನು ಹೇಳಿದನು. ಕೂಡಲೆ ಗದಾಧರನಿಗೆ ಏನು ತಿಳಿಯಿತೋ ಏನೋ, ಅವನು ಆ ಸ್ತ್ರೀಯನ್ನು ಒಳಗೆ ಬಿಡಬಾರದೆಂದು ಸೇವಕನಿಗೆ ಹೇಳಿದನು. ಆಗಂತುಕ ಸ್ತ್ರೀಯು ಇಂತಹಳೇ ಎಂಬದು ಅವನಿಗೆ ತಿಳಿದಿರಬಹುದು. ಸೇವಕನು ಅವನ ಆಜ್ಞೆಯನ್ನು ಶಿರಸಾವಹಿಸಿ ಹೊರಟನು. ಸೇವಕನು ಹೋದ ಮೇಲೆ ಮತ್ತೆ ಅವನಿಗೆ ಏನು ತಿಳಿಯಿತೋ ಯಾರು ಬಲ್ಲರು? ಅವನು ಆ ಸೇವಕನನ್ನು ಕೂಗಿ ಕರೆದು, ಬಂದಿರುವ ಸ್ತ್ರೀಯನ್ನು ಒಳಗೆ ಕಳಿಸುವದಕ್ಕಾಗಿ ತಿಳಿಸಿದನು. ಸೇವಕನು ಹೊರಟು ಹೋದ ಸ್ವಲ್ಪ ವೇಳೆಯಲ್ಲಿ ವಿಷಣ್ಣ ಮುಖಿಯಾದ ಒಬ್ಬ ಸುಂದರ ತರುಣಿಯು ಗದಾಧರನ ಬಳಿಗೆ ಬಂದಳು. ಅವಳನ್ನು ನೋಡಿದ ಕೂಡಲೆ ಗದಾಧರನು:--"ನೀನೇ ಬಂದಿರುವೆಯೆಂದು ನಾನು ಮೊದಲೇ ತಿಳಿದಿದ್ದೆನು"

"ಅಂತೆಯೆ ನನಗೆ ಯೋಗ್ಯ ಸ್ವಾಗತ ಮಾಡಿದಿರಿ!" ಎಂದು ಆ ತರುಣಿಯು ನುಡಿದು, ಖಿನ್ನವಾಣಿಯಿಂದ—"ನನ್ನ ಆಗಮನದ ವಾರ್ತೆಯನ್ನು ಕೇಳಿ ಕಡು ಹರುಷದಿಂದ ಎದುಗೊಂಡು ಕೈಹಿಡಿದು ಕರೆದೊಯ್ಯುವಿರೆಂದು ತಿಳಿದಿದ್ದೆನು. ನಾನು ನಿಮಗೆ ಅಷ್ಟೊಂದು ತಿರಸ್ಕರಣೀಯಳಾಗಿ ತೋರಿದೆನಲ್ಲವೆ? ಎದುಗೊಂಡು ಮನ್ನಣೆಯಿಂದ ಕರೆಯುವದೊತ್ತಟ್ಟಿಗಿರಲಿ; ಭೆಟ್ಟಿಯು ಅಗತ್ಯವಿಲ್ಲೆಂದು ಹೇಳಿಕಳುಹಿಸಿದಿರಿ! ನಾನು ಅಂತಹ ಅಪರಾಧವನ್ನೇನು ಮಾಡಿರುವೆನೆಂದು ನನ್ನನ್ನು ಈ ಪರಿಯಾಗಿ ಬೇಸರ ಮಾಡಿದಿರಿ?"

"ಕಾರಣವಿಲ್ಲದೆ ಕಾಣುವ ಆವಶ್ಯಕತೆಯೇನು?"

"ಕಾರಣವಿರುವದರಿಂದಲೆ ಕಾಣುವದಕ್ಕಾಗಿ ಧಾವಿಸಿ ಬಂದೆನು."

"ನಿನಗೆ ಕಾರಣವಿರಬಹುದು; ನನಗೆ ಮಾತ್ರ ನಿಷ್ಕಾರಣವೆಂದು ತೋರುವದು."

"ಹಾಗಿದ್ದರೆ ಹಿಂದಿನಿಂದ ಬರಹೇಳಿದ ಕಾರಣವೇನು?"

"ಪೂರ್ವಸಂಬಂಧವನ್ನು ಸ್ಮರಣೆಯಲ್ಲಿ ತಂದು, ಒಮ್ಮೆ ಕೊನೆಯ ಭೆಟ್ಟಿಯನ್ನು ಕೊಡಬೇಕೆಂಬ ಉದ್ದೇಶದಿಂದ ಕರೆಯಿಸಿದೆನು."

"ಕೊನೆಯ ಭೆಟ್ಟಿಯೆ? ಹೀಗೇಕೆ ಮಾತನಾಡುವಿರಿ? ದೇಶಾಂತರಕ್ಕೆ ತೆರಳುವದಿರುವದೇನು?"

"ಹಾಗಾದರೂ ಆಗಬಹುದು."

"ಗದಾಧರರೆ, ಹೀಗೆ ಹುಚ್ಚತನದ ಮಾತುಗಳನ್ನಾಡುವದು ನನಗೆ ಸೇರುವದಿಲ್ಲ."

"ನಿನಗೆ ಸೇರುತ್ತಿರುವಂತಹ ಆಚರಣೆಯಿಡುವೆನೆಂದು ನಾನು ಮಾತು ಕೊಟ್ಟಿಲ್ಲ."

"ಪೂರ್ವಸಂಬಂಧವನ್ನು ಸ್ಮರಣೆಯಲ್ಲಿ ತಂದು ನಿನ್ನನ್ನು ಕರೆಯಿಸಿದೆನೆಂದು ಇದೀಗ ನೀವು ಹೇಳಲಿಲ್ಲವೆ?"

"ಅಹುದು; ಹೇಳಿದ್ದು ನಿಜವು. ವಸ್ತುಸ್ಥಿತಿಯಾದರೂ ಹಾಗೆಯೆ ಇರುವದು."

"ಈಗ ಆ ಸಂಬಂಧವು ಉಳಿದಿಲ್ಲವೇನು?"

"ಉಳಿದಿಲ್ಲವೆಂತಲೆ ಹಾಗೆ ಹೇಳಿದೆನು."

"ನಾಥರೆ!"

"ಹಾ! ಎಚ್ಚರದಿಂದ ಮಾತನಾಡು! ನೀನು ಈಗ ಪರವನಿತೆಯಾಗಿರುವೆ. ಪರಯುವತಿಯರನ್ನು ಅಪೇಕ್ಷಿಸುವ ಕೀಳು ಮನೋವೃತ್ತಿಯವನು ನಾನಲ್ಲವೆಂಬುದನ್ನು ಸ್ಮೃತಿಪಟಲದಿಂದ ದೂರಿರಿಸಬೇಡ."

ಗದಾಧರನು ಹೀಗೆ ನುಡಿದ ಕೂಡಲೆ ಆ ಆಗಂತುಕ ತರುಣಿಯು ಕಣ್ಣುತುಂಬ ನೀರು ತಂದಳು; ಅವಳ ಕಂಠವು ಸದ್ಗದಿತವಾಯಿತು; ಕಾಂತಿಯುತವಾದ ಮುಖಕಮಲವು ಬಾಡಿತು. ಗದಾಧರನು ಆ ತರು

ಣಿಗೆ ಹೇಳಿದ ಮಾತಿನಿಂದ ಅವಳ ಉತ್ಸಾಹವೆಲ್ಲ ಮಾಯುವಾಯಿತು. ಅವಳು ಅತಿರೇಕವಾದ ದೈನ್ಯಾವಸ್ಥೆಗೊಳಗಾದವಳಂತೆ ತೋರಲಾರಂಭಿಸಿದಳು. ಗದಾಧರನ ಕಟುಭಾಷಣಗಳಿಂದ ದುಃಖಿತಳಾದ ಆ ತರುಣಿಯು ಪ್ರಣಯಾತುರಳಾದ ವ್ರಜಬಾಲೆಯೆಂಬದನ್ನು ವಾಚಕಮಹಾಶಯರು ಗುರುತಿಸಿರಬಹುದು. ಕಾಲಾಚಾಂದನನ್ನು ತುಚ್ಛೀಕರಿಸಿ, ಗದಾಧರನ ಸಾನ್ನಿಧ್ಯದಲ್ಲಿ ಸ್ವರ್ಗೀಯ ಸೌಖ್ಯವನ್ನು ಪಡೆಯುಬೇಕೆಂಬ ಆಕಾಂಕ್ಷೆಯಿಂದ ಬಂದವಳಾದ ವ್ರಜಬಾಲೆಗೆ ತನ್ನ ಹೃದಯೇಶ್ವರನ ಅಭದ್ರವೂ ನಿರುತ್ಸಾಹಜನಕವೂ ನಿರಾಶಾಪೂರಿತವೂ ಆದ ಮಾತುಗಳಿಂದ ಎಷ್ಟು ದುಃಖವಾಗಿರಬಹುದೆಂಬದನ್ನು ಒಡೆದು ಹೇಳುವದಕ್ಕಿಂತ ಕಲ್ಪನೆಯಿಂದ ತಿಳಿಯುವದೇ ಉಚಿತವು.

"ಪ್ರಿಯ ನಾಥ, ಇದೇನು ಮಾತನಾಡುತ್ತಿರುವಿರಿ!" ವ್ರಜಬಾಲೆಯು ದೀನವಾಣಿಯಿಂದ ಮಾತನಾಡತೊಡಗಿದಳು: "ನಾನು ತಮ್ಮನ್ನು ಹೃದಯ ಸಿಂಹಾಸನದಲ್ಲಿರಿಸಿಕೊಂಡಿರುವೆನು. ನನ್ನ ಹೃದಯಕ್ಕೆ ನೀವು ರಾಜರಿರುವಿರಿ. ನಾನು ನಿಮ್ಮಲ್ಲಿ ಪ್ರಣಯವುಳ್ಳವಳಾಗಿರುವೆನೆಂಬದೂ, ನನ್ನ ಪ್ರೇಮವು ನಿಶ್ಚಲವೂ ಶುದ್ಧವೂ ಆಗಿರುವದೆಂಬದೂ ನಿಮಗೆ ಗೊತ್ತಿದ್ದರೂ ಹೀಗೆ ಹೃದಯವಿದಾರಣವಾದ ಮಾತುಗಳನ್ನಾಡಬಹುದೆ? ನನ್ನ ವಿಷಯವಾಗಿ ನಿಮ್ಮಲ್ಲಿ ನೆಲೆಗೊಂಡಿದ್ದ ಪ್ರೇಮಭಾವನೆಯು ಈಗಾಗಲೆ ಲುಪ್ತಪ್ರಾಯವಾಯಿತೆ? ನಾನು ಮನಸ್ಸಿನಿಂದ ನಿಮ್ಮನ್ನು ವರಿಸಿರುವೆನು. ನಿಮ್ಮ ಸೇವೆಗಾಗಿಯೆ ನಾನು ಬದುಕಿಕೊಂಡಿರುವೆನು. ಒಂದು ವೇಳೆ ನೀವು ನನ್ನನ್ನು ತಿರಸ್ಕರಿಸಿದರೆ ನಾನು ಬಾಳಲಾರೆನು."

"ನೀನು ಆತ್ಮಹತ್ಯೆ ಮಾಡಿಕೊಳ್ಳುವಂತಹ ಕೀಳುಮನೋವೃತ್ತಿಯವಳಿರುವೆಯೇನು?" ಎಂದು ಗದಾಧರನು ತಿರಸ್ಕಾರದಿಂದ ನುಡಿದು:-- "ವ್ರಜಬಾಲೆ, ನೀನು ತೇಜಸ್ವಿಯಾದ ಸ್ತ್ರೀಯಿರುವೆ. ಹೇಗಾದರೂ ಮನೋನಿಗ್ರಹ ಮಾಡಿಕೊಂಡು ಸಾರ್ವಜನಿಕ ಹಿತದ ಕಾರ್ಯದಲ್ಲಿ ದೇಹವನ್ನು ಸವೆಯಿಸು. ದೇಶಕಾರ್ಯ ಮಾಡುವದಕ್ಕೆ ನಿನಗೆ ಯೋಗ್ಯ

ವಾದ ಸಂಧಿಯು ಲಭಿಸಿತೆಂದು ತಿಳಿ. ನಾನಾದರೂ ಪ್ರತಿಜ್ಞೆಯಂತೆ ಅವಿವಾಹಿತನಾಗಿದ್ದು, ಸ್ವಜನಾಂಗದ ಹಿತ ಮಾಡುವದಕ್ಕಾಗಿ ಶೇಷಾಯುಷ್ಯವನ್ನು ಕಳೆಯುವೆನು."

"ನಾವಿಬ್ಬರೂ ನಮ್ಮ ಅಮೌಲ್ಯವಾದ ಆಯುಷ್ಯವನ್ನು ದುಃಖದಲ್ಲಿ ಕೆಡಹುವದು ಉಚಿತವೆ?"

"ದೇಶಕಾರ್ಯ ಮಾಡುತ್ತಿದ್ದರೆ ದುಃಖವೇ ಲಭಿಸುವದೆಂದು ನಿನ್ನ ಭಾವನೆಯಿರುವದೇನು? ಅದರಲ್ಲಿ ಮೊದಲು ದುಃಖವೆನಿಸಿದರೂ ಹಿಂದಿನಿಂದ ಮಹತ್ತರವಾದ ಆನಂದವು ಲಭಿಸುವದು. ದೇಶಕಾರ್ಯ ಮಾಡುವಾಗ ಒಂದು ವೇಳೆ ಇಡಿಯ ಆಯುಷ್ಯವು ದುಃಖಮಯವಾಗುವ ಪ್ರಸಂಗ ಬೊದಗಿದರೆ ಅದಕ್ಕೆ ನಾವು ಹೆದರುವ ಕಾರಣವೇನು?"

"ನಾವಿಬ್ಬರೂ ವಿವಾಹಿತರಾಗಿ ದೇಶಕಾರ್ಯ ಮಾಡಲಿಕ್ಕೆ ಬರುವದಿಲ್ಲವೇನು? ನಿಮ್ಮನ್ನು ನಂಬಿದ ನನ್ನ ಆಶಾಭಂಗ ಮಾಡುವದು ಉಚಿತವೆ?"

"ಅದಕ್ಕೆ ನನ್ನ ಉಪಾಯವಿಲ್ಲ. ನಾನು ಎಲ್ಲ ಸಂಗತಿಗಳನ್ನು ತಿಳಿದಿರುವೆನು. ನೀನು ನನ್ನಲ್ಲಿ ಸಂಪೂರ್ಣವಾಗಿ ಪ್ರೀತಿಯುಳ್ಳವಳಾಗಿರುವೆಯೆಂಬ ಮಾತು ನನಗೆ ಗೊತ್ತಿದೆ. ನೀನು ನನ್ನಲ್ಲಿ ಹೇಗೆ ಪ್ರಣಯವುಳ್ಳವಳಾಗಿರುವೆಯೋ, ಅದರಂತೆ ನಾನಾದರೂ ನಿನ್ನನ್ನು ಚನ್ನಾಗಿ ಪ್ರೀತಿಸುತ್ತಿದ್ದೆನು; ಆದರೆ ಈಗ ಮಾಡುವದೇನು? ಗತಗೋಷ್ಠಿಗಾಗಿ ಚಿಂತಿಸುತ್ತ ಕುಳಿತುಕೊಳ್ಳುವದರಲ್ಲಿ ಯಾವ ಪುರುಷಾರ್ಥವಿರುವದು?"

"ನೀವು ನನ್ನನ್ನು ಈಗ ಪ್ರೀತಿಸುವದಿಲ್ಲವೆ?"

"ಮೊದಲಿನ ಪ್ರೀತಿಯು ರೂಪಾಂತರ ಹೊಂದಿರುವದು."

"ದ್ವೇಷದಲ್ಲಿ ರೂಪಾಂತರ ಹೊಂದಿರುವದೆ?"

"ವ್ರಜಬಾಲೆ, ನಾನು ನಿನ್ನನ್ನು ದ್ವೇಷಿಸುವೆನೆಂದು ಭಾವಿಸಬೇಡ. ನಿನ್ನಲ್ಲಿಯ ಸದ್ಗುಣಗಳಿಗೆ ನಾನು ಅತ್ಯಂತ ಲುಬ್ಧನಾಗಿರುವೆನು."

"ವಸ್ತುಸ್ಥಿತಿಯು ಹೀಗಿದ್ದರೆ ನನ್ನನ್ನು ತಮ್ಮ ಸನ್ನಿಧಿಯಲ್ಲಿರಿಸಿಕೊಳ್ಳಲಿಕ್ಕೆ ಪ್ರತ್ಯವಾಯವೇನು?"

"ನೀನು ಪರವನಿತೆಯಿರುವೆಯೆಂದು ಆಗಲೇ ಹೇಳಲಿಲ್ಲವೆ?"

"ನಾನು ಪರವನಿತೆಯಲ್ಲ. ಈ ದೇಹದ ಮೇಲಿನ ಸ್ವಾಮಿತ್ವವು ನಿಮ್ಮದೇ ಇರುವದು. ಗದಾಧರರೆ, ನೀವು ದಯದೋರಿ ನನ್ನನ್ನು ಸ್ವೀಕಾರ ಮಾಡಿರಿ."

"ವ್ರಜಬಾಲೆ, ವಿವಾಹಸಂಸ್ಕಾರದಿಂದ ನೀನು ಕಾಲಾಚಾಂದನ ಪತ್ನಿಯಾಗಿರುವೆ. ನಿನ್ನನ್ನು ನಾನು ಸ್ವೀಕರಿಸಿದರೆ ಧರ್ಮದೃಷ್ಟಿಯಿಂದಲೂ ಸಮಾಜದೃಷ್ಟಿಯಿಂದಲೂ ನಾವು ದೋಷಿಗಳಾಗಲಿಕ್ಕಿಲ್ಲವೆ? ವ್ರಜ, ನೀನು ನಿನ್ನ ಪತಿಯಾದ ಕಾಲಾಚಾಂದನ ಒಳಿಗೆ ಹೋಗು. ವೃಥಾ ಸ್ವೈರಿಣಿಯೆಂಬ ದೋಷವನ್ನು ಹೊರಲು ಪ್ರವೃತ್ತಳಾಗಬೇಡ."

"ಆ ಮಾತು ನನಗೆ ಸಾಧ್ಯವಿಲ್ಲ. ಕಾಲಾಚಾಂದನ ಸಹವಾಸದಲ್ಲಿದ್ದರೆ ನಾನು ವ್ಯಭಿಚಾರಿಣಿಯಾಗುವೆನು. ನನ್ನ ಮನಸ್ಸು ನಿಮ್ಮಲ್ಲಿಯೇ ಲೀನವಾಗಿರುವದರಿಂದ ನಾನು ಕಾಲಾಚಾಂದನನ್ನು ಪರಪುರುಷನೆಂದು ಭಾವಿಸಿರುವೆನು."

"ವ್ರಜಬಾಲೆ, ನಿನ್ನ ಆಚರಣೆಯೂ ಮನಸ್ಸೂ ಶುದ್ಧವಾದವುಗಳೆಂಬದು ನನಗೆ ಗೊತ್ತಾಗಿದೆ; ಆದರೆ ಏನು ಮಾಡಲಿ? ನಿನ್ನನ್ನು ನಾನು ವಿವಾಹವಾದರೆ ಪರಮಾತ್ಮನು ಕ್ಷಮಿಸಬಹುದು; ಆದರೆ ಸಮಾಜವು ಮಾತ್ರ ಕ್ಷಮಾದಾನ ಮಾಡಲಾರದು. ಧರ್ಮಶಾಸ್ತ್ರ ದೃಷ್ಟಿಯಿಂದ ಈ ಮಾತು ನಿಷಿದ್ಧವಿರುವದು."

"ಧರ್ಮಶಾಸ್ತ್ರ ದೃಷ್ಟಿಯಿಂದ ವಿರುದ್ಧವಿದ್ದರೂ ಧರ್ಮದೃಷ್ಟಿಯಿಂದ ಯೋಗ್ಯವಿರುವದು. ಒತ್ತಾಯದ ವಿವಾಹವು ಧರ್ಮವೆನಿಸುವದೆ? ನೀವು ನನ್ನನ್ನು ಸ್ವೀಕರಿಸಿದರೆ ಪರಮಾತ್ಮನು ನಿಮ್ಮಲ್ಲಿ ಪ್ರೇಮವುಳ್ಳವನಾಗುವನು. ನಂಬಿ ನೆಚ್ಚಿದ ಅಬಲೆಗೆ ಆಶ್ರಯ ಕೊಡುವದು ಎಂದೂ ಪಾತಕವೆನಿಸಲಾರದು. ಈ ವಿಷಯದಲ್ಲಿ ನಾವು ಧರ್ಮಶಾಸ್ತ್ರವನ್ನೂ, ಸಮಾಜದೃಷ್ಟಿಯನ್ನೂ ಉಪೇಕ್ಷಿಸುವದೇ ಹಿತಕರವು. ನಾಥರೆ, ಸ್ವರ್ಗೀಯ ಪ್ರಣಯದ ಆನಂದವು ಹೇಗಿರುವದೆಂಬದನ್ನು ಬಾಯಿಂದ ಹೇಳುವದು ಸಾಧ್ಯವೆ? ಅಂತಹ ಆನಂದವನ್ನನ್ನುಭವಿಸಲಿಕ್ಕೆ ನೀವು

ಅಸಮ್ಮತಿಯನ್ನು ವ್ಯಕ್ತಪಡಿಸಿದರೆ ನೀವಾಗಿ ದುಃಖಗರ್ತದಲ್ಲಿ ಪ್ರವೇಶಿಸಿದಂತಾಗುವದು.''

"ವ್ರಜಬಾಲೆ, ನನಗೆ ಎಲ್ಲವೂ ತಿಳಿಯುತ್ತದೆ. ನಾನು ಲೋಕದೇವತೆಗೆ ಬಹಳೇ ಅಂಜುತ್ತಿರುವೆನು.''

"ಅಂಜಲಿಕ್ಕೆ ಈಗೇನಾಗಿದೆ?''

"ನಿನ್ನನ್ನು ವಿವಾಹವಾದರೆ ನನ್ನನ್ನು ಸಮಾಜದವರು ಬಹಿಷ್ಕೃತನನ್ನು ಮಾಡುವರು; ನಿನಗೆ ವ್ಯಭಿಚಾರಿಣಿಯೆಂಬ ಪದವಿಯು ಲಭಿಸುವದು.''

"ನಾನಂತು ಅಂಥ ಸಮಾಜಕ್ಕೆ ಏನೂ ಬೆಲೆ ಕೊಡುವದಿಲ್ಲ. ಯಾವ ಸಮಾಜದಲ್ಲಿ ಸದಸದ್ವಿವೇಕ ಬುದ್ಧಿಯು ಜಾಗ್ರತವಿರುವದಿಲ್ಲವೋ, ಯಾವ ಸಮಾಜಕ್ಕೆ ನಿಜವಾದ ಧರ್ಮದ ತಿಳುವಳಿಕೆಯಿರುವದಿಲ್ಲವೋ, ಯಾವ ಸಮಾಜವು ಸ್ಥೂಲ-ಸೂಕ್ಷ್ಮಗಳ ವಿಚಾರಣೆ ಮಾಡುವದಿಲ್ಲವೊ ಅಂಥ ಸಮಾಜದ ಮಹತ್ವವೇನು?''

"ನೀನು ಗಟ್ಟಿಗಳಿರುವೆ; ನಿನ್ನಂತೆ ನನ್ನ ಮನಸ್ಸಿನ ಸಿದ್ಧತೆಯಿಲ್ಲ. ಅದಕ್ಕೆ ನಾನೇನು ಮಾಡಲಿ?''

ಗದಾಧರನ ಮಾತಿನಿಂದ ವ್ರಜಬಾಲೆಯ ಮೇಲೆ ವಜ್ರಾಘಾತವಾದಂತಾಯಿತು. ಅವನ ಕಟುಭಾಷಣಗಳಿಂದ ಕೋಮಲ ಹೃದಯದ ಆ ತರುಣಿಯ ಕಣ್ಣುಗಳು ದುಃಖಾಶ್ರುಗಳಿಂದ ತುಂಬಿಕೊಂಡವು. ಹೃದಯವು ನಿರಾಶೆಯಿಂದ ದಹಿಸತೊಡಗಿತು. ಕಂಠವು ಸದ್ಗದಿತವಾಗಿ ಮುಖದಿಂದ ಮಾತುಗಳೇ ಹೊರಡದಾದವು. ಅವಳು ದೈನ್ಯಾವಸ್ಥೆಯ ಪರಮಾವಧಿಯನ್ನು ಹೊಂದಿ ದಿಙ್ಮೂಢಳಾದಳು.

"ಗದಾಧರರೆ, ನೀವು ನನ್ನಲ್ಲಿ ಈ ಬಗೆಯಾಗಿ ನಿಷ್ಠುರತೆಯನ್ನು ತಳೆಯಬೇಡಿರಿ. ನಾನು ನಿಮ್ಮ ಸಲುವಾಗಿ ಸಮಾಜನಿಂದೆಯ ಕಡೆಗೆ ದುರ್ಲಕ್ಷಿಸುವೆನು; ಅಪಮಾನವನ್ನು ಸಹಿಸಿರುವೆನು; ಲಜ್ಜಾ-ಭಯಗಳನ್ನು ತೊರೆದಿರುವೆನು. ನೀವೇ ನನ್ನ ಆರಾಧ್ಯ ದೇವತೆಗಳಾಗಿರುವದರಿಂದ ನಿಮ್ಮ ಹೊರತು ನನಗೆ ಜಗತ್ತೇ ಶೂನ್ಯವಾಗಿರುವದು. ಈ ವ್ರಜಬಾಲೆ

ಯನ್ನು ಉಪೇಕ್ಷಿಸದೆ ನಿಮ್ಮವಳನ್ನಾಗಿ ಮಾಡಿಕೊಳ್ಳಬೇಕೆಂದು ಸೆರಗೊಡ್ಡಿ ಪ್ರಾರ್ಥಿಸುವೆನು.''

''ವ್ರಜಬಾಲೆ, ನಿನ್ನ ಪ್ರಾರ್ಥನೆಯನ್ನು ಮನ್ನಿಸುವದಕ್ಕೆ ಮಾರ್ಗವಿಲ್ಲ. ನಿನ್ನ ಹೃದಯಸ್ಥಿತಿಯನ್ನು ನಾನು ಚನ್ನಾಗಿ ಅರಿತಿರುವೆನು. ನೀನು ಹೇಗೆ ನನ್ನಲ್ಲಿ ಪ್ರೇಮವುಳ್ಳವಳಾಗಿರುವೆಯೋ, ಅದರಂತೆ ನಾನಾದರೂ ನಿನ್ನನ್ನು ಪ್ರೀತಿಸುತ್ತಿರುವೆನು. ಸಮಾಜದ ಬಂಧನವಿರದಿದ್ದರೆ ನಿನ್ನ ವಿನಂತಿಯನ್ನು ಮನ್ನಿಸುತ್ತಿದ್ದೆನು. ಆ ಬಂಧನದ ಸಲುವಾಗಿಯೆ ನಾನು ನಿನ್ನಲ್ಲಿ ನೆಲೆಗೊಂಡ ಪ್ರೀತಿಯನ್ನು ಬಲಾತ್ಕಾರದಿಂದ ರೂಪಾಂತರಗೊಳಿಸಲೆತ್ನಿಸಿದೆನು. ಆರಾಧ್ಯ ದೇವತೆಯೂ ನನ್ನ ಹೃದಯಸಿಂಹಾಸನದ ರಾಣಿಯೂ ಆದ ನಿನ್ನ ಮೂರ್ತಿಯು ಇದುವರೆಗೂ ನನ್ನ ಹೃದಯಮಂದಿರದಲ್ಲಿ ಮಸಮಸಕಾಗಿ ಕಾಣಬಹುದಾಗಿದೆ. ವ್ರಜ, ನಿನಗೆ ನನ್ನ ಮಾತಿನ ಸತ್ಯತೆಯನ್ನು ಪರೀಕ್ಷಿಸುವದಿದ್ದರೆ ಹೃದಯವನ್ನು ಭೇದಿಸಿ ನೋಡು.''

''ಸಮಾಜದ ಭಯಕ್ಕಾಗಿ ನಿಮಗೆ ಮನೋನಿಗ್ರಹ ಮಾಡುವ ಪ್ರಸಂಗ ಬಂದಿರುವದಲ್ಲವೆ?''

''ಅಹುದು.''

''ನಿರ್ಮಲವಾದ ಪ್ರೇಮಿಜನರ ಇಚ್ಛೆಗಳನ್ನು ನಿರೋಧಿಸುವ ಸಮಾಜವು ನಿಂದ್ಯವೆಂದು ಭಾವಿಸಿ, ಅದರ ಕಡೆಗೆ ದುರ್ಲಕ್ಷಿಸುವದೇ ಹಿತಕರವೆಂದು ನಾನು ಮುಂಚಿತವಾಗಿ ಹೇಳಿರುವೆನು. ನೀವು ನನ್ನ ಸಲುವಾಗಿ ಮನೋಧೈರ್ಯ ಹೊಂದಿರಿ.''

''ಸಮಾಜವು ನಿಂದ್ಯವೆಂದು ಭಾವಿಸಲಿಕ್ಕೆ ಬರುವಂತಿಲ್ಲ. ಅದು ಧರ್ಮಬಂಧನೆಗಳಿಗೊಳಗಾಗಿರುವದು. ಧರ್ಮಶಾಸ್ತ್ರದೃಷ್ಟಿಯಿಂದ ಯೋಗ್ಯವಾದ ಆಚರಣೆಯಿಂದ ಅದು ನಡೆಯುತ್ತದೆ.''

''ನೀವು ನನಗೆ ನಿಜವಾಗಿ ಆಶ್ರಯವೀಯುವದಿಲ್ಲವೆ?''

ದೈನ್ಯದಿಂದ ವ್ರಜಬಾಲೆಯು ಹೀಗೆ ನುಡಿದ ಮೇಲೆ ಗದಾಧರನು ಏನೂ ಮಾತನಾಡಲಿಲ್ಲ. ಅವನು ಅನೇಕ ಬಗೆಯ ವಿಚಾರಗಳಲ್ಲಿ

ಮಗ್ನನಾಗಿದ್ದನು. ವ್ರಜಬಾಲೆಯನ್ನು ವರಿಸಿದರೆ ಸಮಾಜದೃಷ್ಟಿಯಿಂದ ತಾನು ಅತಿಯಾಗಿ ನಿಂದ್ಯನೆಂದು ನಿಶ್ಚಯಿಸಲ್ಪಡುವೆನೆಂಬದು ಅವನಿಗೆ ಚನ್ನಾಗಿ ಗೊತ್ತಿತ್ತು. ಶಾಸ್ತ್ರಸಮ್ಮತವಿಲ್ಲದ ಕೃತಿಯನ್ನು ಮಾಡಿ ಸಮಾಜದಿಂದ ಬಹಿಷ್ಕೃತನಾಗಿರುವದಕ್ಕಿಂತ ಅವಿವಾಹಿತಸ್ಥಿತಿಯಲ್ಲುಳಿಯುವದೇ ಮೇಲೆಂದು ಅವನ ಮನೋದೇವತೆಯು ಹೇಳತೊಡಗಿತ್ತು. ಆಗ ಅವನು ತನ್ನ ನಿಶ್ಚಯವನ್ನು ಬಿಡಲಾರದೆ:—"ಪ್ರಣಯದೇವಿ, ನಾನು..........."

"ನಾಥರೆ, ಇನ್ನೊಮ್ಮೆ ಅದೇ ಮಾತಿನಿಂದ ಸಂಬೋಧಿಸಿರಿ; ಅನ್ನಿರಿ; ಇನ್ನೊಮ್ಮೆ ಪ್ರಣಯದೇವಿಯೆಂದೆನ್ನಿರಿ."

"ವ್ರಜಬಾಲೆ, ಈ ಸವಿಮಾತು ನಿರುಪಯುಕ್ತವಾದದ್ದೆಂದು ನಿನ್ನ ಅನುಭವಕ್ಕೆ ಬರಲಿಹುದಾಗಿದೆ."

"ಅದೇಕೆ ನಾಥಾ?"

"ನಾನು ನನ್ನ ನಿನ್ನ ಮನಸ್ಸಿನ ವಿರುದ್ಧವಾಗಿ ನಡೆಯಬೇಕಾಗಿದೆ."

"ಹಾಗೆ ಮಾಡಬಾರದು. ಶಾಪವೀಯದೆ ವರವ ನೀಡಿರಿ."

"ನಿನ್ನ ಪ್ರಯತ್ನವು ಫಲಕಾರಿಯಾಗಲಾರದು."

"ನೀವು ನನಗೆ ನಿಜವಾಗಿಯೂ ಆಶ್ರಯವೀಯುವದಿಲ್ಲವೆ?"

"ಇಲ್ಲ; ನಾನು ನಿನ್ನನ್ನು ಪತ್ನಿಯೆಂದು ಸ್ವೀಕರಿಸುವದಿಲ್ಲ. ನೀನು ನಿನ್ನ ಕಾಲಾಚಾಂದನ ಬಳಿಗೆ ಹೋಗಿ ಸುಖದಿಂದ ಸಂಸಾರ ಮಾಡು."

ಕಾಲಾಚಾಂದನ ಹೆಸರು ತೆಗೆದ ಕೂಡಲೆ ವ್ರಜಬಾಲೆಯ ಸಂತಾಪವು ಅನಿವಾರವಾಯಿತು. ತನ್ನ ಸೌಖ್ಯವನ್ನು ಸೂರೆ ಮಾಡಿದ ಕಾಲನಾದ ಕಾಲಾಚಾಂದನು ಅವಳಿಗೆ ಕಡು ಹಗೆಯಾಗಿ ತೋರಲಾರಂಭಿಸಿದ್ದನು. ಆಗ ಅವಳು ಕ್ರುದ್ಧಳಾಗಿ:—"ಗದಾಧರರೆ! ನನ್ನ ಆಶೆಯನ್ನು ಮಣ್ಣುಪಾಲು ಮಾಡಿದ ನರಪಿಶಾಚಿಯಾದ ಕಾಲಾಚಾಂದನ ಆಶ್ರಯ ಹೊಂದಲಿಕ್ಕೆ ನನಗೆ ಹೇಳುವಿರಾ? ಇಷ್ಟೆಲ್ಲ ಅನರ್ಥವು ಯಾರಿಂದ ಒದಗಿತೆಂಬದು ನಿಮಗೆ ಗೊತ್ತಿಲ್ಲವೆ? ನಾನಂತು ಅವನ ಮೇಲಿನ ಸೇಡು ತೀರಿಸಿಕೊಳ್ಳುವ ದೃಢಸಂಕಲ್ಪ ಮಾಡಿಕೊಂಡಿರುವೆನು. ಅವನು ನನ್ನಂತೆ

ನಿಮಗಾದರೂ ವೈರಿಯಾಗಿರುವನು. ನೀವು ಅವನ ಸೇಡು ತೀರಿಸಿ ಕೊಳ್ಳಲು ಪ್ರಯತ್ನಿಸಿದರೆ ನಿಮ್ಮಲ್ಲಿ ಮನುಷ್ಯತ್ವವಿರುವದೆಂದು ನಾನು ಭಾವಿಸುವೆನು. ಹೃದಯೇಶ್ವರರೆ, ನಾನಂತೂ ನಿಮ್ಮನ್ನು ನನ್ನ ಹೃದಯ ಸ್ಥಾನದಲ್ಲಿ ನೆಲೆಗೊಳಿಸಿರುವೆನು. ನಿಮ್ಮ ಆಧಾರ ದೊರೆಯದ ನನ್ನಿಂದ ಏನಾದರೂ ಪಾಪ-ಪುಣ್ಯದ ಕಾರ್ಯಗಳು ಘಟಿಸಿದರೆ,ಅವುಗಳಿಗೆ ನೀವೇ ಹೊಣೆಗಾರರೆಂದು ಕೈಯೆತ್ತಿ ಹೇಳುವೆನು. ಕಾಲಾಚಾಂದನ ಮೇಲಿನ ಸೇಡು ತೀರಿಸಿಕೊಳ್ಳುವ ಭಾವನೆಯು ನನ್ನಲ್ಲಿ ಉತ್ಪನ್ನವಾಗಿ ಕ್ಷಣ-ಕ್ಷಣಕ್ಕೆ ಬೆಳೆಯತೊಡಗಿರುವದು. ಈ ಜನ್ಮದಲ್ಲಿ ನಿಮಗೆ ಇದೇ ಕೊನೆಯ ಭೆಟ್ಟಿಯಾಗುವ ಸಂಭವವಾದರೂ ಇರುವದು.'' ಎಂದು ವ್ರಜಬಾಲೆಯು ನುಡಿದು, ಕೋಲ್ಮಿಂಚಿನಂತೆ ಅಲ್ಲಿಂದ ಮಾಯವಾದಳು.

———

## ಕಾಲಾಚಾಂದನು ಸ್ತ್ರೀಯ ದಾಸನಲ್ಲ!

ಕಾಲಾಚಾಂದನು ಸರಳಮನೋವೃತ್ತಿಯವನಿದ್ದನು. ಬಡವನಿರಲಿ, ಶ್ರೀಮಂತನಿರಲಿ, ಸರದಾರ-ಅಮೀರರಿರಲಿ, ದೊಡ್ಡ ಅಧಿಕಾರಸ್ಥನಾಗಿರಲಿ ಬೇಕಾದಂತಹ ಉಚ್ಚ-ನೀಚ ತರಗತಿಯ ಮನುಷ್ಯರಿದ್ದರೂ ನ್ಯಾಯ ವಿಚಾರಣೆ ಮಾಡುವಾಗ ಅವನ ಸದಸದ್ವಿವೇಕ ಬುದ್ಧಿಯು ಸಂಪೂರ್ಣ ವಾಗಿ ಜಾಗ್ರತವಿರುತ್ತಿತ್ತು. 'ನಿಸ್ಪೃಹಸ್ಯ ತೃಣಂ ಜಗತ್'' ಎಂಬಂತೆ ಕಾಲಾಚಾಂದನು ಯಾವ ಬಗೆಯ ಮುರವತ್ತುಗಳಿಗೊಳಗಾಗದೆ ತೀರ್ಪು ಹೇಳುತ್ತಿದ್ದನು. ಅವನ ಈ ವರ್ತನವು ಎಷ್ಟೋ ಜನ ಪ್ರತಿಷ್ಠಿತ ಮುಸಲಮಾನರಿಗೂ, ಅಧಿಕಾರಿ ವರ್ಗಕ್ಕೂ ಸಹನವಾಗುತ್ತಿರಲಿಲ್ಲ. ಮದಾಂಧನಾದ ಕಾಲಾಚಾಂದನನ್ನು ನಗರಪಾಲನ ಕೆಲಸದಿಂದ ತೆಗೆದು ಆ ಸ್ಥಳದಲ್ಲಿ ಒಬ್ಬ ಮುಸಲಮಾನನನ್ನು ನಿಯಮಿಸುವ ಬಗ್ಗೆ ಅವರು ಸಲಿ ಮನಶಹನಿಗೆ ವಿನಂತಿ ಮಾಡಿಕೊಂಡಿದ್ದರು. ಗುಣಗ್ರಾಹಿಯಾದ ಆ ಸುಲತಾನನು ಕಾಲಾಚಾಂದನ ನಿಜವಾದ ಯೋಗ್ಯತೆಯನ್ನು ತಿಳಿದದ್ದ ರಿಂದ ಚಾಡಿಕಾರರ ಮಾತುಗಳನ್ನು ದುರ್ಲಕ್ಷಿಸಿದ್ದನು.

ಕಾಲಾಚಾಂದನು ತನ್ನ ಓಲಗದಲ್ಲಿ ಕುಳಿತು ಅಪರಾಧಿಗಳ ನ್ಯಾಯ ವಿಚಾರಣೆಯ ಕಾರ್ಯವನ್ನು ನಡೆಯಿಸಿದ್ದನು. ಅಪರಾಧಿಗಳ ನ್ಯಾಯ ನಿರ್ಣಯ ಮಾಡುವಾಗ ಒಬ್ಬ ಹಿಂದು ಮನುಷ್ಯನ ನ್ಯಾಯವು ವಿಚಾರಣೆಗಾಗಿ ಬಂದಿತು. ಒಬ್ಬ ಅಮೀರನು ಆ ಮನುಷ್ಯನ ಮೇಲೆ ಕಳವಿನ ದೋಷಾರೋಪಣೆ ಮಾಡಿದ್ದನು. ಆ ಅಮೀರನಾದರೂ ಓಲಗದಲ್ಲಿ ಬಂದಿದ್ದನು. ಆಗ ಕಾಲಾಚಾಂದ ನಗರಪಾಲನು ಅಮೀರನನ್ನು ಕುರಿತು; —"ಇವನು ಯಾವ ಅಪರಾಧವನ್ನು ಮಾಡಿರುವನು?"

"ನನ್ನ ತೋಟದೊಳಗಿನ ಮಾವಿನ ಹಣ್ಣುಗಳನ್ನು ಕಳವು ಮಾಡಿರುವನು."

"ನೀವು ಯಾವ ಆಧಾರದಿಂದ ಇವನ ಮೇಲೆ ತಪ್ಪು ಹೊರಿಸಿರುವಿರಿ?"

"ಇವನು ಹಣ್ಣು ಹರಿಯುತ್ತಿರುವದನ್ನು ನಾನು ನೋಡಿದೆನು."

"ಮತ್ತೆ ಯಾರಾದರೂ ನೋಡಿರುವರೇನು?"

"ಇವನು ನನ್ನ ಸಾಕ್ಷಿಗಳನ್ನು ಒಡೆಯಿಸಿಕೊಂಡಿರುವನು."

"ಸಾಕ್ಷಿಗಳು ಒಡೆದ ಕಾರಣವೇನು?"

"ಅಪರಾಧಿಯು ಧನಿಕನಿರುವನು. ದುಡ್ಡಿನ ಬಲದಿಂದ ಇವನು ನನ್ನ ಸಾಕ್ಷಿಗಳೆಲ್ಲವನ್ನು ಒಡೆಯಿಸಿಕೊಂಡನು."

"ಇವನು ಧನಿಕನೆಂಬದು ನಿಮಗೆ ಗೊತ್ತಿರುವದೇನು?"

"ಓಹೋ! ನನಗೆ ಈ ಸಂಗತಿಯು ಚನ್ನಾಗಿ ತಿಳಿದಿರುವದು."

"ಇವನು ಯಾವ ವ್ಯಾಪಾರ ಮಾಡುತ್ತಿರುವನು?"

"ಚಿನ್ನ-ಬೆಳ್ಳಿಗಳ ವ್ಯಾಪಾರ ಮಾಡುತ್ತಾನೆ."

"ನೀವಾದರೂ ಅದೇ ಬಗೆಯ ಉದ್ಯೋಗ ಮಾಡುವಿರೆಂಬಂತೆ ತೋರುತ್ತದೆ."

"ನಿಮ್ಮ ತರ್ಕವು ನಿಜವಿರುವದು."

"ಇವನು ನಿಮ್ಮ ತೋಟದೊಳಗಿನ ಎಷ್ಟು ಹಣ್ಣುಗಳನ್ನು ಹರಿದನು?"

"ಹತ್ತಿಪ್ಪತ್ತು ಹಣ್ಣುಗಳನ್ನಾದರೂ ಒಯ್ದಿರಬಹುದೆಂದು ನನ್ನ ಅನುಮಾನವಿದೆ. ಇಷ್ಟೇ ಹಣ್ಣುಗಳನ್ನು ಒಯ್ದನೆಂದು ನಿಶ್ಚಿತವಾಗಿ ಹೇಳಲಿಕ್ಕೆ ಬರುವಂತಿಲ್ಲ."

"ಅದೇಕೆ?"

"ಇವನು ಮಧ್ಯರಾತ್ರಿಯ ವೇಳೆಯಲ್ಲಿ ಹಣ್ಣು ಹರಿದನು."

"ಆಗ ನೀವು ಎಲ್ಲಿದ್ದಿರಿ?"

"ನನ್ನ ಮನೆಯ ಮೇಲುಪ್ಪರಿಗೆಯಲ್ಲಿ."

"ನಿಮ್ಮ ಸಾಕ್ಷಿಗಳು?"

"ಅವರು ನನ್ನ ಬಳಿಯಲ್ಲಿಯೇ ಇದ್ದರು."

"ಮಧ್ಯರಾತ್ರಿಯ ವೇಳೆಯಲ್ಲಿ ಉಪ್ಪರಿಗೆಯ ಮೇಲಿದ್ದ ನಿಮಗೆ ಅಪರಾಧಿಯು ಹೇಗೆ ಕಂಡನು?"

"ಆಗ ಬೆಳದಿಂಗಳು ಬಿದ್ದಿತ್ತು."

"ನಿನ್ನೆ ಅಮಾವಾಸ್ಯೆಯಿದ್ದುದರಿಂದ ಚಂದ್ರನು ಮೂಡುವ ಸಂಭವವಿಲ್ಲ."

"ಅಮಾವಾಸ್ಯೆ-ಹುಣ್ಣಿವೆಗಳನ್ನು ನಾನರಿಯೆನು. ಚಂದ್ರನನ್ನಾದರೂ ನಾನು ಕಂಡಿಲ್ಲ. ಅಪರಾಧಿಯನ್ನು ಮಾತ್ರ ನಾನು ಚನ್ನಾಗಿ ಕಂಡಿರುವೆನು."

"ಅಮೀರರೆ, ಈ ಪ್ರಕರಣದಲ್ಲಿ ನೀವೇ ಅಪರಾಧಿಗಳಾದಿರಿ."

"ಅದೇಕೆ? ಕಳ್ಳನನ್ನು ತಂದ ನಾನು ಅಪರಾಧಿಯಾಗುವೆನೆ? ಕಳವಿನ ಸಂಗತಿಯನ್ನು ನಾನು ವಜೀರಸಾಹೇಬರಿಗೆ ಹೇಳಿರುವೆನು. ಅಪರಾಧಿಯನ್ನು ಶೂಲಕ್ಕೆ ಹಾಕುವದಕ್ಕಾಗಿ ಅವರು ನಿಮಗೆ ಸೂಚನೆ ಮಾಡಿರುವರು."

"ಅಮೀರರೆ!" ನಗರಪಾಲನು ನ್ಯಾಯದ ತೀರ್ಪು ಹೇಳತೊಡಗಿದನು! "ನಿನ್ನೆ ಅಮಾವಾಸ್ಯೆಯಿದ್ದುದರಿಂದ ಬೆಳದಿಂಗಳು ಬೀಳುವದು ತೀರ ಅಸಂಭಾವ್ಯವು. ರಾತ್ರಿಯ ವೇಳೆಯಲ್ಲಿ ಉಪ್ಪರಿಗೆಯ ಮೇಲಿದ್ದ ನಿಮಗೆ ಗಿಡದ ಮೇಲಿನವು ಸುಷ್ಪಷ್ಟವು ಕಾಣುವದು ಶಕ್ಯವಿಲ್ಲ. ಅಪರಾಧಿಯು

ಧನಿಕನಿರುವನೆಂದು ನೀವೇ ಒಪ್ಪಿರುವಿರಿ. ಚಿನ್ನ-ಬೆಳ್ಳಿಗಳ ವ್ಯಾಪಾರ ಮಾಡುವವನಾದ ಇವನ ಸಾಂಪತ್ತಿಕ ಸ್ಥಿತಿಯು ಚನ್ನಾಗಿರಲಿಕ್ಕೆ ಬೇಕು. ಅಂಥವನು ಹತ್ತಿಪ್ಪತ್ತು ಹಣ್ಣುಗಳನ್ನು ಕದಿಯುವದಕ್ಕಾಗಿ ಮಧ್ಯರಾತ್ರಿಯಲ್ಲಿ ನಿಮ್ಮ ತೋಟಕ್ಕೆ ಬಂದ ಸಂಗತಿಯು ಏನೂ ಹುರುಳಿಲ್ಲದ್ದಾಗಿದೆ. ಒಂದೇ ವ್ಯವಸಾಯುದವರಾದ ನಿಮ್ಮಲ್ಲಿ ವೈಮನಸ್ಸು ಹುಟ್ಟಿರುವದ. ಈ ವೈಮನಸ್ಸಿನ ಮೂಲಕವಾಗಿ ನೀವು ಈ ನಿರಪರಾಧಿಯ ಮೇಲೆ ಸುಳ್ಳು ದೋಷವನ್ನಾರೋಪಿಸಿರುವಿರಿ. ನೀವು ನಿಮ್ಮ ಮಾತನ್ನು ಬಲಪಡಿಸಿಕೊಳ್ಳುವದಕ್ಕಾಗಿ ವಜೀರರ ಸಹಾನುಭೂತಿಯನ್ನು ದೊರಕಿಸಿಕೊಂಡಿರುವಿರಿ. ಸುಳ್ಳು ಪ್ರಕರಣವನ್ನು ಉಪಸ್ಥಿತ ಮಾಡಿದ್ದಕ್ಕಾಗಿ ನಿಮ್ಮ ಮೇಲೆ ಕೆಲಸ ನಡೆಯಿಸಬೇಕಾಗಿತ್ತು; ಆದರೆ ನೀವು ದೊಡ್ಡ ಮನುಷ್ಯರೆಂದು ತಿಳಿಯಲ್ಪಟ್ಟಿರುವದರಿಂದ ಇದೊಂದು ಸಾರೆ ನಿಮಗೆ ಕ್ಷಮೆಯು ದೊರೆತಿರುತ್ತದೆ. ಇದೇ ನನ್ನ ತೀರ್ಪು!'

ನಗರಪಾಲನ ತೀರ್ಪಿನಿಂದ ಅಮೀರನು ಸಂತಪ್ತನಾದನು. ನಗರಪಾಲನು ಹಿಂದುವಿದ್ದುದರಿಂದ ಹಿಂದು ಅಪರಾಧಿಯನ್ನು ಕ್ಷಮಿಸಿದನೆಂದು ಅವನು ತಿಳಿದನು. ತಾನು ಪ್ರತಿಷ್ಠಿತ ಮನುಷ್ಯನಿದ್ದರೂ ತನ್ನ ಅಪಮಾನಗೊಳಿಸಿದ್ದರಿಂದ ಅವನು ನಗರ ಪಾಲನನ್ನು ಕೆಟ್ಟಕಣ್ಣಿನಿಂದ ನೋಡತೊಡಗಿದನು. ಸರದಾರ ಮನೆತನದವನೂ ಶ್ರೀಮಂತನೂ ಆದ ತನ್ನ ಮಾನಖಂಡನೆ ಮಾಡಿದ್ದಕ್ಕಾಗಿ ನವಾಬನೆದುರಿನಲ್ಲಿ ದೂರು ಹೇಳಬೇಕೆಂದು ಅವನು ನಿರ್ಧರಿಸಿಕೊಂಡು ಓಲಗದಿಂದ ಹೊರಬಿದ್ದನು. ಅನಂತರದಲ್ಲಿ ಸೇವಕರು ಮತ್ತೊಬ್ಬ ಅಪರಾಧಿಯನ್ನು ತಂದು ನಿಲ್ಲಿಸಿದರು. ನಗರಪಾಲನು ಆ ಅಪರಾಧಿಯನ್ನು ಕುರಿತು:—"ನೀನು ಯಾರು?"

"ನಿಮ್ಮ ಸೆರೆಯಾಳು."

"ಇದರ ಹೊರತು ನಿನಗೆ ಏನೂ ಗೊತ್ತಿಲ್ಲವೇನು?"

' ಗೊತ್ತಿರದೇನು ಮಾಡೀತು? ಈಗ ಅದನ್ನು ಕೇಳುವ-ಹೇಳುವ ಕಾರಣವಿಲ್ಲ."

"ನೀವು ಎಲ್ಲಿರುವಿರಿ?"

"ನಗರಪಾಲರ ಓಲಗದಲ್ಲಿ."

"ಇದಕ್ಕಿಂತ ಮುಂಚಿತವಾಗಿ?"

"ಕಾರಾಗೃಹದಲ್ಲಿ."

"ಕಾರಾಗ್ರಹದಲ್ಲಿ ಬರುವದಕ್ಕಿಂತ ಮುಂಚೆ?"

"ನವಾಬಜಾದಿಯು ಉದ್ಯಾನದಲ್ಲಿ."

"ಸುಲತಾನ ಕನ್ಯೆಯು ಉದ್ಯಾನದಲ್ಲಿ ಬಂದ ಕಾರಣವೇನು?"

"ಉಪವರಳಾದ ಕನ್ಯೆಯು ಒಳಿಗೆ ವರನು ಯಾವ ಕಾರಣದಿಂದ ಬರುವನೋ ಅದೇ ಕಾರಣ."

"ನೀವು ಸರಳತನದಿಂದ ಸಂಗತಿಗಳನ್ನು ಹೇಳುವದಿಲ್ಲವೆಂಬಂತೆ ತೋರುವದು."

"ನೀವು ಆ ಸಂಗತಿಗಳನ್ನು ತೆಗೆದುಕೊಂಡು ಮಾಡುವದೇನು?"

"ಅಪರಾಧದ ತೀರ್ಪು ಹೇಳಬೇಕಾದರೆ ಅದರ ವಿಷಯವೆಲ್ಲವು ಚನ್ನಾಗಿ ತಿಳಿಯಬೇಕಾಗುವದು."

"ಮಹತ್ತರವಾದ ಅಪರಾಧ ಮಾಡಿದವರಿಗೆ ಯಾವ ಶಿಕ್ಷೆಯು ವಿಧಿಸಲ್ಪಡುವದು?"

ಮರಣ ದಂಡನೆಯು."

"ಬಹಳೇ ಲೇಸಾಯಿತು. ನಾನು ದೊಡ್ಡ ಅಪರಾಧ ಮಾಡಿರುವೆನು. ನನಗೆ ಮೃತ್ಯುವಿನ ಶಿಕ್ಷೆ ವಿಧಿಸಿರಿ."

"ನವಾಬ ಕನ್ಯೆಯ ಪ್ರಾಪ್ತಿಗಾಗಿ ಯತ್ನಿಸಿದ ನೀವು ದೊಡ್ಡ ಮನೆತನದವರಿರುವಿರೆಂಬದು ಸಿದ್ಧವಾಗುತ್ತದೆ."

"ನಾನು ದೊಡ್ಡ ಮನೆತನದವನೆಂಬದಕ್ಕೆ ಮತ್ತೇನಾದರೂ ನಿಮಗೆ ಆಧಾರಗಳಿರುವವೇನು?"

"ನಿಮ್ಮ ನಿರ್ಭಯತೆ ಹಾಗು ತೇಜಸ್ವಿತೆಗಳು ನಿಮ್ಮ ಯೋಗ್ಯತೆಯನ್ನು ಸ್ಪಷ್ಟದೋರುತ್ತವೆ."

"ವಸ್ತುಸ್ಥಿತಿಯು ಹೇಗಾದರೂ ಇರಲೊಲ್ಲದೇಕೆ. ನನ್ನ ಅಪರಾಧಕೆ. ಸರಿಯಾದ ಮರಣ ದಂಡನೆಯನ್ನು ವಿಧಿಸಿರಿ."

"ತಾರುಣ್ಯದಲ್ಲಿ ಮನುಷ್ಯನು ವಿಕಾರವಶನಾಗುವದು ಸ್ವಾಭಾವಿಕವು. ಆದರೂ ವಿವೇಕವನ್ನು ತಳೆದು ಸನ್ಮಾರ್ಗಿಯಾಗಲಿಕ್ಕೆ ಯತ್ನಿಸಿದರೆ ಅವನು ದೊಡ್ಡಿಸ್ತಿಕೆಗೆ ಬರುವನು ನೀವು ಭಾವನಾ ವಶರಾಗಿ ಬಂದಿದ್ದರೂ ನಿಮ್ಮಿಂದ ಹೇಳಿಕೊಳ್ಳುವಂತಹ ಅಪರಾಧವು ಘಟಿಸಿಲ್ಲ. ನಿಮ್ಮನ್ನು ನಿರ್ದೋಷಿಗಳೆಂದು ನಾನು ನಿರ್ಣಯಿಸಿರುವೆನು. ಇನ್ನುಮೇಲೆ ಈ ಬಗೆಯ ಅಪರಾಧಗಳು ಘಟಿಸಿದರೆ ಕ್ಷಮೆಯಯು ದೊರೆಯಲಾರದು."

"ಈ ಕಟ್ಟಾ ಇಸ್ಲಾಮೀಯನು ಎಂದೂ ಕ್ಷಮಾಪೇಕ್ಷೆ ಮಾಡುವದಿಲ್ಲ." ಎಂದು ಆ ತರುಣನು ನುಡಿಯುತ್ತಿರಲು, ನವಾಬ ಕನ್ಯೆಯ ಸಹಚರಿಯು ಓಲಗವನ್ನು ಪ್ರವೇಶಿಸಿದಳು. ಅವಳನ್ನು ನೋಡಿದ ಕೂಡಲೆ ನಗರಪಾಲನು:—"ಅಮ್ಮಾ ನೀನು ಯಾರು?"

"ನಾನು ಶಹಜಾದಿಯವರ ದಾಸಿಯು." ಎಂದು ಶಹಾಜಾದಿಯ ಸಹಚರಿಯಾದ ಮೈನೆಯು ಹೇಳಿದಳು.

"ಓಲಗದಲ್ಲಿ ಶಹಾಜಾದಿಯವರ ದಾಸಿಯ ಕೆಲಸವೇನಿತ್ತು?"

"ಅವರ ಆಜ್ಞೆಯನ್ನು ತಿಳಿಸುವದಕ್ಕಾಗಿ ಬಂದಿರುವೆನು."

"ಏನು, ಶಹಾಜಾದಿಯವರ ಆಜ್ಞೆಯನ್ನು ತಿಳಿಸುವದಕ್ಕಾಗಿ ಬಂದಿರುವೆಯಾ?"

"ಅಹುದು."

"ನನಗೆ ಯಾರ ಆಜ್ಞೆಯ ಆವಶ್ಯಕತೆಯೂ ಇಲ್ಲ."

"ಈ ಅಪರಾಧಿಯು ನೀಚ ಮನೋವೃತ್ತಿಯವನಿರುವದರಿಂದ ಇವನಿಗೆ ಮೃತ್ಯುವಿನ ಶಿಕ್ಷೆ ವಿಧಿಸುವದಕ್ಕಾಗಿ ನವಾಬಜಾದಿಯವರು ಕಟ್ಟಪ್ಪಣೆ ಮಾಡಿರುವರು."

"ರಾಜಪುತ್ರಿಯವರು ನನಗೆ-ಈ ಕಾಲಾಚಾಂದ ನಗರಪಾಲನಿಗೆ-ಕಟ್ಟಪ್ಪಣೆ ಮಾಡಿರುವರೆ?"

"ನಿಸ್ಸಂಶಯ."

ಮೈನೆಯ ಅಧಿಕಾರದ್ಯೋತಕವಾದ ಮಾತಿನಿಂದ ಕಾಲಾಚಾಂದನು ಸಂತಪ್ತನಾದನು. ಅವನು ಆ ದಾಸಿಗೆ ಏನೋ ಹೇಳತಕ್ಕವನಿದ್ದನು;

ಅಷ್ಟರಲ್ಲಿ ಅಪರಾಧಿಯು ಮೈನೆಯನ್ನು ಕುರಿತು:—"ನಿನ್ನ ಒಡತಿಯ ಲಾವಣ್ಯಕ್ಕೆ ಮುಗ್ಧನಾಗಿ ನಾನು ಅವಳನ್ನು ಪ್ರೀತಿಸುತ್ತಿದ್ದೆನು. ನನ್ನಂತೆ ಅವಳೂ ಪ್ರಣಯಪ್ರಳ್ಳವಳಿರುವಳೆಂದು ಇದು ವರೆಗೆ ನಾನು ಭಾವಿಸಿಕೊಂಡಿದ್ದೆನು. ಅಂತೆಯೆ ಹಿಂದುಮುಂದಿನ ವಿಚಾರ ಮಾಡದೆ ಅವಳ ಉದ್ಯಾನವನ್ನು ಪ್ರವೇಶಿಸಿದೆನು. ಅವಳ ಹೃದಯವು ಎಷ್ಟು ಕಠೋರವಿರುವದೆಂಬದನ್ನು ನಾನು ಚನ್ನಾಗಿ ಅರಿತುಕೊಂಡೆನು. ಪಾಷಾಣ ಹೃದಯದ ಆ ಪಿಶಾಚಿಯಲ್ಲಿ ಈಗ ನನ್ನ ಪ್ರೇಮವಿಲ್ಲ. ಈ ಸಂಗತಿಯನ್ನು ನಿನ್ನ ಒಡೆಯಳಿಗೆ ತಿಳಿಸು."

"ನೋಡಿದಿರಾ, ಈ ಅಪರಾಧಿಯ ಮದಾಂಧತೆಯನ್ನು!"

"ಅವನು ಹೇಗಿದ್ದ ಗೊಡವೆಯು ನನಗೇಕೆ?"

"ನೀವು ಇವನಿಗೆ ಶಿಕ್ಷೆ ವಿಧಿಸುವದಿಲ್ಲವೆ?"

"ಇಲ್ಲ"

"ಶಹಾಜಾದಿಯವರ ಕಿವಿಯ ಮೇಲೆ ಎಲ್ಲ ಸಂಗತಿಯನ್ನು ಹಾಕುವ ವರೆಗೆ ಇವನನ್ನು ಕಾರಾಗೃಹದಲ್ಲಿರಿಸಿರಿ."

"ಅವನು ನಿರ್ದೋಷಿಯಿರುವದರಿಂದ ನಾನು ಅವನನ್ನು ಬಿಟ್ಟು ಬಿಟ್ಟಿರುವೆನು."

"ನೀವು ಶಹಾಜಾದಿಯವರ ಆಜ್ಞೆ ಮೀರಿ ಇವನ ಬಿಡುಗಡೆ ಮಾಡುವಿರಾ? ಶಹಾಜಾದಿಯವರ ಆಜ್ಞೆಯೇ ರಾಜಾಜ್ಞೆಯೆಂದು ತಿಳಿಯಿರಿ."

"ಹೆಚ್ಚು ಮಾತನಾಡದೆ ಹೊರಟು ಹೋಗು. ಅನ್ಯಾಯದ ರಾಜಾಜ್ಞೆಯನ್ನು ನಾನು ಎಂದೂ ಮನ್ನಿಸಲಾರೆನು."

"ನೀವು ಶಹಾಜಾದಿಯವರನ್ನು ಚನ್ನಾಗಿ ಅಪಮಾನಗೊಳಿಸಿದಂತಾಯಿತು. ನಾನು ಎಲ್ಲ ಸಂಗತಿಗಳನ್ನು ಅವರ ಕಿವಿಯ ಮೇಲೆ ಹಾಕದೆ ಬಿಡುವವಳಲ್ಲ."

"ಅದರೊಡನೆ ಮತ್ತೊಂದು ಸಂಗತಿಯನ್ನಾದರೂ ನೀನು ನಿನ್ನ ಒಡತಿಗೆ ತಿಳಿಸು."

"ಅದೇನು?"

"ಕಾಲಾಚಾಂದನು ಸ್ತ್ರೀಯ ದಾಸನಲ್ಲವೆಂದು ನವಾಬಜಾದಿಗೆ ಹೇಳು."

ನಗರಪಾಲನು ಹೀಗೆ ನುಡಿದ ಕೂಡಿದ ವ್ಹೈನೆಯು ಸಂತಾಪ ಗೊಂಡು ಕಾಲು ಅಪ್ಪಳಿಸುತ್ತ ಅಲ್ಲಿಂದ ಹೊರಟು ಹೋದಳು. ನಿದೋಷಿಯೆಂದು ತೀರ್ಪು ಹೊಂದಿದ ಮುಸಲಮಾನ ತರುಣನು ಕಾಲಾ ಚಾಂದನನ್ನು ಸಹಾನುಭೂತಿಯಿಂದ ನೋಡತೊಡಗಿದನು ಸಂತುಷ್ಟನಾದ ಅವನು ಕಾಲಾಚಾಂದನನ್ನು ಕುರಿತು:—"ನಗರಪಾಲರೆ, ಹಿಂದುಗಳೆಂದರೆ ನೀಚ ಹೃದಯದವರೆಂದು ಇದು ವರೆಗೂ ನನ್ನ ಭಾವನೆಯಿತ್ತು. ಇಂದಿನ ನಿಮ್ಮ ನಿಸ್ಪೃಹ ವರ್ತನದಿಂದ ಹಿಂದುಗಳ ಯೋಗ್ಯತೆಯು ಎಷ್ಟು ಉಚ್ಚ ವಾದದ್ದಿರುವದೆಂಬದು ನನ್ನ ಅನುಭವಕ್ಕೆ ಬಂತು."

ಯುವನ ತರುಣನು ಕಾಲಾಚಾಂದನಿಗೆ ನಮಸ್ಕಾರ ಮಾಡಿ ಅಲ್ಲಿಂದ ಹೊರಟು ಹೋದನು. ಅನಂತರದಲ್ಲಿ ಓಲಗದ ವಿಸರ್ಜನೆಯಾಯಿತು. ನಗರಪಾಲನು ತನ್ನ ಮನೆಗೆ ಹೊರಟು ಹೋದನು.

ನಗರಪಾಲನ ಓಲಗದಿಂದ ಬಂದ ಕೂಡಲೆ ವ್ಹೈನೆಯು ನವಾಬ ಕನ್ಯೆಗೆ ಭೆಟ್ಟಿಯಾಗಿ ಓಲಗದಲ್ಲಿ ನಡೆದ ಸಂಗತಿಗಳನ್ನು ಉಪ್ಪು-ಕಾರ ಹಚ್ಚಿ ಹೇಳಿದಳು. ಯಃಕಶ್ಚಿತ್ ನಗರಪಾಲನು ರಾಜಪುತ್ರಿಯಾದ ತನ್ನ ಆಜ್ಞೆಯನ್ನು ಉಲ್ಲಂಘಿಸಿ ಒಳಿತಾಗಿ ಅಪಮಾನ ಮಾಡಿದನೆಂದು ಶಹಾ ಜಾದಿಯು ಅವನ ಮೇಲೆ ರೋಷಗೊಂಡಳು. ಉನ್ಮತ್ತನಾದ ನಗರ ಪಾಲನಿಗೆ ಯೋಗ್ಯ ಶಾಸನವನ್ನು ವಿಧಿಸಬೇಕೆಂದು ಕ್ರೋಧಾಂಧಳಾದ ಶಹಾಜಾದಿಯು ನಿಶ್ಚಯಿಸಿಕೊಂಡಳು. ಕೂಡಲೆ ಅವಳು ತನ್ನ ತಂದೆ ಯನ್ನು ಕರೆಯಿಸಿಕೊಂಡು:—"ಅಪ್ಪಾ, ನಿಮ್ಮ ಕನ್ಯೆಯ ಅಂತಃಪುರದಲ್ಲಿ ಕಾಮಾಂಧನಾದ ತರುಣನೊಬ್ಬನು ಆಜ್ಞೆಯಿಲ್ಲದೆ ಬಂದು ಮಾನಹಾನಿ ಕಾರಕವಾದ ಮಾತುಗಳನ್ನಾಡತೊಡಗಿದರೆ, ನೀವು ಅವನಿಗೆ ಯಾವ ಶಿಕ್ಷೆ ಯನ್ನು ವಿಧಿಸುವಿರಿ?"

"ಅವನನ್ನು ಒಮ್ಮೆಲೆ ಕಡಿದು ಚಲ್ಲುವೆನು." ಎಂದು ಸುಲತಾ ನನು ಆವೇಶದಿಂದ ನುಡಿದು:—"ದುಲಾರಿ, ಈಗ ಅಂತಹ ಪ್ರಸಂಗ

ವೇನು ಘಟಿಸಿತು?''

"ಎಲ್ಲ ಸಂಗತಿಗಳನ್ನು ತಿಳಿಸುವೆನು.'' ಎಂದು ನವಾಬ ಕನ್ಯೆಯಾದ ದುಲಾರಿಯು ನುಡಿದು:—''ಯಾವನೊಬ್ಬನು ನಿಮ್ಮ ಈ ಮಮತೆಯ ಮಗಳ ಆಜ್ಞೆಯನ್ನು ಉಲ್ಲಂಘಿಸಿದರೆ ಅವನಿಗೆ ಯಾವ ದಂಡನೆ ಮಾಡುವಿರಿ?''

"ನನ್ನ ಪ್ರೀತಿಯ ಮಗಳು ಹೇಳಿದ ಶಿಕ್ಷೆಯನ್ನು ವಿಧಿಸುವೆನು.'

"ಯಾವನೋ ಒಬ್ಬ ನೀಚ ತರುಣನು ನನ್ನ ಅಂತಃಪುರವನ್ನು ಪ್ರವೇಶಿಸಿ ನನ್ನ ಶೀಲಕ್ಕೆ ಕುಂದು ತರುವ ಮಾತುಗಳನ್ನಾಡಿದನು.''

"ಏನು? ನವಾಬಪುತ್ರಿಯಾದ ನಿನಗೆ ಅಪಮಾನಕಾರಕ ಮಾತುಗಳನ್ನಾಡಿದನೆ? ಈಗ ಅವನು ಎಲ್ಲಿರುವನು? ಅವನ ಕೊಲೆ ಮಾಡಿಸಿ ಮುಂದಿನ ಕೆಲಸ ಮಾಡುವೆನು.''

"ಈಗ ಅವನು ಕೈಗೆ ಸಿಗುವದಿಲ್ಲ'' ಎಂದು ದುಲಾರಿಯು ಹೇಳಿ: "ಆ ನೀಚ ತರುಣನ ಶಿರಚ್ಛೇದ ಮಾಡಬೇಕೆಂದು ನ್ಯಾಯಾಧೀಶನಿಗೆ ನಿರೋಪ ಕಳುಹಿಸಿದೆನು ಆ ಉನ್ಮತ್ತನಾದ ನ್ಯಾಯಾಧೀಶನು ನನ್ನ ಆಜ್ಞೆಯನ್ನು ಉಲ್ಲಂಘಿಸಿ ಅಪರಾಧಿಯನ್ನು ಬಿಟ್ಟುಕೊಟ್ಟನು. ನನ್ನ ಆಜ್ಞೆಯನ್ನು ಮೀರಿ ನನಗೆ ಅಪಮಾನ ಮಾಡಿದ ನ್ಯಾಯಾಧೀಶನಿಗೆ ನೀವು ಯಾವ ಶಿಕ್ಷೆಯನ್ನು ವಿಧಿಸಬೇಕೆನ್ನುವಿರಿ?''

"ನೀನು ಹೇಳಿದ ಶಿಕ್ಷೆಯನ್ನು ವಿಧಿಸುವೆನು.''

"ಅವನನ್ನು ಕೆಲಸದಿಂದ ತೆಗೆದು ಹಾಕಿರಿ.''

"ನಿನಗೆ ಅಪಮಾನ ಮಾಡಿದವನು ಯಾರು?''

"ನೀವು ಯಾವನಿಗೆ ಆಶ್ರಯವಿತ್ತು ದೊಡ್ಡ ಅಧಿಕಾರವನ್ನು ಕೊಟ್ಟಿರೋ, ಅವನೇ ನನ್ನನ್ನು ಅಪಮಾನ ಮಾಡಿದನು. ಕಾಫರನಾದ ಆ ನಗರಪಾಲನನ್ನು ರಾಜಧಾನಿಯಿಂದ ತಳ್ಳಿಬಿಡಿರಿ.''

ದುಲಾರಿಯ ಮಾತುಗಳನ್ನು ಕೇಳಿ ನವಾಬನು ಸೋಜಿಗಗೊಂಡನು. ತನ್ನ ಪ್ರೀತಿಯವನಾದ ನಗರಪಾಲನಿಂದ ಇಂತಹ ಕೃತಿಯು ಘಟಿಸಿರಲಿಕ್ಕಿಲ್ಲವೆಂದು ಅವನು ತಿಳಿದನು. ಮಗಳ ಕಡೆಗೆ ಲಕ್ಷ್ಯವು ಹೋಗಲು,

ಪರಕ್ಷಣದಲ್ಲಿಯೆ ಅವನ ಆ ವಿಚಾರವು ಬೇರೆಯಾಯಿತು. ದುಲಾರಿಯು ಕಾರಣವಿಲ್ಲದೆ ಅವನ ಮೇಲೆ ದೂರು ಹೇಳಲಾರಳೆಂದು ಅವನು ಭಾವಿಸಿದನು. ನಗರಪಾಲನು ಮದಾಂಧನೂ ಅವಿಚಾರಿಯೂ ಇರುವನೆಂದು ಆ ಕ್ಷಣದಲ್ಲಿ ಅವನ ಮನಸ್ಸಿನ ನಂಬಿಗೆಯಾಯಿತು. ಎಷ್ಟೋ ಅಮೀರರೂ, ಸರದಾರರೂ, ಅಧಿಕಾರಿಗಳೂ ರಾಜಧಾನಿಯೊಳಗಿನ ಪ್ರತಿಷ್ಠಿತ ಜನರೂ ನಗರಪಾಲನ ಮೇಲೆ ದೋಷಾರೋಪಣೆ ಮಾಡಿದ್ದರು; ಅನೇಕ ಪ್ರಕಾರದ ದೂರು ಹೇಳಿದ್ದರು. ನವಾಬನು ಇಷ್ಟು ದಿವಸಗಳ ವರೆಗೆ ಅವರ ಮಾತುಗಳನ್ನು ಉಪೇಕ್ಷಿಸಿದ್ದನು. ಇಂದಿನ ಪ್ರಸಂಗದಿಂದ ಮಾತ್ರ ಅವನು ನಗರಪಾಲನ ಮೇಲೆ ಕ್ಷೋಭೆಗೊಂಡನು. ಆಗ ಅವನು ದುಲಾರಿಯನ್ನು ಕುರಿತು —"ಕುಮಾರಿ, ನಾನು ನಗರಪಾಲನಿಗೆ ಚನ್ನಾಗಿ ಸಿಟ್ಟು ಮಾಡುವೆನು. ಈ ವಿಷಯದಲ್ಲಿ ನಿಶ್ಚಿಂತಳಾಗಿರು.

"ಅಪ್ಪಾ, ನವಾಬ ಕನ್ಯೆಯು ಅಪಮಾನ ಮಾಡಿದ ಕಾಫರನಿಗೆ ಇಷ್ಟೇ ಶಿಕ್ಷೆಯೇನು? ನೀವು ನಿಮ್ಮ ವಚನದ ಮೇರೆಗೆ ನಾನು ಹೇಳಿದ ಶಿಕ್ಷೆಯನ್ನು ಅವನಿಗೆ ವಿಧಿಸಲಿಕ್ಕೆ ಬೇಕು."

"ಯಾವ ಶಿಕ್ಷೆಯನ್ನು ವಿಧಿಸಬೇಕೆಂದು ನೀನು ಯೋಚಿಸಿರುವೆ? '

"ನಾನು ಮುಂಚಿತವಾಗಿಯೆ ಹೇಳಿರುವೆನು."

"ಅವನನ್ನು ಕೆಲಸದಿಂದ ತೆಗೆಯಬೇಕೆಂದು ನಿನ್ನ ಮನಸ್ಸಿನಲ್ಲಿರುವದೇನು?"

"ಅಹುದು."

"ದುಲಾರಿ, ನಿನಗೆ ಆ ನಗರಪಾಲನು ಅಪಮಾನ ಮಾಡಿದ್ದರಿಂದ ನನ್ನಲ್ಲಿ ಸಂತಾಪವು ಉತ್ಪನ್ನವಾಗಿರುವದು. ಅವನು ಎಷ್ಟೇ ಮದಾಂಧತೆಯಿಂದ ನಡೆದಿದ್ದರೂ ಅವನ ಅಪರಾಧವು ಕ್ಷಮ್ಯವಿರುವದು. ಅವನ ತಂದೆಯಾದ ನಯನಚಾಂದನು ನಮ್ಮ ಪೂರ್ವಜರನ್ನು ಋಣಿಯಾಗಿ ಮಾಡಿಕೊಂಡಿರುವನು. ಕಾಲಾಚಾಂದ ನಗರಪಾಲನಾದರೂ ಅತ್ಯಂತ ಸ್ವಾಮಿನಿಷ್ಠನಿರುವನು. ಅವನು ಪ್ರತಿಷ್ಠಿತ ಮನೆತನದವನಿರುವನು. ದೊಡ್ಡ-ದೊಡ್ಡ ಬಾದಶಹರೊಡನೆ ಹಾಗು ನವಾಬರೊಡನೆ ಶರೀರ ಸಂಬಂಧ

ಮಾಡುವಂತಹ ಉಚ್ಚ ಕುಲದಲ್ಲಿ ಅವನು ಜನಿಸಿರುವನು. ಅಂಥವನನ್ನು ಒಮ್ಮೆಲೆ ಕೆಲಸದಿಂದ ತೆಗೆಯುವದು ಯೋಗ್ಯವಲ್ಲ. ನಾನು ಅವನಿಗೆ ಚನ್ನಾಗಿ ಸಿಟ್ಟು ಮಾಡಿ ಹೇಳುತ್ತೇನೆ. ಈ ಸಾರೆ ಇಷ್ಟೇ ಶಿಕ್ಷೆಯು ಸಾಕು.''

''ಅವನ ದೊಡ್ಡಿಸ್ತಿಕೆಯ ಕಡೆಗೆ ಲಕ್ಷ್ಯಗೊಟ್ಟು ನನ್ನ ಅಪಮಾನವನ್ನು ಸಹಿಸಿಕೊಳ್ಳುವಿರಾ? ನೀವು ಅವನನ್ನು ಗಡೀಪಾರ ಮಾಡಲಿಕ್ಕೇ ಬೇಕು.''

''ಒಳ್ಳೇದು. ನಗರಪಾಲನನ್ನು ಕರೆಯಿಸಿ ವಿಚಾರಿಸುವೆನು.''

ಸವಾಟನು ನಗರಪಾಲನನ್ನು ಕರೆಯುವದಕ್ಕಾಗಿ ಸೇವಕನನ್ನು ಕಳುಹಿಸಿದನು. ಆಗ ದಲಾರಿಯು ಅಪರಾಧಿಯನ್ನು ಕ್ಷಮಿಸಬಾರದೆಂದು ಹೇಳಿ, ಅಂತಃಪುರದಲ್ಲಿದ್ದ ಸಮೀಪದ ಒಂದು ಕೋಣೆಯಲ್ಲಿ ಹೋದಳು. ಮುಂದೆ ಸ್ವಲ್ಪ ವೇಳೆಯ ಮೇಲೆ ಕಾಲಾಚಾಂದನು ಅಲ್ಲಿಗೆ ಬಂದು ಸುಲತಾನನಿಗೆ ಮುಜುರೆ ಮಾಡಿ ನಿಂತುಕೊಂಡನು. ಆಗ ಸುಲತಾನನು ಅವನನ್ನು ಕುರಿತು:-''ಯಾವನೋ ಒಬ್ಬ ಮುಸಲಮಾನ ತರುಣನು ಶಹಾಜಾದಿಯ ಅಂತಃಪುರವನ್ನು ಪ್ರವೇಶಿಸಿದ್ದನೆಂದು ಕೇಳುತ್ತೇನೆ. ಈ ಸಂಗತಿಯು ನಿಜವೊ?''

''ಅವನು ಅಂತಃಪುರವನ್ನು ಪ್ರವೇಶಿಸಿದ್ದಿಲ್ಲ; ಉದ್ಯಾನದಲ್ಲಿ ಹೋಗಿದ್ದನೆಂದು ನನಗೆ ತಿಳಿದಿರುವದು.''

''ಇಷ್ಟೇಯೋ?''

''ಇಷ್ಟೇ. ಆ ತರುಣನು ಪರದೇಶಸ್ಥನಾದ್ದರಿಂದ ದಾರಿ ತಪ್ಪಿಯಾದರೂ ಅಲ್ಲಿಗೆ ಹೋಗಿರಬಹುದೆಂದು ನನ್ನ ಅನುಮಾನವಿದೆ.''

'''ನೀನು ಅವನಿಗೆ ಯಾವ ಶಿಕ್ಷೆಯನ್ನು ವಿಧಿಸಿದೆ?''

''ನಿರಪರಾಧಿಗೆ ಶಿಕ್ಷೆ ವಿಧಿಸುವ ಅಧಿಕಾರವು ನನಗೆ ದೊರೆತಿಲ್ಲ.''

''ನಿನ್ನ ಮನಸ್ಸಿಗೆ ಯಾವನೊಬ್ಬನು ನಿರಪರಾಧಿಯಾಗಿ ಕಂಡರೂ ರಾಜನ ಅಥವಾ ಅವನ ಸಂಬಂಧಿಕರ ಆಜ್ಞೆಯಂತೆ ಅವನಿಗೆ ಶಿಕ್ಷೆಯನ್ನು ವಿಧಿಸಬಾರದೇನು?''

"ನಿರಪರಾಧಿಗೆ ಶಾಸನ ಮಾಡುವದು ಅಧರ್ಮವು. ರಾಜಸತ್ತೆಯು ಕೈಯಲ್ಲಿರುವದೆಂದು ರಾಜನಾಗಲಿ ಅವನ ಸಂಬಂಧಿಕರಾಗಲಿ ಸ್ವೇಚ್ಛಾಪ್ರವೃತ್ತರಾದರೆ ಅದರ ಪರಿಣಾಮವು ಒಳಿತಾಗಲಾರದು. ಪ್ರಜಾಕ್ಷೋಭಯಿಂದ ಅರಸನ ಅರಸೊತ್ತಿಗೆಯು ನಾಶವಾಗುವದು. ರಾಜ್ಯದ ನಿಜವಾದ ಹಿತ ಮಾಡಲಿಚ್ಛಿಸುವ ಅಧಿಕಾರಿಯು ನ್ಯಾಯಾನ್ಯಾಯಗಳ ಕಡೆಗೆ ಚನ್ನಾಗಿ ಲಕ್ಷ್ಯಗೊಡಬೇಕಾಗುವದು, ರಾಜನ ದುಷ್ಟ ಲಹರಿಗೆ ಸಿಲುಕಿ ಅಧರ್ಮದಿಂದ ನಡೆಯುವದಕ್ಕಿಂತಲೂ, ತನ್ನ ಕೆಲಸವನ್ನು ಬಿಡುವದೇ ಮೇಲು. ಅನ್ಯಾಯದಿಂದ ಹೊಟ್ಟೆ ಹೊರೆದುಕೊಳ್ಳಬೇಕಾದರೆ ಜಗತ್ತಿನಲ್ಲಿ ದುರ್ಮಾರ್ಗಗಳಿಗೇನು ಕೊರತೆಯುಂಟು? ಅದಕ್ಕಾಗಿ ಈ ನಗರಪಾಲನ ಕೆಲಸವನ್ನೇ ಮಾಡಬೇಕಾಗಿಲ್ಲ."

ನಿರ್ಭಯತೆ-ಗಾಂಭೀರ್ಯಗಳಿಂದ ಕಾಲಾಚಾಂದನು ಹೀಗೆ ನುಡಿದ ಕೂಡಲೆ ನವಾಬನು ನಿರುಪಾಯನಾದನು. ಕಾಲಾಚಾಂದನಿಗೆ ಶಿಕ್ಷೆಯನ್ನು ವಿಧಿಸಬೇಕೆಂಬ ವಿಚಾರವು ಅವನ ಮನಸ್ಸಿನೊಳಗಿಂದ ಸಮೂಲವಾಗಿ ನಾಶವಾಯಿತು. ಕರ್ತವ್ಯನಿಷ್ಠನೂ ನಿಸ್ಪೃಹನೂ ಆದ ಕಾಲಾಚಾಂದನು ತನ್ನ ಓಲಗಕ್ಕೆ ಭೂಷಣಪ್ರಾಯನಾಗಿರುವನೆಂದು ಅವನಿಗೆ ಮನವರಿಕೆಯಾಯಿತು. ಅವನು ಕಾಲಾಚಾಂದನಿಗೆ ನಿರೋಪ ಕೊಡಬೇಕೆನ್ನುವಷ್ಟರಲ್ಲಿ ಕೋಣೆಯೊಳಗೆ ಕುಳಿತ ದುಲಾರಿಯು ಅವನ ದೃಷ್ಟಿಗೆ ಬಿದ್ದಳು. ಕೂಡಲೆ ಅವನ ಮನಸ್ಸಿನ ವಿಚಾರವು ಬೇರೆಯಾಯಿತು. ನಗರಪಾಲನಿಗೆ ಶಾಸನವನ್ನು ವಿಧಿಸದಿದ್ದರೆ ತನ್ನ ಮಗಳು ಕ್ರುದ್ಧಳಾಗುವಳೆಂದು ನವಾಬನಿಗೆ ಗೊತ್ತಾಯಿತು. ಆಗ ಅವನು ಕಾಲಾಚಾಂದನನ್ನು ಕುರಿತು— "ನಗರಪಾಲ, ನೀನು ನನ್ನ ಕುಮಾರಿಯ ಆಜ್ಞೆಯನ್ನುಲ್ಲಂಘಿಸಿ ಅವಳ ಅಪಮಾನಗೊಳಿಸಿರುವೆ. ನಿನ್ನ ಈ ಅಪರಾಧಕ್ಕಾಗಿ ನಿನ್ನನ್ನು ಕೆಲಸದಿಂದ ದೂರ ಮಾಡಬೇಕೆಂದು ಅವಳ ಇಚ್ಛೆಯಿರುವದು."

"ಖಾವಿಂದ, ಬಹಳೇ ಉತ್ತಮವಾಯಿತು. ನಾನು ಇಂದಿನಿಂಧಲೇ ನಿಮ್ಮ ಕೆಲಸವನ್ನು ಬಿಟ್ಟೆನು. ಒಳ್ಳೇದು, ಬರುತ್ತೇನೆ." ಎಂದು ಕಾಲಾಚಾಂದನು ನವಾಬನಿಗೆ ನಮಸ್ಕಾರ ಮಾಡಿ, ಅಲ್ಲಿಂದ ಹೊರಡು

ತ್ತಿರುವಷ್ಟರಲ್ಲಿ ಸುಲತಾನನು ಅವನನ್ನು ಕುರಿತು:—"ನೀನು ಒಮ್ಮೆಲೆ ವಿಕಾರವಶನಾಗಬೇಡ. ನಾನು ಶಹಜಾದಿಗೆ ಚನ್ನಾಗಿ ತಿಳಿಸಿ ಹೇಳು ತ್ತೇನೆ. ಅವಳು ನಿನ್ನನ್ನು ಕ್ಷಮಿಸಬಹುದಾಗಿದೆ."

"ಹುಜೂರ. ಶಹಜಾದಿಯವರು ನನ್ನನ್ನು ಕ್ಷಮಿಸುವರೆ?" ಎಂದು ತಿರಸ್ಕಾರ-ಸಂತಾಪಗಳಿಂದ ನಗರಪಾಲನು ನುಡಿದು:—"ಈ ಕಾಲಾಚಾಂದನು ಸ್ತ್ರೀಯ ದಾಸನಲ್ಲ!"

ಕಾಲಾಚಾಂದನು ಅಲ್ಲಿಂದ ಹೊರಟು, ಹೋದ ಕೂಡಲೆ ದುಲಾರಿಯು ಅಲ್ಲಿಗೆ ಬಂದು ಸುಲತಾನನ ಕಾಲುಗಳನ್ನು ಗಟ್ಟಿಯಾಗಿ ಹಿಡಿದು: "ಅಪ್ಪಾ, ನಗರಪಾಲರನ್ನು ಈಗಲೆ ಕರೆಯಿಸಿರಿ. ಅವರನ್ನು ಕೆಲಸದಿಂದ ತೆಗೆಯ ಬೇಡಿರಿ."

ದುಲಾರಿಯ ಮಾತುಗಳನ್ನು ಕೇಳಿ ನವಾಬನು ಆಶ್ಚರ್ಯ ಚಕಿತ ನಾದನು. ಆಗ ಅವನು ತನ್ನ ಕುಮಾರಿಯನ್ನು ಕುರಿತು: "ನಾನು ನಿನ್ನ ಇಚ್ಛೆಯಂತೆಯೇ ಕೆಲಸ ಮಾಡಿರುವೆನ."

"ಅಹುದು. ನೀವು ನನ್ನ ಮಾತಿನಂತೆ ನಡೆದಿರುವದೇ ನಿಜವು. ನನ್ನಿಂದ ಅನ್ಯಾಯವಾಯಿತೆಂದು ಇದೀಗ ನನ್ನ ಲಕ್ಷ್ಯದಲ್ಲಿ ಬಂತು. ನಿಸ್ಪೃಹವೃತ್ತಿಯವರಾದ ನಗರಪಾಲರ ಮೇಲೆ ನಾನು ಅಪರಾಧ ಹೊರಿ ಸಿದ್ದು ತೀರ ಅಯೋಗ್ಯವಿರುವದು. ಕಾಲಾಚಾಂದರು ನಿಜವಾಗಿಯೂ ಸ್ತ್ರೀಯ ದಾಸರಲ್ಲ."

ನವಾಬನ ಮನಸ್ಸು ಬಹಳೇ ಗೊಂದಲದಲ್ಲಿ ಬಿದ್ದಿತು. ಸ್ವಲ್ಪ ವೇಳೆಯ ಹಿಂದೆ ಯಾವನ ವಿಷಯಕ್ಕೆ ಸಂತಪ್ತಳಿದ್ದಳೋ ಅವನ ವಿಷಯ ದಲ್ಲಿ ಸಂತುಷ್ಟಳಾದ ಶಹಜಾದಿಯ ವಿಚಿತ್ರ ವರ್ತನವನ್ನು ನೋಡಿ ಅವನು ದಂಗುಬಡೆದನು. ಸ್ತ್ರೀ ಚರಿತ್ರವು ಅಗಮ್ಯವಾದದ್ದೆಂದು ಅವನು ಭಾವಿಸಿ, ಶಹಜಾದಿಯನ್ನು ಕುರಿತು:—"ನಿನ್ನ ಇಚ್ಛೆಯಂತೆ ಅವನನ್ನು ಮೊದಲಿನ ಸ್ಥಳದಲ್ಲಿಯೆ ನಿಯಮಿಸುವೆನು."

ಯಾವ ಹೇತುವಿಗಾಗಿ ನವಾಬಜಾದಿಯು ಕಾಲಾಚಾಂದನ ಮೇಲೆ ಅನುಗ್ರಹ ಮಾಡಿರಬಹುದು?

# ಅನುಪಮ ಧರ್ಮಪ್ರಿಯತೆ.

ವಂಗೇಶ್ವರನ ಪುತ್ರಿಯಾದ ದುಲಾರಿಯು ಸೌಧಾಗ್ರದಲ್ಲಿ ತನ್ನ ಸಹಚರಿಯರಾದ ಚಂದನೆ-ಮೈನೆಯರೊಂದಿಗೆ ಮಾತನಾಡುತ್ತ ಕುಳಿತಿದ್ದಳು. ತನಗಾದ ಅಪಮಾನದ ಸೇಡನ್ನು ತೀರಿಸಿಕೊಳ್ಳಬೇಕೆಂದು ಚಂಡಿತನ ಹಿಡಿದಿದ್ದ ನವಾಬಜಾದಿಯು ಆಯುತ್ತವಾದ ಸಮಯದಲ್ಲಿ ಸೇಡಿನ ಭಾವನೆಯನ್ನು ಮರೆತು, ಕ್ಷಮಾದಾನ ಮಾಡಿದ್ದರಿಂದ ಈ ವಿಷಯವಾಗಿ ಆ ದಾಸಿಯರು ಬಹಳೇ ವಿಚಾರಕ್ಕೊಳಗಾಗಿದ್ದರು. ಶಹಜಾದಿಯ ಮನಸ್ಥಿತಿಯಲ್ಲಿ ಅಭ್ಯಂತರವಾಗತೊಡಗಿದ್ದರಿಂದ ಅವರ ಮನಸ್ಸು ಮತ್ತಿಷ್ಟು ಶಂಕೆಗೊಳಗಾಯಿತು. ನಗುತ್ತ-ಕೆಲೆಯುತ್ತ ವಿನೋದದಿಂದ ವೇಳೆಗಳೆಯುವ ದುಲಾರಿಯು, ಈಗ ಯಾವದೋ ಒಂದು ಗಹನ ವಿಚಾರದಲ್ಲಿ ಮುಳುಗಿದಂತೆ ಅವರಿಗೆ ಭಾಸವಾಯಿತು. ಅವಳ ಮನಸ್ಸಿನ ಚಂಚಲತೆಯ ಕಾರಣವನ್ನು ಕೇಳಿ ಬಿಡಬೇಕೆಂದು ಅವರು ನಿಶ್ಚಯಿಸಿಕೊಂಡಿದ್ದರು. ಅಷ್ಟರಲ್ಲಿ ನದಿಯಿಂದ ಸ್ನಾನ ಮಾಡಿ ಬರುತ್ತಿರುವ ಕಾಲಾಚಾಂದ ನಗರಪಾಲನು ಅವರ ದೃಷ್ಟಿಗೆ ಬಿದ್ದನು. ಕೂಡಲೆ ಚಂದನೆಯು ಶಹಜಾದಿಯನ್ನು ಕುರಿತು:-"ಶಹಜಾದಿಸಾಹೇಬರೇ, ಅಲ್ಲಿ ನೋಡಿರಿ. ಆ ಕಾಫರನು ಯಾರೆಂಬುದನ್ನು ನೀವು ಗುರುತಿಸುವಿರೇನು?"

ಭಸ್ಮ-ರುದ್ರಾಕ್ಷಿಗಳನ್ನು ಧಾರಣಮಾಡಿ ಬರಿಮೈಯಿಂದ ಹೊರಟ ಕಾಲಾಚಾಂದನನ್ನು ದುಲಾರಿಯು ಗುರುತಿಸಲಿಲ್ಲ. ಆಗ ಅವಳು ಚಂದನೆಯನ್ನು ಕುರಿತು:—"ಚಂದನಾ, ಆ ಕಾಫರನು ಯಾರು? ಅವನೊಬ್ಬ ಹಿಂದು ಯೋಗಿಯಂತೆ ಕಾಣುವನು."

"ನಿಮ್ಮ ಅಪಮಾನ ಮಾಡಿದ ಮನುಷ್ಯನೇ ಅವನು!" ಎಂದು ಮೈನೆಯು ನಗುತ್ತ ಹೇಳಿದಳು.

"ಮೈನೆ, ಈ ವಂಗೇಶ್ವರನ ಕುಮಾರಿಯ ಅಪಮಾನ ಮಾಡುವ ಸಾಮರ್ಥ್ಯವು ಯಾವನದಿರುವದು?"

"ಹಾಗಿಲ್ಲದಿದ್ದರೆ ನೀವು ಅವನನ್ನು ಕೆಲಸದಿಂದ ತೆಗೆಯಬೇಕೆಂದು

ಸಾಹಸ ಮಾಡಿದ ಕಾರಣವೇನು?

"ಇಲ್ಲಿ ಹೋಗುವವರು ಕಾಲಾಚಾಂದ ನಗರಪಾಲರೇ ಏನು?" ಎಂದು ವಿಸ್ಮಯದಿಂದ ದುಲಾರಿಯು ನುಡಿದು, ಅವನು ಕಣ್ಣುಮರೆಯಾಗುವ ವರೆಗೆ ದಿಟ್ಟಿಸಿ ನೋಡುತ್ತ ನಿಂತುಕೊಂಡಳು. ಅನಂತರದಲ್ಲಿ ಅವಳು ಮೈನೆಯನ್ನು ಕುರಿತು:--"ಮೈನೆ, ನಗರಪಾಲರು ನನ್ನ ಅಪಮಾನ ಮಾಡಿಲ್ಲವೆಂಬದು ಹಿಂದಿನಿಂದ ನನ್ನ ಲಕ್ಷ್ಯದಲ್ಲಿ ಬಂತು. ಅವರು ತಮ್ಮ ಕರ್ತವ್ಯವನ್ನು ಯಥಾಯೋಗ್ಯವಾಗಿ ನೆರವೇರಿಸಿರುವರು. ಇದರಲ್ಲಿ ನನ್ನ ಅಪಮಾನವೇನು?"

ವಜ್ರಕ್ಕಿಂತ ಕಠಿಣಳಾಗಿದ್ದ ದುಲಾರಿಯು ಈಗ ಹೂವಿಗಿಂತ ಮೃದುವಾದದ್ದನ್ನು ನೋಡಿ, ಅವಳ ಮನಸ್ಸಿನಲ್ಲೇನಿರುವದೆಂಬದನ್ನು ತಿಳಿದುಕೊಳ್ಳಬೇಕೆಂದು ಚಂದನೆ ಮೈನೆಯರು ಕುತೂಹಲಗೊಂಡರು. ಮೈನೆಗೆ ಶಹಜಾದಿಯ ಇಂಗಿತವು ಮಸಮಸಕಾಗಿ ಕಾಣತೊಡಗಿತ್ತು. ಆದ್ದರಿಂದ ಅವಳು ಬುದ್ಧಿಪೂರ್ವಕವಾಗಿ ಕಾಲಾಚಾಂದನ ದೂಷಣೆಗೆ ಪ್ರಾರಂಭಿಸಿದಳು:

"ಶಹಜಾದಿಯವರೆ, ನೀವು ಆ ಕಾಫರನನ್ನು ಚನ್ನಾಗಿ ನೋಡಿದಿರೇನು? ಮೈಗೆ ಬೂದಿಯನ್ನು ಬಡಿದುಕೊಂಡು ಹುಚ್ಚನಂತೆ ಹೇಗೆ ಹೊರಟಿದ್ದಾನೆ? ಅವನನ್ನು ನೋಡಿದೊಡನೆಯೆ, ಮೃಗಾಲಯದೊಳಗಿನ ಹುಲಿ-ಚಿರ್ಚಗಳನ್ನು ನೋಡಿದಂತೆ ನನಗೆ ಭಾಸವಾಯಿತು. ನೋಡಿದರೆ ಮುಸಲಮಾನರ ರಾಜ್ಯದಲ್ಲಿ ನಗರಪಾಲನಿರುವನು; ಹಿಂದುಗಳ ಹುಚ್ಚುತನದ ಧರ್ಮಾಚರಣೆ ಮಾಡುತ್ತಿರುವನು!"

ಮೈನೆಯ ಮಾತಿನಿಂದ ಶಹಜಾದಿಯು ಕ್ರೋಧಗೊಂಡಳು ತನ್ನ ಸಿಟ್ಟನ್ನು ಯಾವ ಶಬ್ದಗಳಿಂದ ವ್ಯಕ್ತಮಾಡಬೇಕೆಂಬದು ತಿಳಿಯದೆ ಅವಳು ತಟಸ್ಥಳಾಗಿ ಕುಳಿತಳು. ಗೌರಕಾಂತಿಯ ಮುಖವು ಕೆಂಪಡರಿದ್ದರಿಂದ ಅವಳು ಸಿಟ್ಟಾದಳೆಂಬದು ಮೈನೆಗೆ ತಿಳಿಯದಿರಲಿಲ್ಲ. ದುಲಾರಿಯ ರಹಸ್ಯವನ್ನು ಬೈಲಿಗೆಳೆಯಬೇಕೆಂದು ಆತುರಳಾಗಿದ್ದ ಮೈನೆಗೆ ಅವಳ ಆ ಸಿಟ್ಟಿನ ಪರಿವೆಯಿದ್ದಿಲ್ಲ.

"ಶಹಜಾದಿಯವರೆ," ಮ್ಯೈನೆಯು ಚುಚ್ಚಿ ಮಾತನಾಡತೊಡಗಿದಳು. ನೀವು ಬೇಕಾದ ಹಾಗೆ ಕ್ರೋಧಗೊಳ್ಳಿರಿ. ಇದ್ದ ಸಂಗತಿಯನ್ನು ಹೇಳಲಿಕ್ಕೆ ನನಗೆ ಯಾವ ಅಂಜಿಕೆಯೂ ಇಲ್ಲ."

"ಮ್ಯೈನೆ" ಚಂದನೆಯು ನಗುತ್ತ ನಗುತ್ತ:--"ನಗರಪಾಲನ ನಿಂದೆ ಮಾಡಿದರೆ ಶಹಜಾದಿಯವರು ಸಿಟ್ಟಾಗುವರೇಕೆ?"

"ಚಂದನೆ, ಆ ಕಾಫರನು ಅವಿವೇಕಿಯೂ ನೀಚನೂ ಇರುವನು."

ಮ್ಯೈನೆಯ ಮಾತುಗಳು ದುಲಾರಿಗೆ ಅಸಹ್ಯವಾದವು. ಆಗ ಅವಳು ಸಿಟ್ಟಿನಿಂದ:—"ಮ್ಯೈನೆ!"

"ಮತ್ತೇನು ಶಹಜಾದಿಯವರೆ?"

"ನೀನು ಮೂರ್ಖಳಿರುವೆ."

"ನಿಮಗೆ ಈ ಸಂಗತಿಯು ಇಷ್ಟು ದಿನಗಳಿಲ್ಲದೆ ಇಂದೇ ಗೊತ್ತಾಯಿತೇನು?"

"ಎರಡನೆಯವರ ನಿಂದೆ ಮಾಡುವ ಪ್ರವೃತ್ತಿಯು ನಿನ್ನಲ್ಲಿ ಬಹಳವಾಗಿರುತ್ತದೆ."

"ನಿಮ್ಮ ಮಾತು ನಿಜವು."

"ನೀನು ಕುಚೋದ್ಯತನ ಮಾಡುತ್ತಲಿರುವೆ."

"ಇಷ್ಟೇಯೇ? ಇದಕ್ಕಿಂತ ಹೆಚ್ಚಾಗಿ ಮತ್ತೇನನ್ನಾದರೂ ನಾನು ಮಾಡುತ್ತಿರುವದಿಲ್ಲವಷ್ಟೆ?"

"ಮ್ಯೈನೆ!" ಶಹಜಾದಿಯು ಗಾಂಭೀರ್ಯದಿಂದ —"ನೀನು ಯಾರನ್ನು ನಿಂದಿಸುತ್ತಿರುವೆಯೋ ಅವರಂತಹ ಸುಂದರ ಪುರುಷರನ್ನು ನಾನು ಈ ಜನ್ಮದಲ್ಲಿಯಂತು ನೋಡಿಲ್ಲ. ಅವರೆದುರಿನಲ್ಲಿ ದಿಲ್ಲೀಶ್ವರನಾದರೂ ನನಗೆ ತುಚ್ಛನಾಗಿ ತೋರುತ್ತಿರುವನು. ಅವರು ಹೇಗೆ ರೂಪವಂತರಿರುವರೋ, ಹಾಗೆಯೇ ಗುಣಶಾಲಿಗಳಾದರೂ ಇರುವರು. ಮ್ಯೈನೆ, ಈ ದುಲಾರಿಯು ಸಹಜ ವಿಕಾರವಶಳಾಗುವಂತಹಳೆ? ಇವಳ ಮನಸ್ಸಿನ ಸ್ಥೈರ್ಯವನ್ನು ನಾಶಮಾಡುವದು ಸುಲಭಸಾಧ್ಯವೆ? ಆ ನರಪುಂಗವರು ಈ ದುಲಾರಿಯ ದುರ್ಭೇದ್ಯವಾದ ಹೃದಯವನ್ನು ಪ್ರವೇಶಿಸಿ ಅಲ್ಲೋಲ-

ಕಲ್ಲೋಲ ಮಾಡಿಬಿಟ್ಟಿರುವರು."

"ಶಹಜಾದಿಯವರೆ, ನಿಮ್ಮ ಮನಸ್ಸಿನ ಬಲವನ್ನು ನಾನು ಈ ಕ್ಷಣಕ್ಕೆ ಮುಂಚಿತವಾಗಿಯೆ ಕಂಡು ಹಿಡಿದಿರುವೆನು. ನಿಮ್ಮ ಇಚ್ಛೆಯು ಎಂದೂ ನೆರವೇರಲಾರದೆಂದು ನಾನು ಕೈಯೆತ್ತಿ ಹೇಳುವೆನು."

"ಮೈನೆ, ನೀನು ರಮಲಜ್ಞಳಲ್ಲ; ಜ್ಯೋತಿಷ ಪಾರಂಗತಳಲ್ಲ; ತ್ರಿಕಾಲಜ್ಞ ಯೋಗಿನಿಯಲ್ಲ; ವಾಮಮಾರ್ಗೀಯ ಪ್ರಯೋಗದಿಂದ ನೀನು ಕರ್ಣಪಿಶಾಚಿಯನ್ನಾದರೂ ವಶಪಡಿಸಿಕೊಂಡಿಲ್ಲ. ಹೀಗಿದ್ದು ನೀನು ಯಾವ ಆಧಾರದಿಂದ ಹೀಗೆ ಭವಿಷ್ಯವನ್ನು ಹೇಳುತ್ತಿರುವೆ?"

"ನೀವು ಹೇಳಿದ ಯಾವ ವಿದ್ಯೆಗಳೂ ನನಗೆ ಅವಗತವಿಲ್ಲದಿದ್ದರೂ, ನಗರಪಾಲನು ನಿಮ್ಮನ್ನು ಕೈಹಿಡಿಯಲಾರನೆಂದು ನಿಶ್ಚಯಪೂರ್ವಕವಾಗಿ ಹೇಳುವೆನು."

"ದಿಲ್ಲೀಶ್ವರನ ಜಾಯಲ್ಲಿ ನೀರು ತರಿಸುವಂತಹ ದಿವ್ಯಲಾವಣ್ಯಮಯಿಯಾದ ದುಲಾರಿಯ ಪಾಣಿಗ್ರಹಣ ಮಾಡಲಿಕ್ಕೆ ಒಬ್ಬ ಸಾಮಾನ್ಯ ನಗರಪಾಲನು ಒಪ್ಪುವದಿಲ್ಲವೆ? ನೀನು ಬುದ್ಧಿಶೂನ್ಯಳಿರುವೆ.'

"ಶಹಜಾದಿಸಾಹೇಬರೇ, ನಿಮ್ಮ ಈ ಗರ್ವವೂ, ಅಹಂಕಾರವೂ, ದುರಭಿಮಾನವೂ ಯೋಗ್ಯ ವೇಳೆಯಲ್ಲಿ ತಾವಾಗಿಯೆ ನಾಶವಾಗುವವು. ಆಜ್ಞೆಯಾದೊಡನೆಯೆ ನಗರಪಾಲನು ನಿಮ್ಮ ಸೌಂದರ್ಯಕ್ಕೆ ಮರುಳಾಗಿ ಬಂದು ಕಾಲ ಮೇಲೆ ಬೀಳುವನೆಂದು ನೀವು ತಿಳಿದುಕೊಂಡಿರುವಿರಾಗಿದ್ದೀತು. ನಿಮ್ಮ ಈ ಕಲ್ಪನೆಯು ತೀರ ಸುಳ್ಳಾದದ್ದೆಂಬುದು ಅಲ್ಪಾವಕಾಶದಲ್ಲೆ ತಿಳಿದು ಬರುವದು."

"ಮೈನೆ, ನೀನು ಮೂರ್ಖಳಿರುವೆ. ದೊಡ್ಡ ದೊಡ್ಡ ರಾಜಪುತ್ರರಿಗೆ ಹುಚ್ಚು ಹಿಡಿಸಿದ ಈ ದಿವ್ಯ ಲಾವಣ್ಯಮಯಿಯನ್ನು ವಂಗಾಧಿಪತಿಯ ಸೇವಕನು ಉಪೇಕ್ಷಿಸುವದು ಅಸಂಭವವಿರುವದು "

ದುಲಾರಿಯು ಹೀಗೆನುಡಿದು, ಆಗಿಂದಾಗಲೆ ತನ್ನ ತಾಯಿಯ ಒಳಿಗೆ ಹೋದಳು. ಹಾಗು ಅವಳು ತನ್ನ ತಾಯಿಯ ಮುಂದೆ ಎಲ್ಲ ಸಂಗತಿಯನ್ನೂ ಹೇಳಿದಳು. ಯಃಕಶ್ಚಿತನಾದ ಒಬ್ಬ ಅಧಿಕಾರಿಯನ್ನು ವರಿಸಲಿಕ್ಕೆ ಸಿದ್ಧ

ಳಾದ ದುಲಾರಿಯನ್ನು ನೋಡಿ ಅವಳ ತಾಯಿಯ ಮನಸ್ಸು ಅಸಮಾಧಾನ ಹೊಂದಿತು. ಐಶ್ವರ್ಯದ ಹಾಗು ಕುಲಗೌರವದ ಅಭಿಮಾನವನ್ನು ತೊರೆದು ನಡೆಯತೊಡಗಿದ ಮಗಳ ಮೇಲೆ ಅವಳು ಅತಿಶಯವಾಗಿ ಖತಿಗೊಂಡಳು. ಕಾಲಾಚಾಂದನಿಗೆ ತನ್ನನ್ನು ಕೊಡದಿದ್ದರೆ ವಿಷ ತಿಂದು ಪ್ರಾಣಬಿಡುವೆನೆಂದು ದುಲಾರಿಯು ಖಂಡಿತವಾಗಿ ಹೇಳಿದ್ದರಿಂದ ಅವಳು ನಿರುಪಾಯಳಾದಳು. ಈ ವಿಷಯದಲ್ಲಿ ನವಾಬನ ಮನಸ್ಸನ್ನು ಒಲಿಸಿಕೊಂಡು ಕಾರ್ಯಸಾಧನೆ ಮಾಡಿಕೊಳ್ಳಬೇಕೆಂದು ಇಬ್ಬರೂ ನಿಶ್ಚಯಿಸಿದರು.

ನವಾಬನು ತನ್ನ ವಿಲಾಸಮಂದಿರದಲ್ಲಿ ಒಬ್ಬನೆ ಕುಳಿತಿದ್ದನು. ಅಲ್ಲಿಗೆ ಬೇಗಮೆಯು ಹೋಗಿ ಮಗಳ ಮನೋದಯವನ್ನು ತಿಳಿಸಿದಳು. ತನ್ನ ಮಗಳು ಒಬ್ಬ ಕಾಫರನನ್ನು ವರಿಸಲಿಕ್ಕೆ ಸಿದ್ಧಳಾದ ಸಂಗತಿಯನ್ನು ಕೇಳಿ ಅವನಿಗೆ ಅತಿರೇಕವಾದ ಆಶ್ಚರ್ಯವಾಯಿತು. ಕೂಡಲೆ ಅವನು ತನ್ನ ಮಗಳನ್ನು ಕರೆಯಿಸಿ:—"ಕುಮಾರಿ, ನೀನು ಹುಚ್ಚಿ ಇರುವದಿಲ್ಲವಷ್ಟೆ? ಕೈಕೆಳಗಿನ ಸೇವಕನಿಗೆ ನಿನ್ನನ್ನು ಕೊಟ್ಟರೆ ನನ್ನ ಜೀಲೆಯು ಕಟ್ಟಲಿಕ್ಕಿಲ್ಲವೆ? ಕಾಫರರ ಲಾವಣ್ಯವತಿಯರನ್ನು ಎಳೆದು ತರುವ ನಾವು, ನಮ್ಮ ರೂಪವತಿ ಕನ್ನಿಕೆಯರನ್ನು ಅವರಿಗೆಕೊಡುತ್ತ ಹೋದರೆ ದೇಶದಲ್ಲಿ ನಮ್ಮ ಗೌರವವು ಉಳಿಯುವದೆ? ನೀನು ದಿಲ್ಲಿಯ ಯುವರಾಜನ ಕೈಹಿಡಿಯಲಿಕ್ಕೆ ಯೋಗ್ಯಳಿರುವೆ; ಒಬ್ಬ ನಗರಪಾಲನನ್ನು ವರಿಸಬೇಕೆಂದು ಪರಮಾತ್ಮನು ನಿನ್ನನ್ನು ಸೃಷ್ಟಿಸಿಲ್ಲ."

"ಅಪ್ಪಾ, ನಾನು ರಾಜಕುಮಾರಿಯೆಂದು ಅಹಂಕಾರ ತಳೆದಿಲ್ಲ. ನನಗೆ ಐಶ್ವರ್ಯದ ಹೆಮ್ಮೆಯೂ ರೂಪದ ಅಭಿಮಾನವೂ ತಿಲಾಂಶವಾದರೂ ಇರುವದಿಲ್ಲ. ದಿಲ್ಲೀಶ್ವರನಾದರೂ ನನ್ನನ್ನು ಅಪೇಕ್ಷಿಸುತ್ತಿರಬಹುದು. ಎಲ್ಲಿ ಪ್ರೇಮವಿಲ್ಲವೊ ಅಲ್ಲಿ ನಾನು ಹೇಗೆ ಆತ್ಮಾರ್ಪಣೆ ಮಾಡಲಿ? ನೀವು ನಿಮ್ಮ ಮಗಳಿಗೆ ಸೌಖ್ಯವಾಗಬೇಕೆಂದು ಇಚ್ಛಿಸುತ್ತಿದ್ದರೆ, ಅವಳನ್ನು ನಗರಪಾಲನಿಗೆ ಕೊಡಿರಿ. ನೀವು ಈ ಮಾತಿಗೆ ಒಪ್ಪದಿದ್ದರೆ ಅನಿಷ್ಟ ಪ್ರಸಂಗವೊದಗುವದೆಂದು ನಾನು ಸ್ಪಷ್ಟವಾಗಿ ಹೇಳುವೆನು."

"ದುಲಾರಿ! ನೀನು ಇದೇನು ಚಂಡಿತನ ಹಿಡಿದಿರುವೆ?"

"ನಗರಪಾಲನ ಹೊರತು ಉಳಿದ ಪುರುಷರು ನನ್ನ ತಂದೆಯ ಸಮಾನರೆಂದು ನಾನು ತಿಳಿದಿರುವೆನು. ನೀವು ನನ್ನ ಇಚ್ಛೆಯನ್ನು ಈಡೇರಿಸದಿದ್ದರೆ, ನನ್ನ ಪ್ರಾಣವು ನನ್ನ ಕೈಯೊಳಗಿರುವದು!"

ನವಾಬನು ನಿರುತ್ತರನಾದನು. ವಾತ್ಸಲ್ಯದ ಕುವರಿಯ ಅಭಿಲಾಷೆಯನ್ನು ಈಡೇರಿಸದಿದ್ದರೆ ಅನರ್ಥವಾಗುವದೆಂದು ಅವನು ಬಗೆದನು. ಅನಂತರದಲ್ಲಿ ಕಾಲಾಚಾಂದನನ್ನು ಕರೆಯಿಸಿ, ಅವನಿಗೆ ಈ ಸಂಗತಿಯನ್ನು ತಿಳಿಸಬೇಕೆಂದು ನವಾಬನು ಯೋಚಿಸಿದನು. ಕೂಡಲೆ ಅವನು ಕಾಲಾಚಾಂದನನ್ನು ಕರೆಯುವದಕ್ಕಾಗಿ ತನ್ನ ಮುಖ್ಯವಜೀರನಾದ ಖಾನ ಜಹಾನ ಲೋಡಿಯನ್ನು ಕಳುಹಿಸಿದನು. ತನ್ನ ಭಾವೀ ಜಾವಾತನನ್ನು ಮನ್ನಣೆಯಿಂದ ಕರೆಯಿಸಬೇಕೆಂದು ನವಾಬನು ಬುದ್ಧಿಪೂರ್ವಕವಾಗಿ ಮಂತ್ರಿಯನ್ನು ಕಳುಹಿಸಿದ್ದನು.

ಮಂತ್ರಿಯು ನಗರಪಾಲನ ಮಂದಿರಕ್ಕೆ ಬಂದನು. ಅಲ್ಲಿ ಕಾಲಾಚಾಂದನಿದ್ದಿಲ್ಲ ಅವನು ನದಿಗೆ ಸ್ನಾನಕ್ಕೆ ಹೋಗಿರುವನೆಂಬುದು ಬೂನಾನಿಂದ ಮಂತ್ರಿಗೆ ತಿಳಿಯಿತು. ಕೂಡಲೆ ಅವನು ನದಿಯ ಕಡೆಗೆ ತೆರಳಿದನು. ಅವನಿಗೆ ಕಾಲಾಚಾಂದನ ಭೆಟ್ಟಿಯು ನದಿಯಲ್ಲಿ ಆಯಿತು. ಆಗ ಅವನು ಆಹ್ನಿಕದಲ್ಲಿ ತೊಡಗಿದ್ದರಿಂದ ಮಂತ್ರಿಯು ಅವನಿಂದ ಸ್ವಲ್ಪ ದೂರ ಕುಳಿತುಕೊಂಡನು. ಕಾಲಾಚಾಂದನು ಅವನ ಕಡೆಗೆ ಹೊರಳಿ ಸಹ ನೋಡಲಿಲ್ಲ. ಅವನು ತನ್ನ ಆಹ್ನಿಕವನ್ನು ಮುಗಿಸಿ ಮನೆಯ ದಾರೀ ಹಿಡಿದನು. ಖಾನ ಜಹಾನನು ಅವನ ಬೆನ್ನ ಹಿಂದೆ ಸಾಗಿದನು. ದಾರಿಯಲ್ಲಿ ಮಂತ್ರಿಯು ಕಾಲಾಚಾಂದನನ್ನು ಒಂದೆರಡು ಬಾರಿ ಕೂಗಿದನು. ಕೈಯಲ್ಲಿ ಜಪಮಾಲೆ ಹಿಡಿದು ರಾಮನಾಮಸ್ಮರಣೆ ಮಾಡುತ್ತ ಹೊರಟ ಕಾಲಾಚಾಂದನಿಗೆ ಅವನ ಕೂಗುವಿಕೆಯ ಕಡೆಗೆ ಲಕ್ಷ್ಯವೆಲ್ಲಿ? ಇಚ್ಛಾಮಾತ್ರದಿಂದ ಇಂತಹ ನಗರಪಾಲರನ್ನು ಗಡಿಪಾರ ಮಾಡಲಿಕ್ಕೆ, ಕಿಂಬಹುನಾ ತಲೆಯನ್ನು ಸಹ ಹಾರಿಸಲಿಕ್ಕೆ ಅಧಿಕಾರವಿದ್ದಂಥ ವಂಗರಾಜ್ಯದ ಮುಖ್ಯ ಮಂತ್ರಿಯು ಒಬ್ಬ ಯಾಚಕನಂತೆ ನಗರಪಾಲನ ಹಿಂದೆ ನಡೆ

ದದ್ದು ನೋಡಿ ಯಾರಿಗಾದರೂ ವಿಸ್ಮಯವೆನಿಸಬಹುದು. ರಾಜಾದೇಶವನ್ನು ತಂದ ಮಂತ್ರಿಯು ತನ್ನ ಕರ್ತವ್ಯವನ್ನು ನೆರವೇರಿಸದೆ ಹಾಗೆಯೇ ಹೋಗಲಿಕ್ಕೆ ಬರುವಂತಿರಲಿಲ್ಲ. ನವಾಬನ ಆಜ್ಞೆಯು ಒಳ್ಳೆಯ ಅವಸರದ್ದಿತ್ತು. ಮನೆಗೆ ಬಂದ ಕೂಡಲೆ ರಾಜಾಜ್ಞೆಯನ್ನು ತಿಳಿಸಲಿಕ್ಕೆ ಅವಕಾಶ ದೊರತೀತೆಂದು ಖಾನ ಜಹಾನನ ಭಾವನೆಯಾಗಿತ್ತು; ಆದರೆ ಅವನ ಈ ಇಚ್ಛೆಯು ಮಾತ್ರ ಸಫಲವಾಗಲಿಲ್ಲ. ಕಾಲಾಚಾಂದನು ತನ್ನ ದೇವಮಂದಿರದಲ್ಲಿ ಪ್ರವೇಶಿಸಿ ದೇವಪೂಜೆ-ಜಗನ್ನಾಥ ಸ್ತೋತ್ರಗಳಲ್ಲಿ ಮಗ್ನನಾದನು. ಒಂದೆರಡು ಗಳಿಗೆಗಳ ವರೆಗೆ ಅರ್ಚನೆ ಸ್ತೋತ್ರ ಮೊದಲಾದವುಗಳು ಮುಗಿದ ಮೇಲೆ ಕಾಲಾಚಾಂದನು ಹೊರಗೆ ಬಂದು ಮಂತ್ರಿಗೆ ಭೆಟ್ಟಿಯಾದನು. ಮಂತ್ರಿಯು ಅವನಿಗೆ ರಾಜಾದೇಶವನ್ನು ತಿಳಿಸಿದನು. ಮಂತ್ರಿಯನ್ನು ಕಳುಹಿಸುವಂತಹ ಅವಸರದ ಕಾರ್ಯವೇನಿರಬಹುದೆಂದು ಕಾಲಾಚಾಂದನು ವಿಚಾರಕ್ಕೊಳಗಾದನು. ಎಷ್ಟು ಬಗೆಯಿಂದ ಆಲೋಚಿಸಿದರೂ ಅವನ ಮನಸ್ಸಿಗೆ ಸಮರ್ಪಕವಾದ ಉತ್ತರವು ದೊರೆಯಲಿಲ್ಲ. ಕೂಡಲೆ ಅವನು ಉಡಿಗೆ-ತೊಡಿಗೆಗಳನ್ನು ಧರಿಸಿ ರಾಜಮಂದಿರಕ್ಕೆ ತೆರಳಿದನು.

ಅರಮನೆಯ ವಿಲಾಸಭುವನದಲ್ಲಿ ಸುಲತಾನನೊಬ್ಬನೆ ಕುಳಿತಿದ್ದನು. ಅವನು ನಗರಪಾಲನ ಭೆಟ್ಟಿಗೆ ಅತ್ಯಾತುರಗೊಂಡಿದ್ದನು. ಅಷ್ಟರಲ್ಲಿ ಅಲ್ಲಿಗೆ ನಗರಪಾಲನು ಬಂದು ಸುಲತಾನನಿಗೆ ಮುಜುರೆ ಮಾಡಿ ನಿಂತುಕೊಂಡನು. ಸುಲತಾನನು ಅವನ ಮುಜುರೆಯನ್ನು ಸ್ವೀಕರಿಸಿ, ಸಮ್ಮುಖದಲ್ಲಿದ್ದ ಆಸನದ ಮೇಲೆ ಕೂಡ್ರ ಹೇಳಿದನು.

"ಕಾಲಾಚಾಂದ!" ಸುಲತಾನನು ಪ್ರೇಮಳ ಸ್ವರದಿಂದ ಮಾತನಾಡತೊಡಗಿದನು: 'ನೀನು ಉಚ್ಚಕುಲದಲ್ಲಿ ಜನಿಸಿರುವದರಿಂದ ನಿನಗೆ ದೊಡ್ಡ ಅಧಿಕಾರವನ್ನು ಕೊಟ್ಟೆನು. ನಿಮ್ಮ ಮನೆತನದೊಳಗಿನ ಎಷ್ಟೋ ಕನ್ನಿಕೆಯರು ನಮ್ಮ ಮನೆತನಕ್ಕೆ ಕೊಡಲ್ಪಟ್ಟರು. ಇನ್ನೊಂದು ಮಾತಿನ ಕೊರತೆಯು ಮಾತ್ರ ಇದುವರೆಗೂ ಪೂರೈಸಲ್ಪಡಲಿಲ್ಲ; ಆ ನ್ಯೂನತೆಯನ್ನು ನಾನು ತೆಗೆದುಹಾಕಬೇಕೆಂದು ಮಾಡಿರುವೆನು. ನಯನ

ಚಾಂದರು ನಮ್ಮ ಮನೆತನದ ಮೇಲೆ ಎಂದೂ ಮರೆಯದಂಥ ಉಪಕಾರ ಮಾಡಿರುವರು. ನಾನು ಅಲ್ಪಮಟ್ಟಿಗೆ ಸಹ ಆ ಉಪಕಾರವನ್ನು ಸ್ಮರಿಸದಿದ್ದರೆ ಹೇಗೆ? ಶಹಜಾದಿಯನ್ನು ನಿನಗೆ ಅರ್ಪಿಸಿ, ನಿನ್ನನ್ನು ರಾಜಕುಲ ಸಂಬಂಧಿಕನನ್ನಾಗಿ ಮಾಡಿಕೊಳ್ಳಬೇಕೆಂದು ನನ್ನ ಉತ್ಕಟೇಚ್ಛೆಯಿರುವದು.'

ನವಾಬನ ಮಾತುಗಳನ್ನು ಕೇಳಿ ಕಾಲಾಚಾಂದನು ದಂಗುಬಡೆದನು. ಈ ಬಗೆಯಿಂದ ನವಾಬನು ಮಾತನಾಡುವನೆಂಬ ಸಂಗತಿಯನ್ನು ಯಾವನೊಬ್ಬ ಸುಪ್ರಸಿದ್ಧ ಜ್ಯೋತಿಷಿಯು ಈ ಕ್ಷಣದ ಪೂರ್ವದಲ್ಲಿ ಕಾಲಾಚಾಂದನಿಗೆ ಹೇಳಿದ್ದರೆ, ಆ ಭವಿಷ್ಯವಾದಿಯು ನಿಶ್ಚಿತವಾಗಿ ಮೂರ್ಖನೆಂದು ಹೆಸರಿಡಿಸಿಕೊಳ್ಳುತ್ತಿದ್ದನು. ಯಾವ ಮಯೂರ್ಯದೆಗಾಗಿ ದೊಡ್ಡ-ದೊಡ್ಡ ಅಮೀರರೂ ರಾಜಪುತ್ರರೂ ವ್ಯಾಹತಿಯಿಲ್ಲದೆ ಯತ್ನಿಸುತ್ತಿದ್ದರೋ, ಯಾವ ರತ್ನದ ಲಾಭಕ್ಕಾಗಿ ದಿಲ್ಲೀಶ್ವರನು ಹುಚ್ಚನಾಗಿದ್ದನೊ ಅಂತಹ ಲಾವಣ್ಯರಾಶಿಯು ಕಾಲಾಚಾಂದನ ಸನ್ನಿಧಿಗೆ ತನ್ನಿಂದ ತಾನೆ ಬರತೊಡಗಿತ್ತು; ನವಾಬನು ತನ್ನ ಕನ್ಯೆಯನ್ನು ಉಡಿಯಲ್ಲಿ ತೆಗೆದುಕೊಳ್ಳಬೇಕೆಂದು ವಿನಂತಿ ಮಾಡಿಕೊಳ್ಳತೊಡಗಿದ್ದನು; ಆದರೆ ಧರ್ಮಪ್ರಿಯ ಕಾಲಾಚಾಂದನಿಗೆ ಆ ಮಾನವು ಬೇಕಾಗಿದ್ದಿಲ್ಲ. ನವಾಬನು ತನ್ನ ಕುವರಿಯನ್ನರ್ಪಿಸುವದಕ್ಕಿಂತ ಮರಣ ದಂಡನೆಯನ್ನು ವಿಧಿಸಿದ್ದರೆ ಲೇಸಾಗುತ್ತಿತ್ತೆಂದು ಅವನು ತಿಳಿದನು. ಈ ಸಂಕಟದಿಂದ ಹೇಗೆ ಪಾರಾದೇನೆಂದು ಅವನು ವಿಚಾರಿಸತೊಡಗಿದನು. ತನ್ನ ಮಾತಿಗೆ ಉತ್ತರವೀಯದೆ ತಟಸ್ಥವೃತ್ತಿಯಿಂದ ಕುಳಿತ ಕಾಲಾಚಾಂದನನ್ನು ಕುರಿತು ನವಾಬನು ನಮ್ರತೆಯಿಂದ:—“ಕಾಲಾಚಾಂದ, ನೀನು ನಿನ್ನ ತಂದೆಯಂತೆ ಪರಾಕ್ರಮಿಯಿರುವೆ; ಗುಣಶಾಲಿಯಿರುವೆ. ನವಾಬನ ಜಾಮಾತನೆಂದೆನಿಸಿಕೊಳ್ಳಲಿಕ್ಕೆ ಯೋಗ್ಯನಾಗಿರುವೆ. ಪ್ರತಿಭಾಶಾಲಿಯಾದ ನಿನ್ನನ್ನು ವರಿಸಲಿಕ್ಕೆ ಶಹಜಾದಿಯು ಆತುರಳಾಗಿರುವಳು. ರಾಜ ಜಾಮಾತನಿಗೆ ಯೋಗ್ಯವಾದ ಅಧಿಕಾರವೂ, ಜಹಾಗೀರಿಯೂ ನಿನಗೆ ದೊರೆಯುವವು. ನೀನು ಆನಂದದಿಂದ ನನ್ನ ವಿನಂತಿಯನ್ನು ಮನ್ನಿಸುವೆಯೆಂದು ವಿಶ್ವಾಸಗೊಂಡಿರುವೆನು.”

"ಜಹಾಂಪನಾಹ, ಈ ಬಡ ದಾಸನಲ್ಲಿ ನೀವು ಅನುಗ್ರಹವುಳ್ಳವರಾಗಿರುವಿರೆಂಬದಕ್ಕೆ ನಿಮ್ಮ ಮಾತುಗಳೇ ತಕ್ಕ ಪ್ರಮಾಣಗಳಾಗಿರುವವು. ಈಗಿದ್ದ ಮರ್ಯಾದೆಯು ನನಗೆ ಸಾಕು. ವಿವಾಹ ಮಾಡಿಕೊಳ್ಳಲಿಕ್ಕೆ ನನಗೆ ಸಾಧ್ಯವಿಲ್ಲ. ಆಜ್ಞೆಯನ್ನು ಮೀರಿದೆನೆಂದು ಖತಿಗೊಳ್ಳಬೇಡಿರಿ."

"ನಿನಗೆ ವಿವಾಹವಾಗಲಿಕ್ಕೆ ಅಡ್ಡಿಯೇನಿರುವದು?"

"ಖಾವಿಂದ, ಕ್ಷಮಿಸಿರಿ. ನಾನು ವಿವಾಹಿತನಿರುವೆನು."

"ಇಷ್ಟೇಯೊ?" ಎಂದು ನವಾಬನು ಗಹಗಹಿಸುತ್ತ ನುಡಿದನು:— "ನೀನು ನಿನ್ನ ಪತ್ನಿಯ ತ್ಯಾಗ ಮಾಡು."

"ನನಗೆ ಇಬ್ಬರು ಹೆಂಡಿರಿರುವರು."

"ತ್ಯಾಗ ಮಾಡಲಿಕ್ಕೆ ಸಿದ್ಧನಾದ ಮೇಲೆ ಎಷ್ಟು ಜನರಿದ್ದರೇನು?"

"ಅವರಲ್ಲಿ ಒಬ್ಬಳು ನನ್ನನ್ನು ತ್ಯಜಿಸಿ ಹೋಗಿರುವಳು. ಎರಡನೆಯವಳನ್ನು ನಾನು ಈ ಜನ್ಮದಲ್ಲಿ ತ್ಯಾಗ ಮಾಡುವಂತಿಲ್ಲ."

"ಅವಳು ಶಹಜಾದಿಯ ದಾಸಿಯಾಗಿ ಇರಲೊಲ್ಲಳೇಕೆ."

"ಹುಜೂರ!"

"ಮತ್ತೇನು ಕಾಲಾಚಾಂದ?"

"ನಾನು ಸನಾತನ ಧರ್ಮೀಯನು."

"ಈ ಸಂಗತಿಯು ನನಗೆ ಗೊತ್ತಿರುವದು. ನಿನಗೆ ಪವಿತ್ರವಾದ ಇಸ್ಲಾಮ ಧರ್ಮದ ದೀಕ್ಷೆ ಕೊಡುವದಕ್ಕಾಗಿ ಮೌಲವೀ ಸಾಹೇಬರಿಗೆ ತಿಳಿಸುವೆನು."

"ತ್ರೈಲೋಕ್ಯ ಸಾಮ್ರಾಜ್ಯವಿತ್ತರೂ ನಾನು ಧರ್ಮತ್ಯಾಗ ಮಾಡಲಾರೆನು."

"ನೀನು ಧರ್ಮತ್ಯಾಗ ಮಾಡುವದಿಲ್ಲವೆ? ವಂಗೇಶ್ವರನ ಪುತ್ರಿಗಾಗಿ-ದಿವ್ಯ ಲಾವಣ್ಯವತಿಗಾಗಿ ನೀನು ಧರ್ಮತ್ಯಾಗ ಮಾಡುವದಿಲ್ಲವೆ?"

"ಹುಜೂರ, ಈ ಮಾತು ನನಗೆ ಸಾಧ್ಯವಿಲ್ಲ."

"ಧರ್ಮತ್ಯಾಗ ಮಾಡದಿದ್ದರೆ ಪ್ರಾಣತ್ಯಾಗ ಮಾಡುವ ಇಚ್ಛೆ

ಯಿರುವದೆ?''

''ಖಾವಿಂದ, ನಿಮ್ಮ ಅಧೀನದಲ್ಲಿಯ ಈ ಸೇವಕನಿಗೆ ಹೀಗೆ ಭಯ ತೋರಿಸುವ ಉದ್ದೇಶವೇನು? ನಾನು ಮರಣಕ್ಕೆ ಸಿದ್ಧನಿರುವೆನು. ಧರ್ಮತ್ಯಾಗ ಮಾಡುವದಕ್ಕಿಂತ ಪ್ರಾಣತ್ಯಾಗ ಮಾಡುವದೇ ಮೇಲು.''

ಕಾಲಾಚಾಂದನ ಸ್ಪಷ್ಟೋಕ್ತಿಗಳನ್ನು ಕೇಳಿ ಸುಲತಾನನ ತಾಮಸ ಹೃದಯವು ಜಾಗ್ರತವಾಯಿತು. ತಾನು ಆಡಿದಂತೆ ಕೃತಿಯನ್ನು ಮಾಡಿ ತೋರಿಸಬೇಕೆಂದು ಅವನು ಈರ್ಷೆಗೊಳಗಾದನು. ತನ್ನ ಪ್ರೀತಿಯ ಕುಮಾರಿಯನ್ನು-ಅತುಲನೀಯ ಸೌಂದರ್ಯಶಾಲಿಯನ್ನು-ತನ್ನ ಕೈಕೆಳಗಿನ ಸೇವಕನು ವರಿಸಲೊಪ್ಪದ್ದನ್ನು ನೋಡಿ, ಮಾನಧನನಾದ ಆ ನವಾಬನ ಅಂತರಂಗವು ಅತ್ಯಂತ ಕ್ಷೋಭೆಗೊಂಡಿತು. ತನ್ನ ಆಜ್ಞೆಯನ್ನಷ್ಟೇ ಅಲ್ಲ; ವಿನಂತಿಯನ್ನು ಸಹ ಮನ್ನಿಸದೆ ಮದಾಂಧತೆಯನ್ನು ತೋರಿಸಿದ ಅವಿಧೇಯ ನಗರಪಾಲನನ್ನು ಜೀವಂತವಾಗಿ ಉಳಿಸಿದರೆ ವಂಗರಾಜ್ಯದಲ್ಲಿ ತನ್ನ ಗೌರವವೇ ಉಳಿಯುವದಿಲ್ಲವೆಂದು ಅವನು ಬಗೆದನು. ಆಗ ಅವನು ಕ್ರೋಧದಿಂದ:—''ಕಾಲಾಚಾಂದ, ನೀನು ನಿಜವಾಗಿ ಪಶುಕೋಟಿಯೊಳಗಿನವನಿರುವೆ.''

''ಖಾವಿಂದ, ನಿಮ್ಮ ಸೇವಾವೃತ್ತಿಯನ್ನು ಸ್ವೀಕರಿಸಿದ ನಾನು ಪಶುಕೋಟಿಯೊಳಗಿನವನೇ ಸರಿ.''

''ನೀನು ಶಹಾಜಾದಿಯನ್ನು ವರಿಸದಿದ್ದರೆ ನಿಶ್ಚಯವಾಗಿ ಕೊಲೆಗೀಡಾಗುವೆ.''

''ಅದಕ್ಕೆ ನಾನು ಸಿದ್ಧನೇ ಇರುವೆನು. ನೀವು ಎಷ್ಟು ಬಾರಿ ಕೇಳಿದರೂ ನನ್ನದು ಇದೊಂದೇ ಉತ್ತರವು. ಈ ಕಾಲಾಚಾಂದನು ನಿಶ್ಚಲ ಮನಸ್ಕನೂ ಸತ್ಯಸಂಕಲ್ಪದವನೂ ಇರುವನೆಂಬದನ್ನು ನೀವು ಮರೆಯಬೇಡಿರಿ.''

''ನೀನು ಇಸ್ಲಾಮಿ ಧರ್ಮವನ್ನು ಸ್ವೀಕರಿಸದಿದ್ದರೆ ಅಷ್ಟೇ ಹೋಯಿತು; ದುಲಾರಿಯು ಹಿಂದು ಧರ್ಮದೀಕ್ಷೆ ಹೊಂದಿದರೆ ನೀನು ಅವಳನ್ನು ವರಿಸುವೆಯಾ?''

"ಹಿಂದುಗಳು ವಿಧರ್ಮೀಯರನ್ನು ತಮ್ಮ ಧರ್ಮದಲ್ಲಿ ತೆಗೆದು ಕೊಳ್ಳುವದಿಲ್ಲ."

"ಇದೆಂಥ ಧರ್ಮವೊ ನಿಮ್ಮದು! ಯಾವನೊಬ್ಬ ಇಸ್ಲಾಮೀಯನು ನಿಮ್ಮ ಸನಾತನ ಧರ್ಮದಲ್ಲಿ ಶ್ರದ್ಧೆಯುಳ್ಳವನಾದರೆ ಅವನನ್ನು ನಿಮ್ಮ ಧರ್ಮದಲ್ಲಿ ತೆಗೆದುಕೊಂಡರೆ ಪಾಪ ಒರುವದೇನು? ನಿಮ್ಮ ಈ ಅಂಧ ಶ್ರದ್ಧೆಯಿಂದಲೆ ಹಿಂದು ಜನಾಂಗವು ದಿನ ದಿನಕ್ಕೆ ಕ್ಷೀಣದೆಶೆಯನ್ನು ಹೊಂದುತ್ತಲಿರುವದು."

"ಶುದ್ಧೀಕರಣವೂ ಹಿಂದೂಕರಣವೂ ಹಿಂದುಸ್ಥಾನದ ಏಳ್ಗೆಯ ಪ್ರಬಲವಾದ ಸಾಧನಗಳಲ್ಲಿ ಗಣಿಸಲ್ಪಡುವವೆಂಬದು ನನಗೆ ಗೊತ್ತಿರು ವದು. ಅಂಧಶ್ರದ್ಧೆಯವರಾದ ನಮ್ಮ ಜನರು ಪರಂಪರಾಭಿಮಾನವನ್ನು ಬಿಡಲೊಲ್ಲರು. ಕಾಲಮಾನಪರಿಸ್ಥಿತಿಗನುಸಾರವಾಗಿ ನಡೆದು ಬಂದ ಪದ್ಧತಿಯಲ್ಲಿ ಸುಧಾರಣೆ ಮಾಡಬೇಕಾಗುವದು. ಪರಧರ್ಮದವರು ಧಾರ್ಮಿಕ ದಬ್ಬಾಳಿಕೆಯನ್ನು ನಡೆಯಿಸಿದಾಗ ಕಣ್ಣು ಮುಚ್ಚಿಕೊಂಡು ಕುಳಿತರೆ ನಡೆಯುವದಿಲ್ಲ. ಶುದ್ಧೀಕರಣ-ಹಿಂದೂಕರಣ ಚಲನವಲನದಿಂದ ವಿಧರ್ಮೀಯರ ಏರಾಟವನ್ನು ನಿಲ್ಲಿಸುವದು ರಾಷ್ಟ್ರಧರ್ಮದ ಒಂದು ಅಂಗವಾಗಿರುವದು. ರಾಜ್ಯಶಾಸ್ತ್ರಕ್ಕೂ ಧರ್ಮಶಾಸ್ತ್ರಕ್ಕೂ ಮಹದಂತರ ವಿರುವದೆಂಬ ಮಾತು ನಮ್ಮ ಜನರಿಗೆ ಎಂದು ತಿಳಿಯುವದೋ ಅಂದೇ ಸುದಿನವೆಂದು ತಿಳಿಯಬೇಕು."

"ಕಾಲಾಚಾಂದ, ನಿನ್ನ ಪ್ರವೃತ್ತಿಯು ಈ ಬಗೆಯದಿದ್ದರೆ, ನೀನು ಅದರಂತೆ ಆಚರಿಸಿ, ನಿನ್ನ ಜನರನ್ನು ಅನುಕರಣ ಮಾಡಹಚ್ಚಲಿಕ್ಕೆ ಪ್ರತ್ಯ ವಾಯವೇನು? ನೀನು ಸ್ವಧರ್ಮ ತ್ಯಾಗಮಾಡಬೇಕೆಂದು ನನ್ನ ಇಚ್ಛೆ ಯಿಲ್ಲ; ದುಲಾರಿಯನ್ನು ಹಿಂದೂಕರಣ ಪದ್ಧತಿಯಿಂದ ಸ್ವಧರ್ಮದಲ್ಲಿ ತೆಗೆದುಕೋ. ಹೀಗಾದರೆ ಯಾವ ಬಗೆಯ ಸಂಕೋಚವೂ ಉಳಿಯುವ ದಿಲ್ಲ. ನಿನ್ನ ಧರ್ಮದ ರಕ್ಷಣೆಯಾದಂತಾಗಿ ಶಹಜಾದಿಯ ಮನೋ ರಥವೂ ನನ್ನ ಆಜ್ಞೆಯೂ ಈಡೇರಿದಂತಾಗುವವು."

"ಹಿಂದೂಕರಣ ಪದ್ಧತಿಯು ನಮ್ಮ ಧರ್ಮದಲ್ಲಿ ನೆಲೆಗೊಳ್ಳುವ

ವರೆಗೆ ನಾನು ನಿಮ್ಮ ಮನಸ್ಸಿನಂತೆ ನಡೆಯಲಿಕ್ಕೆ ಮಾಗಳವಿಲ್ಲ. ಜಾತಿ ಧರ್ಮಗಳ ಮಾತು ಒತ್ತಟ್ಟಿಗಿರಲಿ. ಯಾವ ಸ್ತ್ರೀಯ ಮೇಲೆ ಯತ್ಕಿಂಚಿತ್ತಾದರೂ ನನ್ನ ಪ್ರೇಮವಿಲ್ಲವೋ ಅಂಥವಳನ್ನು ನಾನು ಹೇಗೆ ವರಿಸಲಿ?''

ಕಾಲಾಚಾಂದನ ಮಾತುಗಳನ್ನು ಕೇಳಿ ನವಾಬನು ಸ್ತಂಭಿತನಾದನು. ತನ್ನ ಆಜ್ಞೆಯನ್ನು ಉಲ್ಲಂಘಿಸುವ ಧೈರ್ಯವು ಮುಖ್ಯ ವಜೀರನಿಂದ ಸಹ ಅಸಾಧ್ಯವಿರಲು, ಆ ಕೆಲಸವನ್ನು ಸಾಮಾನ್ಯನಾದ ಅಧಿಕಾರಿಯು ಮಾಡಿದನೆಂದು ಅವನು ಕ್ರೋಧಗೊಂಡನು. ದುಲಾರಿ-ಕಾಲಾಚಾಂದರು ಪರಸ್ಪರರಲ್ಲಿ ಅನುರಾಗವುಳ್ಳವರಾಗಿರುವರೆಂದೂ, ಕೇವಲ ಬಾಹ್ಯಾಡಂಬರಕ್ಕಾಗಿ ತನ್ನ ಆಜ್ಞೆಯನ್ನು ಪಡೆಯುವ ಸೋಗು ಮಾಡುತ್ತಿರುವರೆಂದೂ ನವಾಬನು ಮೊದಮೊದಲು ತಿಳಿದಿದ್ದನು. ವಿವಾಹದ ಪ್ರಸ್ತಾಪ ತೆಗೆದೊಡನೆಯೆ ಕಾಲಾಚಾಂದನು ಅತ್ಯಾನಂದದಿಂದ ತನ್ನ ಮಾತಿಗೆ ಒಪ್ಪುವನೆಂದೂ, ಈ ಉಪಕಾರಕ್ಕಾಗಿ ತನ್ನನ್ನು ಕೊಂಡಾಡುವನೆಂದೂ ನವಾಬನ ಭಾವನೆಯಾಗಿತ್ತು. ಕಾಲಾಚಾಂದನ ಸ್ಪಷ್ಟೋಕ್ತಿಗಳಿಂದ ಅವನ ಅಧಿಕಾರದ ಹಾಗು ಐಶ್ವರ್ಯದ ಮದವು ಲುಪ್ತಪ್ರಾಯವಾಯಿತು. ಆಗ ಅವನು ಸಂತಪ್ತನಾಗಿ— ''ನಗರಪಾಲ, ಒಂದು ಕಡೆಗೆ ಬಂಗಾಲದ ಸಿಂಹಾಸನವೂ ಮತ್ತೊಂದು ಕಡೆಗೆ ಮೃತ್ಯುವೂ ಇರುವವು. ಇವುಗಳಲ್ಲಿ ನಿನಗೆ ಯಾವದು ಶ್ರೇಷ್ಠವು? ಸಿಂಹಾಸನವೊ, ಮೃತ್ಯುವೊ?''

''ಸರಕಾರ, ಒಮ್ಮೆಯಲ್ಲವೆಂದರೆ ನೂರು ಸಾರೆ ಹೇಳುವೆನು; ನನಗೆ ಮೃತ್ಯುವೇ ಶ್ರೇಯಸ್ಕರವಾಗಿರುವದು.''

''ಬಹಳೇ ಒಳಿತಾಯಿತು. ನಿನ್ನ ಮನಸ್ಸಿನಂತೆ ಆಗಲಿ. ಇದೇ ನಿನ್ನ ಕಡೆಯ ಉತ್ತರವಷ್ಟೆ?''

''ಜಹಾಂಪನಾಹ, ನಿಮ್ಮಲ್ಲಿ ಸೇವೆ ಮಾಡಬೇಕೆಂಬ ಉದ್ದೇಶದಿಂದ ನಾನು ಇಲ್ಲಿಗೆ ಬಂದೆನು. ನಾನು ಇದು ವರೆಗೆ ನನ್ನ ಕರ್ತವ್ಯವನ್ನು ಏಕನಿಷ್ಠೆಯಿಂದ ಜರುಗಿಸಿದೆನು. ರಾಜನ ದುಷ್ಟ ಲಹರಿಗಾಗಿ ನನಗೆ ಇಲ್ಲಿಯೇ ಮರಣವೊದಗಿದರೆ ಚಿಂತಿಸುವದೇಕೆ? ರಾಜನು ಪ್ರಜೆ

ಗಳ ಮೇಲೆಯೂ, ತಂದೆಯು ಮಗನ ಮೇಲೆಯೂ ಮುನಿದರೆ ಉಪಾಯ ವೇನಿರುವದು? ಇಗೊಳ್ಳಿರಿ, ನೀವು ಕೊಟ್ಟ ಖಡ್ಗವನ್ನು ಪ್ರತಿಗ್ರಹಿಸಿರಿ. ಈ ದೇಹವೂ ದೇಹಾಂತರ್ಗತವಾದ ಜೀವವೂ ನಿಮ್ಮ ಕೈಯೊಳಗಿರುವವು. ಇವುಗಳ ಮೇಲೆ ನೀವು ಮನಬಂದಂತೆ ಅತ್ಯಾಚಾರ ನಡೆಯಿಸಿರಿ; ಆದರೆ ನನ್ನ ಮನಸ್ಸಿನ ಮೇಲೆಯೂ ಪ್ರಾಣಕ್ಕಿಂತ ವರಿಷ್ಠವಾದ ಧರ್ಮದ ಮೇಲೆಯೂ ನಿಮ್ಮ ಅಧಿಕಾರವಿಲ್ಲೆಂಬದನ್ನು ಮರೆಯಬೇಡಿರಿ. ನಾನು ಇದೇ ಕ್ಷಣದಲ್ಲಿ ಮರಣಕ್ಕೆ ಸಿದ್ಧನಾಗಿರುವೆನು. ಯಾವ ಸ್ತ್ರೀಯಲ್ಲಿ ನನ್ನ ಪ್ರೇಮವಿಲ್ಲವೋ ಅಂಥವಳನ್ನು ವರಿಸಲಿಕ್ಕೆ ನಾನು ಸಿದ್ಧನಿರುವದಿಲ್ಲವೆಂದು ಮತ್ತೊಮ್ಮೆ ಸ್ಪಷ್ಟವಾಗಿ ಹೇಳುವೆನು. ಇದೇ ನನ್ನ ಕೊನೆಯ ಉತ್ತರವು.''

ಕಾಲಾಚಾಂದನ ಅನುಪಮ ಧರ್ಮಪ್ರಿಯತೆಯನ್ನು ನೋಡಿ ನವಾಬನು ಬೆರಳು ಕಚ್ಚಿದನು! ಅದ್ವಿತೀಯ ಸೌಂದರ್ಯವತಿಯನ್ನೂ ಅನುಪಮವಾದ ವೈಭವವನ್ನೂ ತುಚ್ಛೀಕರಿಸಿ, ಮರಣಕ್ಕೆ ಸಿದ್ಧನಾದ ಕಾಲಾಚಾಂದನು ಅತ್ಯಂತ ಪ್ರತಿಭಶಾಲಿಯಿರುವನೆಂದು ಅವನು ತಿಳಿದನು. ಕೇವಲ ಧರ್ಮಕ್ಕಾಗಿ ಪ್ರಾಣಕೊಡುವ ಕಾಲಾಚಾಂದನು ಅತುಲನೀಯ ನಿರುವನೆಂದು ನವಾಬನ ಭಾವನೆಯಾಯಿತು. ಆಗ ಅವನು ತನ್ನ ಹೃದಯ ವನ್ನು ತುಂಬಿ ಉಕ್ಕುತ್ತಿರುವ ಸಂತಾಪವನ್ನು ಬಳ್ಳೇ ಪ್ರಯಾಸದಿಂದ ಶಾಂತಪಡಿಸಿಕೊಂಡು:—''ಕಾಲಾಚಾಂದ, ನೀನು ನನ್ನ ಮಗಳ ಮನೋ ರಥವನ್ನು ಪೂರ್ಣಮಾಡದಿದ್ದರೆ ಗತ್ಯಂತರವಿಲ್ಲ. ಈ ವಿಷಯದಲ್ಲಿ ನೀನು ಚನ್ನಾಗಿ ವಿಚಾರ ಮಾಡು. ಮನುಷ್ಯನ ಮೊದಲಿನ ವಿಚಾರಗಳು ಕೆಲವು ದಿನಗಳ ಮೇಲೆ ಸ್ಥಿತ್ಯಂತರ ಹೊಂದುವ ಸಂಭವವಿರುವದರಿಂದ ನಾನು ನಿನಗೆ ಎರಡು ವಾರಗಳ ಅವಧಿಯನ್ನು ಕೊಡುತ್ತೇನೆ. ಅಷ್ಟರಲ್ಲಿ ಆನಂದದಾಯಕವಾದ ಶುಭವಾರ್ತೆಯನ್ನು ನಾನು ಕೇಳುವೆನೆಂದು ಹಾರೈಸಿಕೊಂಡಿರುವೆನು. ಈಗ ನೀನು ನಿನ್ನ ಖಡ್ಗವನ್ನು ತೆಗೆದುಕೊಂಡು ಹೋಗು.''

''ಇನ್ನು ಮೇಲೆ ನಿಮ್ಮ ದಾಸ್ಯದಲ್ಲಿರುವದು ನನಗೆ ಸಾಧ್ಯವಿಲ್ಲ;

ಅಂದ ಮೇಲೆ ಈ ಖಡ್ಗವನ್ನೇನು ಮಾಡಲಿ? ನನಗೆ ಖಡ್ಗವೂ ಬೇಡ; ನಿಮ್ಮ ಅವಧಿಯೂ ಬೇಡ. ಇನ್ನು ಹವಿನ್ನೈದು ದಿವಸಗಳಷ್ಟೇ ಏಕೆ, ಹದಿನೈದು ವರ್ಷಗಳ ಮೇಲಾದರೂ ನಾನು ಇದೇ ಉತ್ತರವನ್ನು ಕೊಡುವವನು.''

''ನಿನಗೆ ಜೀವನವು ಬೇಡವಾಗಿದೆ.''

''ಧರ್ಮ ಭ್ರಷ್ಟತೆಯ ಜೀವನವು ನನಗೆ ಬೇಡವಾಗಿದೆ.''

'ಕಾಲಾಚಾಂದ, ವಿಮನಸ್ಕ ಸ್ಥಿತಿಯಲ್ಲಿ ವಾದವಿವಾದವು ತರವಲ್ಲ. ಈಗ ನೀನು ಹೊರಟು ಹೋಗು. ಇನ್ನು ಎರಡು ವಾರಕ್ಕೆ ನಿಶ್ಚಿತವಾದ ಉತ್ತರವನ್ನು ಹೇಳು. ಒಂದು ಕಡೆಯಲ್ಲಿ ಸಿಂಹಾಸನವಿದ್ದರೆ ಮತ್ತೊಂದು ಕಡೆಯಲ್ಲಿ ಮೃತ್ಯುವಿರುವದು. ಇವೆರಡರಲ್ಲಿ ಯಾವದು ಶ್ರೇಯಸ್ಕರವೆಂಬದನ್ನು ನಿನಗೆ ಕೊಟ್ಟ ಅವಧಿಯೊಳಗಾಗಿ ನಿರ್ಣಯಿಸಿಕೋ.'

ಕಾಲಾಚಾಂದನು ನವಾಬನ ಅಪ್ಪಣೆಯನ್ನು ಪಡೆಯದೆ, ಅವನಿಗೆ ಮುಜುರೆಯನ್ನರ್ಪಿಸದೆ ಹಾಗೆಯೆ ಹೊರಟು ಹೋದನು.

ಅನುಪಮ ಧರ್ಮಪ್ರಿಯತೆಯ ಕಾಲಾಚಾಂದನ ಮೇಲೆ ಮುಂದೆ ಯಾವ ಪ್ರಸಂಗಗಳೊದಗಿದವು?

---

## ಆತ್ಮಸಮರ್ಪಣ!

''ಬೂನಾ!''

''ಯಾಕೆ ಮಹಾರಾಜರೆ?''

''ನಮ್ಮ ಕೆಲಸವು ತೀರಿತು.''

''ಇಲ್ಲಿಯ ಕೆಲಸವೆ?''

''ಇಲ್ಲಿಯದಷ್ಟೇ ಅಲ್ಲ; ಈ ಜಗತ್ತಿನೊಳಗಿನ ಕೆಲಸವೂ ತೀರಿತು.'' ಎಂದು ಕಾಲಾಚಾಂದನು ಹೇಳಿದ ಕೂಡಲೆ ಬೂನಾನು ಸಾಶಂಕ ದೃಷ್ಟಿಯಿಂದ ಅವನ ಮುಖವನ್ನು ನೋಡುತ್ತ ಕುಳಿತನು. ಕಾಲಾಚಾಂದನು ಕಾಲತ್ರಯದಲ್ಲಿಯೂ ಅಸತ್ಯ ಭಾಷಣಗಳನ್ನಾಡುವವನಲ್ಲವೆಂಬದು

ಬೂನಾನ ಮನವರಿಕೆಯಿದ್ದುದರಿಂದ ಕಾಲಾಚಾಂದನ ಮಾತಿನ ಮರ್ಮವು ತಿಳಿಯಲಿಕ್ಕೆ ಅವನಿಗೆ ಬಹಳ ವೇಳೆಯು ಹಿಡಿಯಲಿಲ್ಲ. ಯಾವದೊಂದು ಘನತರವಾದ ಗಂಡಾಂತರವು ತನ್ನ ಒಡೆಯನ ಮೇಲೆ ಬಂದಿರುವದೆಂದು ಬೂನಾನ ಮನಸ್ಸಿಗೆ ನಂಬಿಗೆಯಾಯಿತು. ಕೂಡಲೆ ಅವನ ನೇತ್ರಗಳಿಂದ ದುಃಖಾಶ್ರುಗಳು ಧಾರೆಗಟ್ಟಿ ಹರಿಯ ತೊಡಗಿದವು. ಬೂನಾನು ದುಃಖಿತನಾದದ್ದನ್ನು ನೋಡಿ ಕಾಲಾಚಾಂದನ ಹೃದಯವು ಕ್ಲೇಶಗೊಂಡಿತು. ಆಗ ಅವನು ಖಿನ್ನಮನಸ್ಕನಾಗಿ:—"ಬೂನಾ, ನೀನು ನನ್ನ ಸುಖ-ದುಃಖಗಳಿಗೆ ಪಾಲುಗಾರನಾಗಿರುವೆ. ನಿನ್ನ ಸೇವಾಧರ್ಮವು ಅವರ್ಣನೀಯವಿರುವದು. ನನ್ನ ಸಲುವಾಗಿ ಅಳುವವರೆಂದರೆ ಈ ಜಗತ್ತಿನಲ್ಲಿ ಇಬ್ಬರು ಮಾತ್ರ ಇರುವರು. ಒಬ್ಬಳು ನನ್ನ ತಾಯಿಯು; ಇನ್ನೊಂದು ವ್ಯಕ್ತಿಯೆಂದರೆ ನೀನು. ಬೂನಾ ನವಾಬನು ನನಗೆ ಮರಣದಂಡನೆ ವಿಧಿಸಬೇಕೆಂದು ನಿಶ್ಚಯಿಸಿರುವನು!"

ಈ ಮಾತುಗಳಿಂದ ಬೂನಾನ ಸರ್ವಾಂಗವು ನಡುಗಿತು. ನವಾಬನು ಇಂತಹ ರಾಕ್ಷಸೀ ದಂಡನೆಯನ್ನು ವಿಧಿಸಬೇಕೆಂದಿರುವ ಕಾರಣವೇನೆಂಬದನ್ನು ವಿಚಾರಿಸುವ ಕುತೂಹಲವು ಅವನ ಮನಸ್ಸಿನಲ್ಲಿ ಉತ್ಪನ್ನವಾಗಿತ್ತು. ದುಃಖಾವೇಗದಿಂದ ಅವನ ಕಂಠವು ಸದ್ಗದಿತವಾದದ್ದರಿಂದ ಮಾತುಗಳೇ ಹೊರಡದಂತಾಗಿದ್ದವು. ಎಷ್ಟೋ ವೇಳೆಯ ಮೇಲೆ ಅವನು ಬಹಳೇ ಕಷ್ಟದಿಂದ:—"ಮಹಾರಾಜರೆ, ಮೃತ್ಯುವಿನ ಶಿಕ್ಷೆ ಹೊಂದುವಂತಹ ಅಪರಾಧವು ನಿಮ್ಮಿಂದ ಘಟಿಸಿರುವದೆ?"

"ಅಪರಾಧವು ಮಹತ್ತರವಾದದ್ದೊಂದು ಸುಲತಾನನ ಗೃಹಿಕೆಯಾಗಿರುವದು. ತನ್ನ ಕುಮಾರಿಯನ್ನು ವಿವಾಹವಾಗಲಿಕ್ಕೆ ಅವನು ನನಗೆ ಆಜ್ಞೆ ಮಾಡಿದನು. ನಾನು ಆ ಮಾತಿಗೆ ಒಪ್ಪದ್ದರಿಂದ ಅವನು ಮರಣದಂಡನೆ ವಿಧಿಸುವದನ್ನು ನಿಶ್ಚಯಿಸಿದನು."

"ನೀವು ನವಾಬನ ಮಾತಿಗೆ ಒಪ್ಪಲಿಲ್ಲವೇಕೆ? ನಿಮಗೆ ಇಬ್ಬರು ಹೆಂಡರಿರುವರೆಂದು ಕೇಳಿರುವೆನು."

"ಇದ್ದರೇನಾಯಿತು?"

"ಈಗ ಮೂರನೆಯವಳನ್ನು ವರಿಸಿದರೆ ಯಾವ ತೊಂದರೆಯಾಗುವದು?"

"ನಾನು ಯವನಿಯನ್ನು ವರಿಸಲಾ?"

"ಅವಳನ್ನು ಹಿಂದುಧರ್ಮದಲ್ಲಿ ತೆಗೆದುಕೊಂಡು ಪಾಣಿಗ್ರಹಣ ಮಾಡಿರಿ."

"ಹಿಂದು ಸಮಾಜವು ಅವಳನ್ನು ತನ್ನಲ್ಲಿ ತೆಗೆದುಕೊಳ್ಳುವದಿಲ್ಲ."

"ಮಹಾರಾಜರೆ, ಪ್ರಯತ್ನಿಸಿ ನೋಡಿರಿ. ಸಮಾಜವು ಅವಳ ಹಿಂದುತ್ವವನ್ನು ಮಾನ್ಯಮಾಡಬಹುದು."

"ಬೂನಾ, ಜಾತಿ-ಧರ್ಮಗಳ ಮಾತು ಒತ್ತಟ್ಟಿಗಿರಲಿ. ನಾನು ಯಾವಳಲ್ಲಿ ಅನುರಾಗ ತಳೆವಿಲ್ಲವೊ, ಯಾವಳ ವಿಷಯವಾಗಿ ನನ್ನಲ್ಲಿ ಪ್ರಣಯಭಾವನೆಯು ಲವಲೇಶವಾದರೂ ನೆಲೆಗೊಂಡಿಲ್ಲವೋ ಅಂಥವಳನ್ನು ಹೇಗೆ ವರಿಸಲಿ? ರಾಜ್ಯದ ಸಲುವಾಗಿಯೂ, ವೈಭವದ ಸಲುವಾಗಿಯೂ, ಪ್ರಾಣರಕ್ಷಣೆಯ ಪ್ರಯತ್ನದಿಂದಲೂ ನಾನು ನನ್ನ ಮನಸ್ಸಿನ ವಿರುದ್ಧವಾಗಿ ಎಂದೂ ನಡೆಯಲಾರೆನು. ನಾನು ಸಮಾಜಕ್ಕೆ ಬಹಳೇ ಹೆದರುತ್ತಿರುವೆನು. ಯವನಿಯನ್ನು ವಿವಾಹವಾದ ದಿನವೇ ನನ್ನನ್ನು ಹಿಂದು ಸಮಾಜವು ಬಹಿಷ್ಕೃತನೆಂದು ತಿಳಿದುಕೊಳ್ಳುವದು. ನಮ್ಮ ಸಮಾಜದಲ್ಲಿ ಹಿಂದೂಕರಣ ಪದ್ಧತಿಯು ನೆಲೆಗೊಳ್ಳುವ ವರೆಗೆ ನಾನು ಈ ಸಾಹಸಕ್ಕೆ ಹೇಗೆ ಹೋಗಲಿ?"

"ನವಾಬಕನ್ಯೆಯು ನಿಮಗೆ ಆತ್ಮಾರ್ಪಣೆ ಮಾಡಿದ್ದರೆ?"

"ತೀರ ಅಸಂಭವವು. ಬೂನಾ, ನಾನು ಇದುವರೆಗೂ ಅವಳ ಮುಖಾವಲೋಕನ ಸಹ ಮಾಡಿಲ್ಲ. ಅವಳು ಮಾತ್ರ ನನ್ನನ್ನು ನೋಡಿರುವಳೆಂದು ಹೇಳಲಿಕ್ಕೆ ಬರುವಂತಿದೆ. ಪರಸ್ಪರರಲ್ಲಿ ಪ್ರಣಯವು ನೆಲೆಗೊಳ್ಳುವವರೆಗೆ ಆತ್ಮಾರ್ಪಣೆ ಮಾಡುವ ಸಾಹಸಕ್ಕೆ ಅದಾವ ಅಬಲೆಯು ಮನಸ್ಸು ಮಾಡುವಳು? ಅವಳು ನನ್ನನ್ನು ನೋಡಿ ವಿಕಾರವಶಳಾಗಿರಬಹುದು. ಅಂತೆಯೆ ನವಾಬನು ನನಗೆ ಈ ಪರಿಯಾಗಿ ಒತ್ತಾಯ ಮಾಡಿದನು. ಕಂಡಕಂಡವರಲ್ಲಿ ವಿಕಾರವಶರಾಗುವ ಸ್ವೈರವೃತ್ತಿಯ ಅಬ

ಲೆಯರನ್ನು ಗೃಹಿಣಿಯನ್ನಾಗಿ ಮಾಡಿಕೊಳ್ಳುವದು ಉಚಿತವೆ? ನವಾಬ ಕನ್ಯೆಯು ಅತ್ಯಂತ ಲಹರಿಯ ಸ್ವಭಾವದವಳಾಗಿ ತೋರುವಳು. ಸೌಂದರ್ಯದ ಲೋಭಕ್ಕೊಳಗಾದರೆ ಜಾತಿಭ್ರಷ್ಟತೆ-ಧರ್ಮಭ್ರಷ್ಟತೆ ಹೊಂದಿದ್ದು ಮಾತ್ರ ನಿಜವಾಗುವದೆಂದು ನನಗೆ ನಂಬಿಗೆಯಾಗಿರುವದು.. ಬೂನಾ, ಇಂತಹ ಹುಚ್ಚುತನಕ್ಕೆ ಹೋಗಿ ಕಡುಮೂರ್ಖನೆನಿಸಿಕೊಳ್ಳಲಾ?''

ಕಾಲಾಚಾಂದನ ಮಾತಿಗೆ ಏನೂ ಉತ್ತರವೀಯದೆ ಬೂನಾನು ಸ್ವಸ್ಥವಾಗಿ ಕುಳಿತನು. ಅನಂತರದಲ್ಲಿ ಕಾಲಾಚಾಂದನು ಉಪ್ಪರಿಗೆಯ ಮೇಲೆ ಹೋದನು. ತನ್ನ ಕೊನೆಯ ಸಂದೇಶವನ್ನು ಸ್ವಕೀಯರಿಗೆ ತಿಳಿಸಬೇಕೆಂದು ಅವನು ಯೋಚಿಸಿದನು. ಆಗ ಅವನು ತನ್ನ ತಾಯಿಗೂ ಗದಾಧರನಿಗೂ ಭೂಪಬಾಲೆ-ವ್ರಜಬಾಲೆಯರಿಗೂ ಒಂದೊಂದು ಪತ್ರ ಬರೆದನು. ಬಲಾತ್ಕಾರದಿಂದ ವಿವಾಹವಾದ ಬಗ್ಗೆ ವ್ರಜಬಾಲೆಯ ಪತ್ರದಲ್ಲಿ ಅವನು ಪಶ್ಚಾತ್ತಾಪವನ್ನು ವ್ಯಕ್ತಪಡಿಸಿದ್ದನು. ನಿನ್ನ ಮನಸ್ಸಿನಲ್ಲಿ ನೆಲೆಗೊಂಡ ಕುನುಸಿನ ಭಾವನೆಯನ್ನು ನವಾಬನು ಬೇಗನೆ ಶಾಂತಪಡಿಸುವವನಿರುವನೆಂಬದನ್ನಾದರೂ ಅವನು ಆ ಪತ್ರದಲ್ಲಿ ಕಾಣಿಸಿದ್ದನು. ತನ್ನನ್ನು ವಿವಾಹವಾಗಿ ಲೇಶಮಾತ್ರವಾದರೂ ಸೌಖ್ಯವನ್ನು ಹೊಂದದೆ ಇದ್ದ ಭೂಪಬಾಲೆಯನ್ನು ಉಪದೇಶಪರ ವಾಕ್ಯಗಳಿಂದ ಸಂತೈಸಬೇಕೆಂದು ಬಗೆದು, ಅದೇ ಮೇರೆಗೆ ಪತ್ರದಲ್ಲಿ ಚಿತ್ರಿಸಿದ್ದನು. ತಾಯಿಯಾದ ಹರಸುಂದರಿಯ ಮನಸ್ಸು ಸಾಂತ್ವನಗೊಳ್ಳುವದಕ್ಕಾಗಿ ಅವನು ವೇದಾಂತಪರವಾದ ಸಂಗತಿಗಳನ್ನು ಪತ್ರದಲ್ಲಿ ಬರೆದನು. ಗದಾಧರನ ಪತ್ರದಲ್ಲಿಯ ಸಂಗತಿಯು ಕೆಳಗೆ ಬರೆದಂತಿತ್ತು.

''ಪ್ರಿಯ ಬಂಧು-ಗದಾಧರ, ನೀನು ಪರಮ ಸಾತ್ವಿಕನು. ನೀನು ನನ್ನೊಡನೆ ಕಡೆತನಕ ಸರಳಭಾವದಿಂದ ನಡೆದೆ. ನಾನು ಮಾತ್ರ ತಾಮಸಿಯು. ಕುಟಿಲ ಕರ್ಮಗಳನ್ನಾಚರಿಸಿ ನಿನ್ನನ್ನು ಮೋಸಗೊಳಿಸಿದೆನು; ನಿನ್ನ ಆಯುಷ್ಯವನ್ನು ದುಃಖಮಯ ಮಾಡಿದೆನು. ಈಷೇಯ ಪರಿಣಾಮವು ಈ ಮನೆಗೆ ಬರುವದೆಂದು ನಾನು ಆಗ ಭಾವಿಸಿದ್ದಿಲ್ಲ. ಆಗ ನಾನು ಅಹಂಕಾರದಿಂದ ಕುರುಡನಾಗಿದ್ದೆನು. ದುರಭಿಮಾನದಿಂದ

ಕಿವುಡನಾಗಿದ್ದೆನು. ಈಗ ಎಲ್ಲವೂ ತಿಳಿದಿದೆ. ಆದರೆ ಪ್ರಸ್ತುತದಲ್ಲಿ ನನಗೆ ಏನೂ ಮಾಡಬರುವಂತಿಲ್ಲ. ಆಗ ನಾನು ಅಹಂಕಾರದಿಂದ ನಡೆದ ಫಲವನ್ನೂ ಸನ್ಮಿತ್ರನಾದ ನಿನ್ನ ಹಾಗು ಪರಮ ಸಾಧ್ವಿಯಾದ ಪ್ರಜಾಲೆಯು ಶಾಪವನ್ನೂ ಹೊಂದಬೇಕಾದ ಪ ಸಂಗವೊದಗಿರುವದು!

ಮಿತ್ರಾ, ನಾನು ನಿನಗೆ ಇಷ್ಟು ಅವಸರದಿಂದ ಪತ್ರ ಕಳುಹಿಸಿದ ಕಾರಣವೇನಂದರೆ, ಇನ್ನು ಮೇಲೆ ಈ ಜನ್ಮದಲ್ಲಿ ನನ್ನ ನಿನ್ನ ಭೆಟ್ಟಿಯಾಗದಂತಹ ಪ್ರಸಂಗ ಒದಗಿರುವದು. ನಾನು ಬೇಗನೆ ಇಹಲೋಕವನ್ನು ತ್ಯಜಿಸಿ ನಿಜಧಾಮಕ್ಕೆ ಹೋಗುವವನಿರುವೆನು. ನನ್ನ ಅಂತದಿಂದ ಮುಪ್ಪಿನವಳಾದ ತಾಯಿಗೆ ಬಹಳೇ ದುಃಖವಾಗುವದು. ನೀನು ಅವಳ ದುಃಖವನ್ನು ಹೋಗಲಾಡಿಸುವದಕ್ಕಾಗಿ ಪ್ರಯತ್ನ ಮಾಡು. ಅವಳಿಗೆ ನನ್ನ ಸ್ಥಳದಲ್ಲಿ ನೀನಾಗಿರುವೆ. ಹತಭಾಗಿನಿಯಾದ ಭೂಪಬಾಲೆಯನ್ನಾದರೂ ಎಡಗಣ್ಣು-ಬಲಗಣ್ಣಿನಿಂದ ನೋಡುತ್ತಿರಬೇಕು.''

ಸುಜ್ಞನಾದ ನಿನಗೆ ಇದಕ್ಕಿಂತ ಹೆಚ್ಚಿಗೆ ಮತ್ತೇನು ಬರೆಯಲಿ? ಶುಷ್ಕವಾದ ಶಬ್ದಗೌರವದಿಂದ ಪತ್ರವನ್ನು ವಿಭೂಷಣಗೊಳಿಸುವದರಲಿ ಅರ್ಥವೇನಿರುವದು?

ನಿನ್ನ ಪ್ರಿಯಬಂಧು,

**ಕಾಲಾಚಾಂದ''**

ಕಾಲಾಚಾಂದನು ಪುರಾಣಶ್ರವಣದಲ್ಲಿಯೂ ಜಗನ್ನಾಥನ ನಾಮಸ್ಮರಣೆಯಲ್ಲಿಯೂ ದಿವಸಗಳನ್ನು ಕಳೆಯತೊಡಗಿದನು. ತನಗೆ ಖಂಡಿತವಾಗಿ ಮರಣವೊದಗುವದೆಂದು ಅವನು ತಿಳಿದದ್ದರಿಂದ ಇಹಲೋಕದ ಆಶೆಗಳನ್ನೆಲ್ಲ ತೊರೆದಿದ್ದನು. ಒಂದೊಂದಾಗಿ ದಿನಗಳು ಹೋಗತೊಡಗಿದವು. ಸುಲತಾನನು ಕೊಟ್ಟ ಅವಧಿಯು ಮುಗಿಯಿತು. ತನಗೆ ಮರಣಕಾಲವು ಸಮೀಪಿಸಿತೆಂದು ಕಾಲಾಚಾಂದನು ಬೆದರಲಿಲ್ಲ; ಅವನ ದೃಢವಾದ ಮನಸ್ಸು ಲವಲೇಶವಾದರೂ ಚಲಿಸಲಿಲ್ಲ. 'ಸುಲತಾನನು ಕೊಟ್ಟ ಅವಧಿಯಲ್ಲಿ ಶಹಜಾದಿಯು ತನ್ನ ಲಾವಣ್ಯದ ಪ್ರಕಾಶವನ್ನು ಕಾಲಾಚಾಂದನ ಮೇಲೆ ಕೆಡಹಿದ್ದರೂ, ಮಧುರತರವಾದ ಭಾಷಣಗಳನ್ನು

ಅವನ ಕಣ್ಣ ಪ್ರದೇಶದಲ್ಲಿ ಹಾಕಿದ್ದರೂ ಆ ಪ್ರತಿಭಾಶಾಲಿಯು ವಿಕಾರ ವಶನಾಗಲಿಲ್ಲ.

ಕೊನೆಯ ಪ್ರಯತ್ನವನ್ನು ಕೊನೆಗಾಣಿಸಬೇಕೆಂದು ನವಾಬನು ಕಾಲಾಚಾಂದನನ್ನು ಅರಮನೆಗೆ ಕರೆಯಿಸಿದನು. ಆಗ ಅವನು ವಿನಯ ದಿಂದಲೂ ಪ್ರೇಮಳವಾಣಿಯಿಂದಲೂ:—"ನಗರಪಾಲ, ನಾನು ನಿನಗೆ ಅವಧಿಯನ್ನು ಕೊಟ್ಟದ್ದು ಒಳಿತಾಗಲಿಲ್ಲವೆ? ವಿಚಾರದಿಂದ ಮನುಷ್ಯನ ಮನಸ್ಸು ಸ್ಥಿತ್ಯಂತರವಾಗುತ್ತದೆ. ನಿನಗೆ ಚನ್ನಾಗಿ ಆಲೋಚನೆ ಮಾಡಿ ಕೊಳ್ಳಲಿಕ್ಕೆ ಅನುಕೂಲವಾಗಬೇಕೆಂದು ಎರಡು ವಾರಗಳ ಅವಧಿಯನ್ನು ಕೊಟ್ಟೆನು. ನಿನ್ನ ನಿಶ್ಚಯವೇನಾಯಿತೆಂಬದನ್ನು ಕೇಳುವದಕ್ಕೆ ನಾನು ಹೆಚ್ಚಾಗಿ ಕುತೂಹಲಗೊಂಡಿರುವೆನು."

"ಸುಲತಾನರೆ, ನನ್ನ ನಿಶ್ಚಯವು ಅಚಲವಾದದ್ದು. ನೀವು ನೂರಾರು ವರ್ಷಗಳ ಅವಧಿಯನ್ನಿತ್ತರೂ ನನ್ನ ವಿಚಾರದಲ್ಲಿ ಸ್ಥಿತ್ಯಂತರವಾಗು ವದಿಲ್ಲ."

"ಮರಣ ದಂಡನೆಯನ್ನು ಹೊಂದಲಿಕ್ಕೆ ಸಿದ್ಧನಾದೆಯಾ?"

"ರುಧಿರ ಪಿಪಾಸುಗಳಾದ ಸುಲತಾನ ಸಾಹೇಬರೆ! ಈ ಮಾತಿಗೆ ನಾನು ಎಂದೋ ಸಿದ್ಧನಾಗಿರುವೆನು."

"ರಕ್ತಪಿಪಾಸು—"

"ಅಹುದು; ನೀವು ರಕ್ತಪಿಪಾಸುಗಳಿರುವದು ಅಕ್ಷರಶಃ ನಿಜವು!"

"ನಗರಪಾಲ!"

"ಮರಣದ ದಾರಿಯನ್ನರಸುವವನಿಗೆ ಭಯವನ್ನು ತೋರಿಸುವಿ ರೇನು ಹುಜೂರ?"

"ನಿನ್ನನ್ನು ಶೂಲಕ್ಕೇರಿಸುವೆನು."

"ಇದಾದರೂ ಮರಣಶಿಕ್ಷೆಯನ್ನು ವಿಧಿಸುವ ಪ್ರಕಾರಗಳಲ್ಲೊಂ- ದಾಗಿರುವದು."

"ನಿನ್ನನ್ನು ಶತ ಛಿದ್ರ ಮಾಡಿಸುವೆನು!"

"ಖಾವಿಂದ, ಈ ಕೃತಿಯಿಂದ ಜೀವ ಹೋಗುವದಕ್ಕೆ ರಕ್ತಲ್ಲೂ

ಹೆಚ್ಚಿನ ಪರಿಣಾಮವೇನಾದರೂ ಆಗುವದೇನು?''

“ನಿನ್ನನ್ನು ಹಿಂಸ್ರಪಶುಗಳ ಬಾಯಲ್ಲಿ ಕೊಡಿಸುವೆನು!''

“ವೇತಾಳ ರೂಪಿಗಳಾದ ನವಾಬರೆ! ನೀವು ಇಷ್ಟು ವಿವೇಕಶೂನ್ಯರೂ, ತಾಮಸ ಹೃದಯಿಗಳೂ, ರಾಕ್ಷಸೀ ಅತ್ಯಾಚಾರದವರೂ ಇರುವಿರೆಂಬದು ಈ ಗಳಿಗೆಯವರೆಗೆ ನನಗೆ ಗೊತ್ತಾಗಿದ್ದಿಲ್ಲ. ವಿಹಿತವಾದ ಕರ್ತವ್ಯಗಳಲ್ಲಿ ನನ್ನಿಂದ ಯಾವ ಅಪರಾದವು ಘಟಿಸಿತು? ಸ್ವೀಕೃತ ಸೇವಾಧರ್ಮದಲ್ಲಿ ನೀವು ಏನು ದೋಷವನ್ನು ಕಂಡಿರಿ? ನನ್ನಿಂದ ರಾಜದ್ರೋಹವೂ, ರಾಷ್ಟ್ರದ್ರೋಹವೂ, ಪ್ರಜಾದ್ರೋಹವೂ ಘಟಸಿದ್ದರೆ ಹೇಳಿರಿ. ಪಂಚಮಹಾಪಾತಕಗಳಲ್ಲಿ ಯಾವದಾದರೊಂದು ಪಾತಕವನ್ನು ನಾನು ಮಾಡಿರುವೆನೆಂಬದು ನಿಮಗೆ ಗೊತ್ತಾಗಿದ್ದರೆ ತಿಳಿಸಿರಿ. ನಿಮ್ಮ ಸಿಂಹಾಸನದ ಪ್ರಾಪ್ತಿಗಾಗಿ ನಾನು ಕನಸುಮನಸ್ಸಿನಲ್ಲಿ ಯೋಚಿಸಿದ್ದರೆ ಹೇಳಿರಿ. ರುಧಿರಪ್ರಿಯ ನವಾಬರೆ, ಜಗತ್ತಿನ ದೃಷ್ಟಿಯಿಂದ-ಸುಪ್ರಜಾಜನರ ದೃಷ್ಟಿಯಿಂದ-ಸತ್ಯಧರ್ಮನಿಷ್ಠ ರಾಜನ ದೃಷ್ಟಿಯಿಂದ-ಸರ್ವಾಂತರ್ಯಾಮಿಯಾದ ಪರಮಾತ್ಮನ ದೃಷ್ಟಿಯಿಂದ ನಾನು ಅಪರಾಧಿಯಿದ್ದದ್ದು ನಿಜವಿದ್ದರೆ ನನಗೆ ಅವಶ್ಯವಾಗಿ ಶಿಕ್ಷೆಯನ್ನು ವಿಧಿಸಿರಿ. ಸ್ಫೂರ್ತಿಯಿಂದ ಕಾರ್ಯಮಾಡುವವನೂ, ಕರ್ತವ್ಯ ಪ್ರಭಾವವನ್ನು ತೋರಿಸಿ ನಾಮಾಂಕಿತ ಕೀರ್ತಿಶಾಲಿಯಾಗಬೇಕೆಂಬ ಅಭಿಲಾಷೆಯುಳ್ಳವನೂ, ಸ್ವಾಮಿನಿಷ್ಠೆಯಿಂದ ಕರ್ತವ್ಯ ಜರುಗಿಸುವಂಥವನೂ ಆದ ನನ್ನಿಂದ ಯಾವ ಅಪರಾಧವೂ ಘಟಿಸಿಲ್ಲವೆಂಬದು ನಿಮ್ಮ ಮನೋಮನ ಸಾಕ್ಷಿಯಾಗಿ ಗೊತ್ತಾದ ಮಾತಾಗಿರುವದು. ನನ್ನ ಮರಣದ ಹೊರತು ನಿಮ್ಮ ಯಾವ ಕಾರ್ಯಗಳೂ ಸಾಗುವಂತಿಲ್ಲವೇನು? ನನ್ನ ಅಸ್ತಿತ್ವವು ನಾಶವಾಗದಿದ್ದರೆ ನಿಮ್ಮ ರಾಜ್ಯವು ನಡೆಯುವಂತಿಲ್ಲವೆ? ಸಂಸಾರವು ಸಾಗುವಂತಿಲ್ಲವೆ? ಸುಖವು ದೊರೆಯುವಂತಿಲ್ಲವೆ? ಧರ್ಮವು ನಡೆಯುವಂತಿಲ್ಲವೆ? ಈಗ ನಿಮಗೆ ನನ್ನಿಂದ ಯಾವ ಬಗೆಯ ಅಡ್ಡಿಯಾಗಿರುವದೆಂಬದನ್ನು ಹೇಳಿರಿ. ನಾನು ಎಂದಾದರೂ ನಿಮ್ಮ ಆಜ್ಞೆಯನ್ನುಲ್ಲಂಘಿಸಿದ್ದರೆ ಹೇಳಿರಿ; ಕರ್ತವ್ಯ ವಿಸ್ಮೃತಿಹೊಂದಿದ್ದರೆ ಹೇಳಿರಿ. ನಿಮ್ಮ ರಾಜಧರ್ಮವೂ, ಮಾನವಧರ್ಮವೂ

ನನ್ನ ಅಸ್ತಿತ್ವದಿಂದ ನಡೆಯುವಂತಿಲ್ಲದಿದ್ದರೆ ಹೇಳಿರಿ. ಹಾಗಿದ್ದರೆ ನಾನು ಒಳ್ಳೇ ಆನಂದದಿಂದ ಪ್ರಾಣತ್ಯಾಗ ಮಾಡುವೆನು.''

ನಗರಪಾಲನ ಮಾತುಗಳನ್ನು ಕೇಳಿ ಸುಲತಾನನ ಕಿಚ್ಚಿದೆಯು ನಡುಗಿತು. ಅವನ ಮಾತಿಗೆ ಏನು ಉತ್ತರ ಕೊಡಬೇಕೆಂಬದು ನವಾಬನಿಗೆ ತಿಳಿಯದಂತಾಗಿ ಎಷ್ಟೋ ವೇಳೆಯ ವರೆಗೆ ತಟಸ್ಥನಾಗಿ ಕುಳಿತಿದ್ದನು. ಅನಂತರದಲ್ಲಿ ಅವನು ಧೈರ್ಯದಿಂದ:—''ಕಾಲಾಚಾಂದರಾಯ, ನೀನು ಮರಣಕ್ಕಾಗಿ ಅಂಜುವೆಯೆಂಬಂತೆ ತೋರುವದು. ಹಾಗಿಲ್ಲದಿದ್ದರೆ ನಿನ್ನ ಮುಖದಿಂದ ಈ ಬಗೆಯ ಮಾತುಗಳು ಹೊರಡುತ್ತಿದ್ದಿಲ್ಲ.''

''ಈ ಕಾಲಾಚಾಂದನಿಗೆ ಭಯವೆಂದರೇನೆಂಬದು ಗೊತ್ತೇ ಇರುವದಿಲ್ಲ. ನಾನು ಭಯಭೀತನಾಗಿ ಹೀಗೆ ಮಾತನಾಡುವೆನೆಂದು ನಿಮ್ಮ ಭಾವನೆಯಿದ್ದರೆ ಅದು ತೀರ ಅನುಚಿತವಾದದ್ದಿರುವದು. ಈ ಸಂಸಾರದಲ್ಲಿ ನನಗೆ ಯಾವ ಬಗೆಯ ಬಂಧನಗಳೂ ಇರುವದಿಲ್ಲ. ನನ್ನ ಸಾವಿಗಾಗಿ ಅಳುವವರು ಒಬ್ಬರೂ ಇರುವದಿಲ್ಲ. ಹೀಗಿದ್ದ ಮೇಲೆ, ನಾನು ಯಾವ ಆಶೆಯಿಂದ ಜೀವಿಸಿರಬೇಕೆಂದು ಪ್ರಯತ್ನಿಸಬೇಕು? ಜೀವದಿಂದಿದ್ದು ನಿಮ್ಮಂತಹ ಲಹರಿಯ ನವಾಬರ ಸೇವೆ ಮಾಡುವದಕ್ಕಿಂತ ಸತ್ತು ಸ್ವರ್ಗವನ್ನೇರುವದು ಮೇಲಲ್ಲವೆ? ನಿಮ್ಮಂತಹ ಜಡ ಸ್ವಾರ್ಥಿಗಳಾದ ಭೂಪಾಲರು ಬುದ್ಧಿಗಲಿಯಬೇಕೆಂಬ ಉದ್ದೇಶದಿಂದ ನಾನು ಯಥಾಸ್ಥಿತವಾದ ಮಾತುಗಳನ್ನಾಡಿದೆನಲ್ಲದೆ ಮರಣಭಯದಿಂದಲ್ಲ. ನಾನು ನಗುತ್ತ ನಗುತ್ತ ಸಾಯುವೆನು. ಬೇಗನೆ ನಿಮ್ಮ ರಾಕ್ಷಸೀಮಹತ್ವಾಕಾಂಕ್ಷೆಯನ್ನು ಪೂರೈಸಿಗೊಳಿಸಿಕೊಳ್ಳಿರಿ. ನನ್ನ ಆತ್ಮಬಲಿದಾನದಿಂದ ನಿಮ್ಮ ಕುವರಿಯ ಸಂಸಾರವು ಸುಖಕರವಾಗುವಂತಿದ್ದರೆ ವೃಥಾ ಕಾಲಕ್ಷೇಪ ಮಾಡುವದೇಕೆ?''

ನಗರಪಾಲನ ಕಟುಭಾಷಣಗಳನ್ನು ನವಾಬನು ಬಹು ಕಷ್ಟದಿಂದ ಸಹಿಸಿಕೊಂಡನು. ತನ್ನ ಆಜ್ಞೆಯಿಂದ ಪೂರ್ವವು ಪಶ್ಚಿಮವಾಗುವದೆಂದು ನವಾಬನು ಈ ಕ್ಷಣಕ್ಕೆ ಮುಂಚಿತವಾಗಿ ತಿಳಿದಿದ್ದನು; ಆದರೆ ಈಗ ಮಾತ್ರ ಅವನ ಅಹಂಕಾರೋರ್ಮಿಯು ನಾಶವಾಯಿತು. ಆಗ ಅವನು ಕ್ರೋಧದ ಆವಿರ್ಭಾವವನ್ನು ತಳೆದು:—''ನಗರಪಾಲ, ಈ

ವಂಗೇಶ್ವರನ ಆಜ್ಞೆಯು ಎಂದೂ ಹುಸಿಯಾಗುವದಿಲ್ಲ.''

"ನನ್ನ ನಿಶ್ಚಯವಾದರೂ ಎಂದೂ ಬೇರೆಯಾಗುವದಿಲ್ಲ.''

"ಕಾಲಾಚಾಂದರಾಯ, ನೀನು ದಯಮಾಡಿ ನನ್ನ ವಿನಂತಿಗೆ ಮಾನಕೊಡು. ನೀನು ಬೇಡಿದ್ದನ್ನು ಕೊಡಲಿಕ್ಕೆ ನಾನು ಸಿದ್ಧನಿರುವೆನು. ನನ್ನ ಪ್ರೀತಿಯ ಕುಮಾರಿಯ ಸಲುವಾಗಿ ಈ ವಂಗರಾಜ್ಯವನ್ನಾದರೂ ನಾನು ನಿನಗೆ ಅರ್ಪಿಸುವೆನು.''

"ಸುಲತಾನಸಾಹೇಬರೆ, ನೀವು ಈ ವಿಷಯದಲ್ಲಿ ಪ್ರಯತ್ನಿಸಿ ದಣಿಯಬೇಡಿರಿ.''

"ಅನುಪಮ ರೂಪವತಿಯಾದ ಶಹಜಾದಿಯನ್ನು ವಿವಾಹವಾಗಲಿಕ್ಕೆ ನೀನು ಒಪ್ಪದಿರುವ ಕಾರಣವೇನು?''

"ಕಾರಣವನ್ನು ಮುಂಚಿತವಾಗಿಯೆ ಹೇಳಿರುವೆನು. ಶಹಜಾದಿಯು ರೂಪವತಿಯಿರುವಳೆಂಬದು ನನಗೆ ಗೊತ್ತಾಗಿದೆ. ಯಾವಳಲ್ಲಿ ನಾನು ಪ್ರೇಮವುಳ್ಳವನಾಗಿಲ್ಲವೊ ಅಂಥವಳ ಪಾಣಿಗ್ರಹಣ ಮಾಡುವದು ಹೇಗೆ?''

"ಇದು ನಿನ್ನ ನಿಶ್ಚಯಪೂರ್ವಕವಾದ ಉತ್ತರವೆ?''

"ಒಮ್ಮೆಯಲ್ಲವೆಂದರೆ ಸಾವಿರ ಸಾರೆ ಹೇಳುವೆನು. ನಾನು ಖಂಡಿತವಾಗಿಯೂ ಶಹಜಾದಿಯನ್ನು ವರಿಸುವದಿಲ್ಲ!''

ನವಾಬನ ಕ್ರೋಧವು ಅನಿವಾರವಾಯಿತು. ತನ್ನ ಆಜ್ಞೆಯನ್ನು ಈಡೇರಿಸಿಬಿಡಬೇಕೆಂದು ಅವನು ಸತ್ಯಸಂಕಲ್ಪ ಮಾಡಿಕೊಂಡನು. ಕೂಡಲೆ ಅವನು ಇಬ್ಬರು ಕೊಲೆಗಡಕರನ್ನು ಕರೆಯಿಸಿ, ರಾಜೋದ್ಯಾನದ ಬಳಿಯ ಬೈಲಲ್ಲಿ ಕಾಲಾಚಾಂದನ ಕೊಲೆಮಾಡಬೇಕೆಂದು ಆಜ್ಞಾಪಿಸಿದನು. ರಾಜಾಜ್ಞೆಯಾದಮೇಲೆ ಯಾತರ ವಿಲಂಬವು? ಕೊಲೆಗಡಕರು ಕಾಲಾಚಾಂದನನ್ನು ಕರೆದುಕೊಂಡು ವಧಸ್ಥಳಕ್ಕೆ ಬಂದರು.

ತನ್ನ ಆಯುಷ್ಯವು ಇದೇ ಕ್ಷಣದಲ್ಲಿ ಮುಗಿಯುವದೆಂದು ಕಾಲಾಚಾಂದನಿಗೆ ತಿಳಿಯಿತು. ಅವನು ಜಗನ್ನಿಯಂತನನ್ನು ಅನನ್ಯ ಭಾವದಿಂದ ಪ್ರಾರ್ಥಿಸತೊಡಗಿದನು. "ದಯಾಮಯಪ್ರಭೋ! ನಿನ್ನ ಇಚ್ಛೆ

ಯಿಂದಲೆ ಸೃಷ್ಟಿ-ಸ್ಥಿತಿ-ಲಯಾದಿ ಕಾರ್ಯಗಳು ನಡೆಯುವವು. ಪೂರ್ವ ದುಷ್ಕೃತಿಯಿಂದ ದುರ್ಮರಣವು ನನಗೆ ಪ್ರಾಪ್ತವಾಗತೊಡಗಿದೆ. ಕರ್ಮ ಫಲವನ್ನು ಭೋಗಿಸದಿದ್ದರೆ ಗತ್ಯಂತರವಿಲ್ಲ. ಜಗನ್ನಾಥಾ! ಈ ದೀನ ಭಕ್ತನಿಗೆ ನಿನ್ನ ಸನ್ನಿಧಿಯಲ್ಲಿ ಸ್ಥಳ ಕೊಡು.''

''ಬೇಗನೆ ನಿನ್ನ ಅಂತ್ಯಕಾಲದ ದೇವತಾ ಪ್ರಾರ್ಥನೆಯನ್ನು ಮುಗಿಸಿ ಮರಣಕ್ಕೆ ಸಿದ್ಧನಾಗು. ಜೀವದಾಶೆಗಾಗಿ ಕಡೆತನಕ ದೇವಸ್ತುತಿಯಲ್ಲಿ ಕಾಲಕಳೆಯಬೇಕೆಂದು ನಿನ್ನ ಇಚ್ಛೆಯಿರಬಹುದು. ಕೆಲವು ನಿಮಿಷಗಳಿಗಿಂತ ಹೆಚ್ಚಿನ ಅವಧಿಯು ನಿನಗೆ ದೊರೆಯಲಾರದು.''

ಕೊಲೆಗಡಕರಲ್ಲೊಬ್ಬನು ಹೀಗೆ ನುಡಿದ ಕೂಡಲೆ ಕಾಲಾಚಾಂದನು ಸಮಾಧಾನವೃತ್ತಿಯನ್ನು ಕಾಯ್ದುಕೊಂಡು:—''ನಾನು ಸಿದ್ಧನಾಗಿಯೆ ಇರುವೆನು. ನೀವು ನಿಮ್ಮ ಕರ್ತವ್ಯವನ್ನು ಬೇಗನೆ ಕೊನೆಗಾಣಿಸಿರಿ.''

''ಕೈಜೋಡಿಸಿ ಶಿರಬಾಗಿ ಕುಳಿತುಕೋ. ಸ್ವಲ್ಪವಾದರೂ ಚಲನವಲನ ಮಾಡಬೇಡ.''

ಕೊಲೆಗಡಕನ ಮಾತಿನಂತೆ ಕಾಲಾಚಾಂದನು ಕುಳಿತುಕೊಂಡನು. ರಾಕ್ಷಸೀ ಹೃದಯದವರಾದ ಆ ಕೊಲೆಗಡಕರು ತಮ್ಮ ತೀಕ್ಷ್ಣಧಾರೆಯ ಖಡ್ಗವನ್ನು ಮೇಲಕ್ಕೆತ್ತಿದರು. ಕಾಲಾಚಾಂದನು ಕಣ್ಣು ಮುಚ್ಚಿಕೊಂಡು ಕುಳಿತು:—''ಜಯ ಜಗನ್ನಾಥ!'' ಎಂದು ಪರಮಾತ್ಮನ ನಾಮ ಘೋಷಣೆ ಮಾಡಿದನು. ಕೊಲೆಗಡಿಕರು ಅವನ ಶಿರಸ್ಸಿನ ಮೇಲೆ ತಮ್ಮ ಖಡ್ಗವನ್ನು ಪ್ರಹರಿಸತಕ್ಕವರು. ಅಷ್ಟರಲ್ಲಿ ''ಹಾ! ತಡೆಯಿರಿ! ಕೈಬಿಗಿ ಹಿಡಿಯಿರಿ!''ಎಂದು ಕೂಗುತ್ತ ಒಬ್ಬ ಯುವತಿಯು ಅಲ್ಲಿಗೆ ಧಾವಿಸಿ ಬಂದು ಕಾಲಾಚಾಂದನ ಮೈಮೇಲೆ ಬಿದ್ದಳು. ಕೂಡಲೆ ಆ ಕೊಲೆಗಡಕರು ವಿಸ್ಮಿತರಾದರು. ಆಗ ಅವರು ಆ ಸ್ತ್ರೀಯನ್ನು ಕುರಿತು:—''ನೀನು ಯಾರು?''

''ನಾನು ಯಾರಿದ್ದ ಗೊಡವೆಯು ನಿಮಗೇಕೆ ಬೇಕು? ಮೊದಲು ನನ್ನನ್ನು ಕೊಂದು ಬಳಿಕ ನಗರಪಾಲರ ಮೇಲೆ ಖಡ್ಗಪ್ರಹಾರ ಮಾಡಿರಿ!''

"ಅಮ್ಮಾ, ನಾವು ರಾಜಾಜ್ಞೆಯ ದಾಸರು. ನಿರಪರಾಧಿಯಾದ ನಿನ್ನನ್ನು ಹೇಗೆ ಕೊಲ್ಲೋಣ? ರಾಜಾದೇಶದಂತೆ ನಾವು ಇವನನ್ನು ಕೊಲ್ಲ ಬೇಕಾಗಿರುವದು."

"ಹೀಗೇನು?" ಕೊಡೆಗಡಕನ ಮಾತಿಗೆ ಔಪರೋಧಿಕತನದಿಂದ ಶಹಜಾದಿಯು ನುಡಿದು, ಸಂತಾಪದಿಂದ:—"ನಾನು ಜೀವಿಸಿರುವ ವರೆಗೆ ಈ ನಗರಪಾಲರ ಮೇಲೆ ಯಾರು ಕೈ ಮಾಡುವರೋ ನೋಡುತ್ತೇನೆ!"

ಕೊಲೆಗಡಕರು ತೊಂದರೆಯಲ್ಲಿ ಮುಳುಗಿದರು. ಈ ಕಂಟಕ ವನ್ನು ಹೇಗೆ ನಿವಾರಿಸಿಕೊಳ್ಳಬೇಕೆಂಬದು ಅವರಿಗೆ ತಿಳಿಯದಂತಾಯಿತು. ಅಷ್ಟರಲ್ಲಿ ಕಾಲಾಚಾಂಡನು ಅವಳನ್ನು ಗುರುತಿಸಿ:—"ಶಹಜಾದಿಯ ವರೆ, ಹಿಂದೆ ಸರಿಯಿರಿ. ರಾಜಾಜ್ಞೆಯನ್ನು ನೆರವೇರಿಸುವ ಏಕನಿಷ್ಠ ಸೇವಕರ ಕಾರ್ಯಕ್ಕೆ ಅಡ್ಡಾಗಬೇಡಿರಿ."

ಶಹಜಾದಿಯೆಂಬ ಹೆಸರು ಕೇಳಿದ ಕೂಡಲೆ ಕೊಲೆಗಡಕರ ಖಡ್ಗ ಗಳು ತಾವಾಗಿ ನೆಲಕ್ಕಿಳಿದವು. ಅವರು ಬೆರಗಾಗಿ ಮಿಕಿ ಮಿಕಿ ನೋಡ ಲಾರಂಭಿಸಿದರು. ತಮ್ಮ ಕಾರ್ಯಕ್ಕೆ ಅಡ್ಡಿ ಮಾಡಿದವಳು ನವಾಬ ಪುತ್ರಿಯೇ ಎಂಬದು ಅವರ ಲಕ್ಷ್ಯದಲ್ಲಿ ಬಂದಿತು. ಆಗ ಮಾತ್ರ ಅವರು ದಿಙ್ಮೂಢರಾದರು.

"ಶಹಜಾದಿಯವರೆ, ನಾನು ಮರಣಕ್ಕೆ ಸಿದ್ಧನಾಗಿರುವೆನು. ನೀವು ನನ್ನ ಪ್ರಾಣರಕ್ಷಣೆಗಾಗಿ ಇಷ್ಟೇಕೆ ಸಾಹಸ ಮಾಡತೊಡಗಿರುವಿರಿ?"

"ನಗರಪಾಲರೆ!" ಶಹಜಾದಿಯು ಗದ್ಗದ ಕಂಠದಿಂದ: "ನಾನೇನು ನಿಮ್ಮ ಪ್ರಾಣವನ್ನುಳಿಸುವದಕ್ಕಾಗಿ ಬಂದಿಲ್ಲ. ನನ್ನ ಸಲುವಾಗಿ ನಿಮಗೆ ಈ ವಿಧದ ಭೀಷಣ ದಂಡನೆ ಹೊಂದುವ ಪ್ರಸಂಗವೊದಗಿರುವದು. ಇದ ಲ್ಲದೆ, ನಾನು ನಿಮ್ಮ ಮರಣವನ್ನು ನೋಡಲಾರೆನು. ನಿಮಗಿಂತ ಪೂರ್ವ ದಲ್ಲಿಯೆ ನನ್ನ ಇಹಲೋಕ ಯಾತ್ರೆಯು ಮುಗಿಯಬೇಕೆಂದು ಉತ್ಕ ಟೇಚ್ಛೆಯುಳ್ಳವಳಾಗಿರುವೆನು."

ನವಾಬನು ಆ ಸ್ಥಳದಲ್ಲಿ ಸಮಕ್ಷವಾಗಿರದಿದ್ದರೂ ಎಲ್ಲ ನೋಟವು ಅವನ ದೃಷ್ಟಿಗೆ ಬಿದ್ದಿತ್ತು. ಅವನು ವಧಸ್ಥಳದ ಸಮೀಪದಲ್ಲಿದ್ದ

ಸೌಧಾಗ್ರದಲ್ಲಿ ನಿಂತಿದ್ದನು. ದುಲಾರಿ-ಕಾಲಾಚಾಂದರ ಸಂಭಾಷಣಕ್ಕೆ ಪ್ರಾರಂಭವಾದೊಡನೆಯೆ ಅವನು ಕೊಲೆಗಡಕರಿಗೆ ಹೊರಟು ಹೋಗುವ ದಕ್ಕಾಗಿ ಸನ್ನೆ ಮಾಡಿದನು. ಕೂಡಲೆ ಕೊಲೆಗಡಕರು ಅಲ್ಲಿಂದ ಹೊರಟು ಹೋದರು.

"ಶಹಜಾದಿ" ಕಾಲಾಚಾಂದನು ವಿಸ್ಮಯದಿಂದ—"ನೀನು ಮರ ಣಕ್ಕೆ ಸಿದ್ಧಳಾಗಿರುವದೇಕೆ?"

"ಯಾವ ಆಶೆಯಿಂದ ಜೀವಿಸಬೇಕು? ಮನಸ್ಸಿನೊಳಗಿನ ಅಭಿಲಾ ಷೆಯು ಹಾಳಾಗಿ ಹೋದ ಮೇಲೆ ಬಾಳುವದರಲ್ಲಿ ಅರ್ಥವೇನಿರುವದು? ಭಗ್ನಮನೋರಥರಾದವರಿಗೆ ಜೀವಿಸಿರುವದೆಂದರೆ ಮರಣಕ್ಕಿಂತಲೂ ಹೆಚ್ಚಿನ ದುಃಖದಾಯಕವಲ್ಲವೆ?"

"ದುಲಾರಿ!" ವಿಸ್ಮಯದಿಂದ ಕಾಲಾಚಾಂದನು—"ನೀನು ಜೀವ ಕೊಡುವೆಯಾ?"

"ಅಹುದು. ನಾನು ಸಾಯಬೇಕೆಂಬ ದೃಢನಿಶ್ಚಯದಿಂದಲೇ ಇಲ್ಲಿಗೆ ಬಂದಿರುವೆನು. ಮೃತ್ಯುವಿಗೆ ಸ್ವಾಗತ ಮಾಡುವದಕ್ಕಾಗಿ ನನ್ನ ಮನಸ್ಸು ಆತುರಗೊಂಡಿದೆ. ನಿಮಗಿಂತ ಮೊದಲೇ ನನ್ನ ಅಂತವಾಗ ಬೇಕೆಂದು ಪ್ರಬಲವಾದ ಇಚ್ಛೆಯು ಇರುವದು."

"ದುಲಾರಿ!"

"ಮತ್ತೇನು ಕಾಲಾಚಾಂದರಾಯ?"

"ಈ ತಾರುಣ್ಯವೂ, ವಯಸ್ಸೂ, ಅನುಪಮ ಲಾವಣ್ಯವೂ—"

"ರೂಪ ಲಾವಣ್ಯ-ವಯಸ್ಸುಗಳಿಗಾಗಿ ಈ ಜೀವನವಿರುವದೆ?"

"ಐಶ್ವರ್ಯ-ರಾಜಸತ್ತೆ........"

"ಛೀ!"

"ಹಾಗಾದರೆ ನಿನಗೆ ಏನು ಬೇಕಾಗಿರುವದು?"

"ನಿಮ್ಮ ಪ್ರೇಮವು! ನಾನು ನಿಮಗೆ ಆತ್ಮಾರ್ಪಣೆ ಮಾಡಿಕೊಳ್ಳುವ ಸತ್ಯಸಂಕಲ್ಪ ಮಾಡಿಕೊಂಡಿರುವೆನು. ನಿಮಗೆ ಆತ್ಮಾರ್ಪಣೆ ಮಾಡು ವದು ಶ್ರೇಯಸ್ಕರವೊ, ಕೊಲೆಗಡಕರ ಖಡ್ಗಕ್ಕೆ ಆತ್ಮಾರ್ಪಣೆ ಮಾಡು

ವದು ಶ್ರೇಯಸ್ಕರವೋ? ಈ ಎರಡರಲ್ಲಿ ಯಾವದು ಯಥಾಯೋಗ್ಯವೆಂಬ ದನ್ನು ನೀವೇ ನಿರ್ಧರಿಸಿರಿ.''

ದುಲಾರಿಯ ಮಾತುಗಳಿಂದ ಕಾಲಾಚಾಂದನ ಹೃದಯದಲ್ಲಿ ವಿಲಕ್ಷಣ ಕ್ರಾಂತಿಯುಂಟಾಯಿತು. ಅನನ್ಯಭಾವದಿಂದ ಆತ್ಮಾರ್ಪಣೆ ಮಾಡಲು ಸಿದ್ಧಳಾದ ದುಲಾರಿಯನ್ನು ಜಾತಿ-ಧರ್ಮಗಳ ನಿಮಿತ್ತದಿಂದ ಉಪೇಕ್ಷೆ ಮಾಡುವದು ಅವನಿಗೆ ಅಸಾಧ್ಯವಾಯಿತು. ಆಗ ಅವನು ತನ್ನ ಹೃದಯಚೋರಳ ಸ್ವರ್ಗೀಯ ಲಾವಣ್ಯವನ್ನು ಎವೆಯಿಕ್ಕದೆ ನೋಡುವದರಲ್ಲಿ ಮಗ್ನನಾಗಿದ್ದನು. ದುಲಾರಿಯು ಕಾಲಾಚಾಂದನ ಕಾಲುಗಳನ್ನು ಹಿಡಿದು —''ಮಹಾರಾಜರೆ, ನಿಮ್ಮ ಹೊರತು ನಾನು ಬಾಳೆನು. ಅನನ್ಯಭಾವದಿಂದ ಆತ್ಮಾರ್ಪಣೆ ಮಾಡ ಬಂದ ಈ ನಿಮ್ಮ ಚರಣಕಿಂಕರಳನ್ನು ತಿರಸ್ಕರಿಸಬೇಡಿರಿ. ಈ ಪಾದಸೇವೆಯಲ್ಲಿ ಕೃತಾರ್ಥಳಾಗಬೇಕೆಂದು ನನ್ನ ಇಚ್ಛೆಯಿರುವದು. ದಯಮಾಡಿ ನನ್ನ ಕೈಹಿಡಿಯಬೇಕೆಂದು ಸೆರಗೊಡ್ಡಿ ಬೇಡಿಕೊಳ್ಳುವೆನು.''

ದುಲಾರಿಯು ನೇತ್ರಜಲದಿಂದ ತನ್ನ ಮನೋರಮಣನ ಪದಯುಗಲವನ್ನು ತೊಳೆಯುತ್ತ ಹೀಗೆ ನುಡಿದಳು. ಕೂಡಲೆ ಕಾಲಾಚಾಂದನ ಮನಸ್ಸಿನೊಳಗಿನ ಸಂಕೋಚಭಾವನೆಗಳೆಲ್ಲ ತೊಲಗಿ ಹೋದವು. ಅವನು ತನ್ನ ಪ್ರಣಯಿನಿಯನ್ನು ಗಟ್ಟಿಯಾಗಿ ಆಲಿಂಗಿಸಿ —''ಪ್ರಿಯೆ, ಇಷ್ಟು ದಿನಗಳ ವರೆಗೆ ನಾನು ನಿನ್ನ ಹೃದಯ ಪರೀಕ್ಷೆ ಮಾಡಿರಲಿಲ್ಲ. ನನ್ನ ಈ ಅಪರಾಧವನ್ನು ಕ್ಷಮಿಸು.''

ಪ್ರಣಯಿಗಳ ಹೃದಯಕ್ಕೆ ಹೃದಯಗಳು ಕೂಡಿದವು. ಇಬ್ಬರೂ ಪರಸ್ಪರರ ಅಂತಃಕರಣಗಳನ್ನು ಚನ್ನಾಗಿ ಗುರುತಿಸಿದರು. ವಧೂವರ ಪರೀಕ್ಷೆಯು ಮುಗಿಯಿತು. ಪರಸ್ಪರರು ಆತ್ಮಸಮರ್ಪಣ ಮಾಡಿದರು!



# ಕೊನೆಯ ಉಪಾಯ.

ಕಾಲಾಚಾಂದನು ತನ್ನ ಕುಮಾರಿಯನ್ನು ವರಿಸಲೊಪ್ಪಿದ್ದರಿಂದ ಸಲಿಮನ ಸುಲತಾನನಿಗೆ ಬಹಳೇ ಆನಂದವಾಯಿತು. ಅವನು ದುಲಾರಿ-ಕಾಲಾಚಾಂದರ ವಿವಾಹವನ್ನು ಗೌಡರಾಜಧಾನಿಯಲ್ಲಿ ಅತ್ಯಂತ ವಿಜೃಂಭಣೆಯಿಂದ ನೆರವೇರಿಸಿದನು. ಸನಾತನ ಧರ್ಮಾಭಿಮಾನಿಯಾದ ಕಾಲಾಚಾಂದನು ಧರ್ಮಾಂತರ ಹೊಂದಲಿಲ್ಲ. ದುಲಾರಿಯು ಅವನನ್ನು ಮುಸಲ್ಮಾನನಾಗಗೊಡದೆ, ತಾನೇ ಹಿಂದು ಧರ್ಮವನ್ನು ಸ್ವೀಕರಿಸದಳು. ತನ್ನ ಮೊದಲಿನ ಹೆಸರನ್ನು ತೆಗೆದು ಹಾಕಿ ಅದಕ್ಕೆ ಪ್ರತಿಯಾಗಿ ಕಮಲಸುಂದರಿಯೆಂಬ ಹೆಸರನ್ನಿಟ್ಟುಕೊಂಡಳು. ಪ್ರೇಮದ ಪ್ರಭಾವವು ಅದ್ಭುತವಾದದ್ದು. ನಿಸ್ಸೀಮ ಪ್ರೇಮವು ಜಾತಿ-ಗೋತ್ರಗಳನ್ನು ಲೆಕ್ಕಿಸುವಂತಹದಲ್ಲ. ಜಾತಿ-ಗೋತ್ರಗಳನ್ನು ಮೀರಿದ ಪ್ರಸಂಗವೊದಗಿದ್ದರಿಂದಲೆ ಧರ್ಮದ ಕಟ್ಟಾಭಿಮಾನಿಯಾದ ಕಾಲಾಚಾಂದನು ಯವನಿಯನ್ನು ವರಿಸಲಿಕ್ಕೆ ಸಿದ್ಧನಾದನು. ಸ್ವಧರ್ಮದ ಜನರಿಂದ ತೊಂದರೆಯಾಗಬಾರದೆಂಬ ಉದ್ದೇಶದಿಂದಲೆ ಅವನು ದುಲಾರಿಗೆ ಹಿಂದುಧರ್ಮದೀಕ್ಷೆ ಕೊಡಿಸಿದನು. ದುಲಾರಿಯು ಪತಿಯ ಮನಸ್ಸಿನ ಪ್ರಸನ್ನತೆಗಾಗಿಯೂ ಹಿಂದುಸಮಾಜಪ್ರೇಮ ಸಂಪಾದನೆಗಾಗಿಯೂ ಕಮಲಸುಂದರಿಯೆಂದು ನಾಮಾಭಿಧಾನ ಹೊಂದಿದಳು.

ಪ್ರಸನ್ನನಾದ ಸುಲತಾನನು ತನ್ನ ಅಳಿಯನಿಗಾಗಿ ಸುಂದರವಾದ ದೊಡ್ಡ ಮಂದಿರವನ್ನು ಕಟ್ಟಿಸಿಕೊಟ್ಟನು; ಕಮಲಸುಂದರಿಯ ಸೇವೆಗಾಗಿ ಹಿಂದು ದಾಸ-ದಾಸಿಯರನ್ನಿರಿಸಿದನು; ಅವಳ ಸಲುವಾಗಿ ತಾನು ಕಟ್ಟಿಸಿದ ಮಂದಿರದ ಬಳಿಯಲ್ಲಿಯೆ ಜಗನ್ನಾಥೇಶ್ವರನ ದೇವಾಲಯವನ್ನು ಕಟ್ಟಿಸಿಕೊಟ್ಟನು. ಅವನು ತನ್ನ ವಾತ್ಸಲ್ಯದ ಕುವರಿಯ ಮನಸ್ಸಿನಂತೆ ಸಕಲ ಸುಖ-ಸೌಕರ್ಯಗಳನ್ನೊದಗಿಸಿದನು. ಕಾಲಾಚಾಂದನಿಗೆ ವಿವಾಹಾನಂತರದಲ್ಲಿ ದೊಡ್ಡ ಅಧಿಕಾರವು ಕೊಡಲ್ಪಟ್ಟಿತು. ನವಾಬನು ವಂಗರಾಜ್ಯದೊಳಗಿನ ದೊಡ್ಡ ಜಹಗೀರನ್ನು ಅವನಿಗೆ ವರದಕ್ಷಿಣೆಯೆಂದು ಸಮರ್ಪಿಸಿದನು.

ಕಾಲಾಚಾಂದನು ಯವನಿಯನ್ನು ವಿವಾಹವಾಗಿದ್ದರೂ ಅದರ ಪರಿಣಾಮವು ಅವನ ಆರ್ಯ ಸಂಸ್ಕೃತಿಯ ಮೇಲೆ ತಿಲಾಂಶವಾದರೂ ಆಗಿದ್ದಿಲ್ಲ. ಅವನು ನಿತ್ಯದಲ್ಲಿ ಸ್ನಾನ-ಸಂಧ್ಯೆ, ಜಪ-ತಪ, ಭಜನೆ ಸ್ತೋತ್ರ-ಪುರಾಣ-ಪುಣ್ಯಕಥಾಶ್ರವಣ ಮೊದಲಾದ ಕಾರ್ಯಗಳನ್ನು ಯಥಾಸ್ಥಿತವಾಗಿ ನಡೆಯಿಸಿದ್ದನು. ಅವನು ತನ್ನ ಪ್ರೀತಿಯವನಾದ ಒಬ್ಬನ ಕೈಯಿಂದಲೆ ಅಡಿಗೆ ಮಾಡಿಸಿ ಊಟ ಮಾಡುತ್ತಿದ್ದನು. ಸುಜ್ಞಳಾದ ಕಮಲಸುಂದರಿಯು ಈ ವಿಷಯದಲ್ಲಿ ಅವನಿಗೆ ಯಾವ ವಿಧದ ಅಡ್ಡಿಯನ್ನೂ ಮಾಡಿದ್ದಿಲ್ಲ. ಅವಳು ಹಿಂದು ಪದ್ಧತಿಯಿಂದ ತನ್ನ ಆಚರಣೆಯನ್ನಿಡುವದಕ್ಕಾಗಿ ಶಕ್ತಿಮೀರಿ ಸಾಹಸ ಮಾಡಹತ್ತಿದ್ದಳು. ಮುಂಜಾನೆ ಎದ್ದು ಗಂಗಾಸ್ನಾನ ತೀರಿಸಿ, ಜಗನ್ನಾಥನ ದರ್ಶನ ಹೊಂದಿ ತುಳಸೀ ಪೂಜೆಯನ್ನು ನೆರವೇರಿಸಿಯೆ ಅವಳು ಮಿಕ್ಕ ಕಾರ್ಯಗಳನ್ನು ಮಾಡುತ್ತಿದ್ದಳು. ಹಿಂದುಗಳ ಎಲ್ಲ ಹಬ್ಬಗಳನ್ನು ಅವಳು ವಿಜೃಂಭಣೆಯಿಂದ ನೆರವೇರಿಸುತ್ತಿದ್ದಳು. ವ್ರತೋಪೋಷಣಾದಿಗಳನ್ನು ಯಥಾಕಾಲಕ್ಕೆ ಮಾಡುತ್ತಿದ್ದಳು. ಒಟ್ಟಿನ ಮೇಲೆ ಅವಳು ಸ್ವಲ್ಪ ದಿನಗಳಲ್ಲಿ ಆದರ್ಶ ಆರ್ಯ ಮಹಿಳೆಯಾದಳು. ಕಾಲಾಚಾಂದನು ತನ್ನ ಪತ್ನಿಯ ಸುಸಂಸ್ಕೃತಿಯನ್ನು ನೋಡಿ ಹಿರಿಹಿರಿ ಹಿಗ್ಗುತ್ತಿದ್ದನು. ಆ ನವದಂಪತಿಗಳು ಸ್ವಾನಂದ ಸಾಮ್ರಾಜ್ಯದಲ್ಲಿ ಮುಳುಗಿ ಸಂಸಾರ ಶಕಟವನ್ನು ಸಾಗಿಸಲಾರಂಭಿಸಿದ್ದರು. ತಾನು ಯವನಿಯಿದ್ದೆನೆಂಬದರ ಅರಿವು ಕಮಲಸುಂದರಿಗಿದ್ದಿಲ್ಲ; ತಾನು ಯವನಿಯ ಪಾಣಿಗ್ರಹಣ ಮಾಡಿರುವೆನೆಂಬದರ ನೆನಪು ಕಾಲಾಚಾಂದನಿಗಿರಲಿಲ್ಲ. ಈರ್ವರೂ ನೂತನ ಸಂಸಾರದಲ್ಲಿ ತಲ್ಲೀನತೆಯನ್ನು ಹೊಂದಿ ತಾವೇ ತಾವಾಗಿದ್ದರು.

ಮಹಾ ಶಿವರಾತ್ರಿಯ ಪರ್ವಕಾಲವು ಬಂದಿತು. ಕಾಲಾಚಾಂದನೂ ಕಮಲಸುಂದರಿಯೂ ಅಂದು ಉಪೋಷಣ ಮಾಡಿದರು. ಪ್ರದೋಷಕಾಲಕ್ಕೆ ಮಹೇಶನಿಗೆ ಅಭಿಷೇಕ ಮಾಡಿ ಬರಬೇಕೆಂದು ಕಾಲಾಚಾಂದನು ಶಿವಾಲಯಕ್ಕೆ ತೆರಳಿದನು. ಕಮಲಸುಂದರಿಯಾದರೂ ದೇವತಾ ದರ್ಶನಕ್ಕಾಗಿ ಅವನ ಹಿಂದೆ ನಡೆದಳು. ಇಬ್ಬರೂ ದೇವಸ್ಥಾನದ ಬಾಗಿ

ಲಿಗೆ ಬಂದ ಕೂಡಲೆ ಪೂಜಾರಿಯು ಅವರನ್ನು ತಡೆದು:—"ಹೊರ ಗಿಂದಲೆ ದೇವದರ್ಶನ ತೆಗೆದುಕೊಂಡು ಹೋಗತಕ್ಕದ್ದು!"

"ಅದೇಕೆ?" ಕಾಲಾಚಾಂದನು ವಿಸ್ಮಯದಿಂದ ಕೇಳಿದನು.

"ಧರ್ಮಭ್ರಷ್ಟರಾದ ನಿಮ್ಮನ್ನು ದೇವಾಲಯದಲ್ಲಿ ತೆಗೆದುಕೊಳ್ಳ ಲಿಕ್ಕೆ ಬರುವಂತಿಲ್ಲ."

"ನಾನು ಹಿಂದುವಿರುವೆನು; ಬ್ರಾಹ್ಮಣನಿರುವೆನು."

"ಯವನಿಯ ಪಾಣಿಗ್ರಹಣ ಮಾಡಿದ್ದರಿಂದ ನಿಮ್ಮ ಹಿಂದುತ್ವವು ನಾಶವಾಗಿರುವದು."

ಕಾಲಾಚಾಂದನು ನಖಶಿಖಾಂತವಾಗಿ ಉರಿಯತೊಡಗಿದನು. ಕರ್ತು ಮಕರ್ತುಮನ್ಯಥಾಕರ್ತುಂ ಶಕ್ತಿಯುಳ್ಳ ತನ್ನನ್ನು ಯಃಕಶ್ಚಿತ ಪೂಜಾ ರಿಯು ಪ್ರತಿಬಂಧಿಸಿದ್ದರಿಂದ ಅವನ ಸಂತಾಪವು ಅನಿವಾರವಾಯಿತು. ಆ ಪೂಜಾರಿಯ ಪಾರಿಪತ್ಯ ಮಾಡಿ ಬಿಡಬೇಕೆಂಬ ಆಲೋಚನೆಯು ಸಹ ಅವನ ಮನಸ್ಸಿನಲ್ಲಿ ಹುಟ್ಟಿತು. ಕಮಲಸುಂದರಿಗೆ ಪತಿಯ ಆ ಮನಃಸ್ಥಿತಿ ಯು ತಿಳಿಯದಿರಲಿಲ್ಲ. ಅವಳು ಕಾಲಾಚಾಂದನನ್ನು ಸವಿಮಾತಿನಿಂದ ಸಂತೈಸಿ, ಪೂಜಾರಿಯನ್ನು ಕುರಿತು —

"ದೇವಮಂದಿರದಲ್ಲಿ ನನ್ನ ಪ್ರವೇಶ ಮಾಡಗೊಡದಿದ್ದರೆ ಅಷ್ಟೇ ಹೋಯಿತು; ಇವರನ್ನು ಒಳಗೆ ಬಿಡಲಿಕ್ಕೆ ಅಡ್ಡಿಯೇನು?"

"ರಾಜಪುತ್ರಿ, ದೇವಾಲಯ ಪ್ರವೇಶಕ್ಕೆ ನಿಮಗಂತೂ ಪೂರ್ಣ ವಾದ ಪ್ರತಿಬಂಧವಿರುವದು. ಜಾತಿಭ್ರಷ್ಟರಾದ ಈ ಕಾಲಾಚಾಂದ ರಾಯರನ್ನು ದೇವಮಂದಿರ ಪ್ರವೇಶಮಾಡಗೊಡಬಾರದೆಂದು ಸಮಾಜದ ಆಜ್ಞೆಯಾಗಿರುವದು."

"ಏನು, ಸಮಾಜದ ಆಜ್ಞೆಯಾಗಿರುವದೆ?"

"ಹಾಗಿಲ್ಲದಿದ್ದರೆ ನಾನು ನಿಮ್ಮನ್ನು ಪ್ರತಿಬಂಧಿಸಿ ನಿಮ್ಮ ರೋಷಕ್ಕೆ ಪಾತ್ರನಾಗುವ ಕಾರಣವೇನು? ರಾಜಜಾಮಾತರಾದ ನಿಮ್ಮ ಭಯವು ನನ ಗಿಲ್ಲವೇನು? ಸಮಾಜದ ಆಜ್ಞೆ ಮೀರಿದರೆ ನಿಮ್ಮ ಗತಿಯು ನನಗಾದರೂ ಬರುವದೆಂದು ನಿರುಪಾಯನಾಗಿ ಈ ಕೃತಿಯನ್ನು ಮಾಡಬೇಕಾಯಿತು."

ಸಮಾಜದ ಹೆಸರು ಮುಂದೆ ಮಾಡಿದ್ದರಿಂದ ಪೂಜಾರಿಯು ಉಳಿದ ನೆನ್ನಬಹುದು. ನವಾಬನ ಜಾಮಾತನು-ಅರಸನ ಪೂರ್ಣಕೃಪಾಪಾತ್ರನು-ಕ್ಷೋಭೆಗೊಂಡರೆ ಯಾವ ಒಗೆಯು ಅನರ್ಥವಾದರೂ ಒದಗುವಂತಿತ್ತು. ಸಮಾಜದ ಹೇಳಿಕೆಯಿಂದ ಪೂಜಾರಿಯು ತನ್ನ ಅಪಮಾನ ಮಾಡಿದನೆಂದು ಅವನು ಬಗೆದನು. ತನಗೆ ಅಪಮಾನವಾದ ವಿಷಯದಲ್ಲಿ ಸಮಾಜವೇ ಪೂರ್ಣವಾಗಿ ಬಾಧ್ಯವಿರುವದೆಂದು ಅವನ ತಿಳುವಳಿಕೆಯಾಯಿತು. ಸಮಾಜವಾದರೂ ಈ ಒಗೆಯ ಆಜ್ಞೆಯನ್ನು ವಿಧಿಸಬೇಕಾದರೆ, ಅದು ತಪ್ಪುತಿಳುವಳಿಕೆಯುಳ್ಳದ್ದಾಗಿರುವದೆಂದು ಅವನ ಭಾವನೆಯಾಯಿತು. ಸಮಾಜದಲ್ಲಿ ನೆಲೆಗೊಂಡ ಪರಂಪರಾಗತವಾದ ಅಂಧಶ್ರದ್ಧೆಯನ್ನು ಹೋಗಲಾಡಿಸಿದರೆ ಎಲ್ಲವೂ ಸರಳವಾಗುವದೆಂದು ಅವನು ತಿಳಿದುಕೊಂಡು, ಮಂದಿರಪ್ರವೇಶಕ್ಕಾಗಿ ಆಗ್ರಹಗೊಳ್ಳದೆ ಹೊರಗಿನಿಂದಲೆ ಮಹೇಶ್ವರನಿಗೆ ಪ್ರಣಾಮಗಳನ್ನರ್ಪಿಸಿ ಮನೆಗೆ ಬಂದನು.

ಹಿಂದುಸಮಾಜವು ಕಾಲಾಚಾಂದನಿಗೆ ಸಂಪೂರ್ಣವಾಗಿ ಬಹಿಷ್ಕಾರ ಹಾಕಿತ್ತು. ದೇವಮಂದಿರಗಳನ್ನು ಪ್ರವೇಶಿಸಲಿಕ್ಕೆ ಅವನಿಗೆ ಅಡ್ಡ ಮಾಡಿತ್ತು. ಅವನ ಮನೆತನದ ಕೆಲವು ಧರ್ಮಕೃತ್ಯಗಳು ನಿಂತುಹೋಗಿದ್ದವು. ಜನರಲ್ಲಿ ನೆಲೆಗೊಂಡಿದ್ದ ಅಂಧಶ್ರದ್ಧೆಯನ್ನು ದೂರ ಮಾಡುವದಕ್ಕಾಗಿ ಕಾಲಾಚಾಂದನು ಯತ್ನಿಸತೊಡಗಿದನು. ದೊಡ್ಡ ದೊಡ್ಡ ಶಾಸ್ತ್ರಿಗಳನ್ನೂ ಧರ್ಮಪಂಡಿತರನ್ನೂ ಕೂಡಿಸಿ, ತನ್ನ ಧಾರ್ಮಿಕ ಪವಿತ್ರತೆಯನ್ನು ಪ್ರಸ್ಥಾಪಿಸಲಿಕ್ಕೆ ಬಹಳೇ ಹಣಗಿದನು. ಯವನಿಯ ಸಂಸರ್ಗದಿಂದ ಜಾತಿಭ್ರಷ್ಟನಾದವನನ್ನು ಪವಿತ್ರವಾದ ಸನಾತನ ಧರ್ಮದಲ್ಲಿ ತೆಗೆದುಕೊಳ್ಳಲಿಕ್ಕೆ ಬರುವದಿಲ್ಲವೆಂದು ಹಿಂದುಸಮಾಜದ ಜನರು ಅವನಿಗೆ ಸ್ಪಷ್ಟವಾಗಿ ಹೇಳಿದರು. ತಮ್ಮ ಜನರೊಳಗಿನ ಲಕ್ಷಾವಧಿ ಜನರು ಪರಧರ್ಮದಲ್ಲಿ ಸೇರಿದರೂ ಅಡ್ಡಿಯಿಲ್ಲ; ವಿಧರ್ಮಿಯ ಮನುಷ್ಯನು ಒಬ್ಬನಾದರೂ ಹಿಂದುಧರ್ಮದಲ್ಲಿ ಸೇರಬಾರದೆಂದು ಸನಾತನ ಧರ್ಮಿಯರು ಶಾಸ್ತ್ರಬಲದಿಂದ ಸಾರತೊಡಗಿದ್ದರು. ಯವನಿಯನ್ನು ಹಿಂದು ಧರ್ಮದಲ್ಲಿ ತೆಗೆದುಕೊಂಡು ಅವಳನ್ನು ವಿವಾಹವಾಗಿದ್ದರೂ, ಸಮಾಜವು

ತನ್ನನ್ನು ಧರ್ಮಚ್ಯುತನೆಂದು ತಿಳಿದುಕೊಂಡದ್ದರಿಂದಲೂ ಮೇಲಿಂದ ಮೇಲೆ ಅಪಮಾನಗೊಳಿಸತೊಡಗಿದ್ದರಿಂದಲೂ ಕಾಲಾಚಾಂದನ ಶಾಂತಿಯು ನಷ್ಟವಾಯಿತು. ಮಾನಧನನಾದ ಅವನ ಹೃದ್ಧಯವು ಸಂತಪ್ತವಾಯಿತು. ತಾನು ಧರ್ಮಾಂತರ ಹೊಂದಿದ್ದರೂ ಪರಮ ಪವಿತ್ರವಾದ ಸನಾತನ ಧರ್ಮಕ್ಕೆ ಎರವಾಗಬೇಕಾಯಿತೆಂದು ಅವನ ಮನಸ್ಸು ಅತಿರೇಕವಾದ ಉದ್ವಿಗ್ನತೆಯನ್ನು ಹೊಂದಿತು. ಸ್ವಧರ್ಮದಲ್ಲಿ ಸ್ಥಾನವು ದೊರೆಯಬೇಕೆಂಬ ಆತುರತೆಯಿಂದ ಕಾಲಾಚಾಂದನು ಬಾಂಧವರಲ್ಲಿಯೂ ಇಷ್ಟಮಿತ್ರರಲ್ಲಿಯೂ ಪ್ರಯತ್ನಿಸಿ ನೋಡಿದನು. ಅವನ ಪ್ರಯತ್ನದಿಂದ ಫಲವು ದೊರೆಯದೆ, ಹೋದ ಹೋದಲ್ಲಿ ಅಪಮಾನವು ದೊರೆಯುತೊಡಗಿತು. ಜನರು ತನ್ನನ್ನು ತಿರಸ್ಕರಿಸಿದರೂ ತಾಯಿಯು ಮಾತ್ರ ಹಾಗೆ ಮಾಡಲಾರಳೆಂದು ಅವನ ಭಾವನೆಯಿತ್ತು. ಅಲ್ಲಿಯಾದರೂ ಬಾಹ್ಯಸತ್ಕಾರದ ಹೊರತು ಉಳಿದ ಲಾಭವೇನೂ ಆಗುವ ಲಕ್ಷಣವು ತೋರಲಿಲ್ಲ. ಕರುವು ಕಳಕೊಂಡ ತಾಯಿಯನ್ನರಸುತ್ತ ತಿರುಗಾಡುವಂತೆ ಕಾಲಾಚಾಂದನು ಹಿಂದುಧರ್ಮದ ಕಡೆಗೆ ಧಾವಿಸಿದ್ದನು. ಹೋದ ಹೋದಲ್ಲಿ ಅಪಮಾನ, ವಿಟಂಬನೆ, ತಿರಸ್ಕಾರ ಮೊದಲಾದ ಸತ್ಕಾರಗಳಾಗತೊಡಗಿದ್ದರಿಂದ ಅವನು ದುಃಖ, ಔದಾಸೀನ್ಯ, ಸಂತಾಪ ಮೊದಲಾದ ವಿಕಾರಗಳಿಂದ ಆತ್ಮಶಾಂತಿಯನ್ನೂ ಸ್ಥೈರ್ಯವನ್ನೂ ಕಳಕೊಂಡನು.

ಕಾಲಾಚಾಂದನು ತನ್ನ ಪ್ರಮೋದಭುವನದಲ್ಲಿ ಕುಳಿತಿದ್ದನು. ಅವನ ಸಹಧರ್ಮಚಾರಿಣಿಯಾದ ಕಮಲಸುಂದರಿಯು ಅವನ ಸಮೀಪದಲ್ಲಿಯೇ ಇದ್ದಳು. ಪತಿಯ ಮನಸ್ಸು ಚಿಂತಾತುರವಾದದ್ದರಿಂದ ಅವಳಿಗಾದರೂ ದುಃಖವಾಗಿತ್ತು. ಅವನಲ್ಲಿ ಸುಖ-ಸಮಾಧಾನಗಳು ನೆಲೆಗೊಳ್ಳುವದಕ್ಕಾಗಿ ಕಮಲಸುಂದರಿಯು ತನ್ನ ಯೋಗ್ಯತೆಮೀರಿ ಯತ್ನಿಸತೊಡಗಿದ್ದಳು. ಅವಳು ಪತಿಯನ್ನು ಕುರಿತು—"ನಾಥರೆ, ನೀವು ಸಮಾಜಕ್ಕೆ ಅಷ್ಟೊಂದು ಮಹತ್ವ ಕೊಡುವ ಕಾರಣವೇನು? ಅವರಿಂದ ನಮ್ಮ ಕಾರ್ಯಗಳು ತಡೆದು ನಿಂತಿರುವದಿಲ್ಲವಷ್ಟೆ? ಅವರು ನಿಮ್ಮನ್ನು ಬಹಿಷ್ಕೃತರನ್ನು ಮಾಡಿದ್ದಕ್ಕಾಗಿ ಮನಸ್ಸಿಗೆ ಹಚ್ಚಿಕೊಳ್ಳುವ ಕಾರಣವಿಲ್ಲ.

ನಿಮ್ಮ ಧರ್ಮವು ಎಂಥ ಧರ್ಮವೋ ಏನೋ! ನೀವು ನಿರಪರಾಧಿಗಳಿದ್ದರೂ ನಿಮ್ಮ ಮೇಲೆ ಸಮಾಜವು ಈಪರಿಯಾಗಿ ಕ್ಷೋಭೆಗೊಂಡ ಕಾರಣವೇನು? ಪವಿತ್ರವೂ ನಿಶ್ಚಲವೂ ಭಾವನಾಪ್ರಧಾನವೂ ಆದ ನಿಮ್ಮ ಮನಸ್ಸಿಗೆ ದುಃಖವಾಗಬಾರದೆಂದು ನಾನು ನಿಮ್ಮನ್ನು ಯವನ ಧರ್ಮ ದೀಕ್ಷೆ ತೆಗೆದುಕೊಳ್ಳಹಚ್ಚಲಿಲ್ಲ. ಕೇವಲ ನಿಮ್ಮ ಪ್ರೇಮಸಂಪಾದನೆಗಾಗಿ ನಾನು ನನ್ನ ಧರ್ಮವನ್ನು ತ್ಯಜಿಸಿ ಹಿಂದು ಧರ್ಮದಲ್ಲಿ ಸೇರಿದೆನು. ವಸ್ತುಸ್ಥಿತಿಯು ಹೀಗಿದ್ದರೂ ಅಚ್ಚ ಹಿಂದುಗಳಾದ ನಿಮ್ಮ ಮೇಲೆ ಸಮಾಜವು ಇಷ್ಟೇಕೆ ಅತ್ಯಾಚಾರವನ್ನು ನಡೆಯಿಸಿರುವದೋ ಏನೋ! ಸಾರಾಸಾರ ವಿಚಾರವಿಲ್ಲದ ಹಾಗು ಅಂಧಪರಂಪರೆಯು ನೆಲೆಗೊಂಡ ಸಮಾಜದಲ್ಲಿ ಸೇರುವದಕ್ಕೆ ಯತ್ನಿಸುವದಕ್ಕಿಂತ ಮುಕ್ತಮಾರ್ಗವಾದ ಇಸ್ಲಾಮೀಯ ಧರ್ಮವನ್ನು ಸ್ವೀಕರಿಸುವದು ಹಿತಕಾರಕವು.''

''ಕಮಲಸುಂದರಿ, ನಮ್ಮ ಧರ್ಮದವರಲ್ಲಿ ಅಂಧಪರಂಪರೆಯು ನೆಲೆಗೊಂಡದ್ದು ನಿಜವಿರುವದು. ಅದನ್ನು ಹೋಗಲಾಡಿಸುವದಕ್ಕಾಗಿ ನಾನು ಪ್ರಯತ್ನಮಾಡುವೆನು. ಅನೇಕ ಬಗೆಯಿಂದ ಯತ್ನಿಸಿ ಕಾರ್ಯಸಾಫಲ್ಯ ಮಾಡಿಕೊಳ್ಳುವದು ನಿಜವಾದ ಕರ್ತೃತ್ವಶಾಲಿಯ ಲಕ್ಷಣವು. ಪರಮ ಪವಿತ್ರವಾದ ಸನಾತನ ಧರ್ಮದಲ್ಲಿದ್ದ ಸುಖಶಾಂತಿಗಳು ಅನ್ಯಧರ್ಮದಲ್ಲಿ ನನಗೆ ದೊರೆಯುವದು ಸಾಧ್ಯವಿಲ್ಲ. ನಾನು ನಿರಪರಾಧಿಯೂ, ಪವಿತ್ರ ಭಾವನೆಯುವನೂ ಇರುವೆನೆಂದು ನನ್ನ ಆತ್ಮವಿಶ್ವಾಸವಿರುವದು. ಜನರ ದೃಷ್ಟಿಯು ವಿಶಿಷ್ಟಪ್ರಕಾರದ್ದಿರುವದರಿಂದ ನಾನು ಅವರಿಗೆ ದೋಷಿಯೂ ಧರ್ಮಚ್ಯುತನೂ ಎಂಬಂತೆ ಕಾಣುತ್ತಿರುವೆನಾಗಿದ್ದೀತು; ಆದರೂ ಸಮಾಜವು ಹೇಳಿದ ಪ್ರಾಯಶ್ಚಿತ್ತಕ್ಕೆ ನನ್ನ ಸಿದ್ಧತೆಯಿರುವದು. ಪರಮಪಾವನಕರವಾದ ದೇವಸ್ಥಾನಗಳಿಗೂ ಕ್ಷೇತ್ರ-ತೀರ್ಥಗಳಿಗೂ ಹೋಗುವದಕ್ಕೆ ಪ್ರತಿಬಂಧವಾದ ಮೇಲೆ ನನಗೆ ತಾರಣಮಾರ್ಗವೇ ದೊರೆಯದಂತಾಗುವದೆಂಬ ಭಯವು ಸಂಪೂರ್ಣವಾಗಿರುವದು. ನಾವಿಬ್ಬರೂ ಶುದ್ಧಿಸಂಸ್ಕಾರದಿಂದ ಆರ್ಯಧರ್ಮದಲ್ಲಿ ಕಲೆತು ನಡೆಯುವ ವರೆಗೆ ನನ್ನ ಮನಸ್ಸಿಗೆ ಶಾಂತಿಯು ದೊರೆಯುವಂತಿಲ್ಲ.''

"ಪ್ರಿಯಕರಾ, ಇಡೀ ವಂಗರಾಜ್ಯವು ನಿಮ್ಮ ಕೈಯಲ್ಲಿರುವದು. ದೈನ್ಯದಿಂದ ಬೇಡಿಕೊಳ್ಳುವದಕ್ಕಿಂತ ದಂಡೋಪಾಯವನ್ನು ಯೋಜಿಸಿದರೆ ನಿಮ್ಮ ಮನಸ್ಸಿನಂತೆ ಕಾರ್ಯವಾಗುವದಿಲ್ಲವೇನು?"

"ಕೈಯಲ್ಲಿ ಅಧಿಕಾರವಿರುವದೆಂದು ಬಲಾತ್ಕಾರ ಮಾಡಬಾರದು. ಜನರ ಮನಸ್ಸನ್ನು ಒಡಂಬಡಿಸಿ ಕಾರ್ಯ ಮಾಡುವದು ಶ್ರೇಯಸ್ಕರವಾಗುವದು. ಒತ್ತಾಯದಿಂದ ಮಾಡಿದ ಕಾರ್ಯದಿಂದ ಅನರ್ಥವಾಗುವ ಸಂಭವವು ಬಹಳ ವುಂಟು. ಇನ್ನೂ ಕೆಲವು ಸ್ಥಳಗಳಿಗೆ ಹೋಗಿ ನನ್ನ ಪವಿತ್ರತೆಯನ್ನು ಸಿದ್ಧಪಡಿಸುವೆನು. ಜಗತ್ತೇ ಮೂರ್ಖವಿರಲಾರದೆಂದು ನನ್ನ ತಿಳುವಳಿಕೆಯಿರುವದು. ದೈವಯೋಗವು ಹೇಗಿರುವದೋ ನೋಡಬೇಕು."

"ಎಲ್ಲ ಕಡೆಯಲ್ಲಿಯೂ ನಿರಾಶೆ ಹೊಂದಿದರೆ ನೀವು ಏನು ಮಾಡುವಿರಿ?"

ಕಮಲಸುಂದರಿಯ ಮಾತುಗಳನ್ನು ಕೇಳಿ, ಕಾಲಾಚಾಂದನ ಕಣ್ಣುಗಳಿಂದ ಅಶ್ರುಧಾರೆಗಳು ಹರಿಯತೊಡಗಿದವು. ಸನಾತನ ಧರ್ಮವನ್ನು ತೊಲಗುವದೆಂದರೆ ಅವನಿಗೆ ಮರಣಸದೃಶವಾದ ದುಃಖವೆನಿಸಿತ್ತು. ಪತ್ನಿಯ ಮಾತುಗಳು ತೀರ ಅಭದ್ರವಾಗಿ ಅವನಿಗೆ ತೋರಿದವು. ಆಗ ಅವನು ಕ್ಲೇಶದಿಂದ:—"ಪ್ರಿಯೆ, ಹೃದಯವಿದಾರಕ ಮಾತುಗಳನ್ನಾಡಬೇಡ. ಸಾಮಾನ್ಯ ಜನರು ನನ್ನನ್ನು ತಿರಸ್ಕರಿಸುವರೆಂದು ನಾನು ಭಗ್ನಮನೋರಥನಾಗಲಾರೆನು. ದೊಡ್ಡ ದೊಡ್ಡ ಕ್ಷೇತ್ರಗಳಲ್ಲಿ ಧರ್ಮಪಂಡಿತರಿರುವರು. ಅವರು ನನ್ನನ್ನು ಎಂದಿಗೂ ಉಪೇಕ್ಷಿಸಲಾರರು."

"ಇಷ್ಟರಲ್ಲಿ ನೀವು ಅನೇಕ ಪಂಡಿತರನ್ನು ಭೆಟ್ಟಿಯಾಗಿರುವಿರಿ; ಎಷ್ಟೋ ಶಾಸ್ತ್ರಗಳನ್ನು ವಿಚಾರಿಸಿರುವಿರಿ. ಕೇಳಿದಲ್ಲಿ ಒಂದೇ ವಿಧದ ಉತ್ತರವು ಹೊರಡತೊಡಗಿದೆ. ನನ್ನನ್ನು ತ್ಯಾಗ ಮಾಡಿದರೆ ಪ್ರಾಯಶ್ಚಿತ್ತ ಮೂಲಕವಾಗಿ ನಿಮ್ಮನ್ನು ಶುದ್ಧೀಕರಿಸಬಹುದಾಗಿದೆ. ನಾನು ವಿಧರ್ಮದವಳಿದ್ದುದರಿಂದ ಹಿಂದು ಧರ್ಮದಲ್ಲಿ ತೆಗೆದುಕೊಳ್ಳಲಿಕ್ಕೆ ಆಧಾರಗಳಿಲ್ಲವೆಂದು ಧರ್ಮಪಂಡಿತರ ಅಭಿಪ್ರಾಯವಿರುವದು. ಶ್ರೀ

ಕ್ಷೇತ್ರಗಳಲ್ಲಾದರೂ ನಿಮಗೆ ಇದೇ ವಿಧದ ಉತ್ತರವು ದೊರೆಯುವ ದೆಂದು ನನ್ನ ಮನಸ್ಸಿಗೆ ತಿಳಿಯಲಾರಂಭಿಸಿದೆ. ನಾಥರೆ, ಸ್ವಧರ್ಮ ದವರು ನಿಮ್ಮನ್ನು ತ್ಯಾಗಮಾಡಿದಂದಿನಿಂದ ನಿಮ್ಮ ಮನಸ್ಸು ಅತ್ಯಂತ ಉದ್ವಿಗ್ನವಾಗಿರುವದು. ಹೃದಯವು ಭಯಂಕರವಾಗಿ ದಹಿಸತೊಡಗಿ ರುವದು. ಮನಶ್ಶಾಂತಿಯು ನಾಶವಾಗಿರುವದು. ಸ್ವಧರ್ಮದವರಿಂದ ಎತ್ತಿ ಒಗೆಯಲ್ಪಟ್ಟ ನೀವು ಇಡೀ ಆಯುಷ್ಯವನ್ನು ಇದೇ ಬಗೆಯ ದುಃಖ ಮಯ ಸ್ಥಿತಿಯಲ್ಲಿ ತಳೆಯುವ ಪ್ರಸಂಗವೆಲ್ಲಿ ಒರುವದೋ! ಎಂದು ನನ್ನ ಅಂತಃಕರಣವು ಬಸವಳಿಯತೊಡಗಿದೆ. ನಾಥರೆ, ನೀವು ನನ್ನನ್ನು ತ್ಯಾಗ ಮಾಡಿದರೆ ನಿಮಗೆ ಮೊದಲಿನ ಸೌಖ್ಯಗಳು ದೊರೆಯುವಂತಿವೆ. ಈ ಬಗೆಯ ಪರಿಸ್ಥಿತಿಯೊದಗುವದೆಂದು ನಾನು ಮೊದಲು ಯೋಚಿಸಿದ್ದಿಲ್ಲ."

"ಪ್ರಿಯೆ, ನಾನು ಮನುಷ್ಯಕೋಟಿಯೊಳಗಿನವನಲ್ಲವೆಂದು ನಿನ್ನ ಭಾವನೆಯಿರುವದೇನು? ಯಾವ ಅಪರಾಧವಿರುವದೆಂದು ನಿನ್ನನ್ನು ತ್ಯಾಗ ಮಾಡಲಿ? ನನ್ನ ಸಲುವಾಗಿ ಸ್ವಧರ್ಮವನ್ನು ತ್ಯಜಿಸಿದ ಅಬಲೆಯಾದ ನಿನ್ನ ಕೊರಳು ಕೊಯ್ಯುವದು ಕೃತಘ್ನತೆಯೂ ನೀಚತನವೂ ಎನಿಸಿಕೊಳ್ಳುವ ದಿಲ್ಲವೆ? ನಂಬಿ-ನಚ್ಚಿದ ಸಹಧರ್ಮಚಾರಿಣಿಯನ್ನು ಯಾವ ಉದ್ದೇಶದಿಂದ ತ್ಯಜಿಸಲಿ? ಪ್ರಸಂಗವೊದಗಿದರೆ ಪ್ರಾಣವನ್ನು ತ್ಯಜಿಸುವೆನಲ್ಲದೆ ನಿನ್ನನ್ನು ತ್ಯಜಿಸಲಾರೆನು."

ಕಾಲಾಚಾಂದನ ಮಾತುಗಳನ್ನು ಕೇಳಿ ಕಮಲಸುಂದರಿಗೆ ಅಪರಿ ಮಿತವಾದ ಆನಂದವಾಯಿತು. ಆನಂದಭರದಲ್ಲಿ ಅವಳು ಪತಿಯನ್ನು ಬಿಗಿದಪ್ಪಿ:—"ನೀವು ಗುಣನಿಧಿಗಳೆಂಬದನ್ನು ಅರಿತೇ ನಾನು ನಿಮ್ಮ ಮೂರ್ತಿಯನ್ನು ಹೃದಯಮಂದಿರದಲ್ಲಿ ಸ್ಥಾಪಿಸಿದೆನು. ಪ್ರೇಮದ ಪ್ರಭಾವವು ಮಹತ್ವದ್ದಾದುದರಿಂದಲೆ ಕುಲಗೌರವವನ್ನೂ ವೈಭವಶಾಲಿತ್ವ ವನ್ನೂ ಮರೆತೆನು. ಐಶ್ವರ್ಯಕ್ಕಾಗಿ-ರಾಜಸತ್ತೆಗಾಗಿ-ಕುಲಗೌರವಕ್ಕಾಗಿ ಜೀವನವಿರುವದಿಲ್ಲ. ಭಾವೀ ಆಯುಷ್ಯವು ಯಾತರಿಂದ ಆನಂದಮಯ ವಾಗುವದೊ ಅದನ್ನು ದೊರಕಿಸುವದಕ್ಕಾಗಿ ಬಾಳಬೇಕಾಗುವದು. ಆಯುಷ್ಯವನ್ನು ದುಃಖಮಯ ಮಾಡುವದಕ್ಕಿಂತ ಮರಣವು ಮೇಲು.

ಈ ತತ್ವದಿಂದಲೇ ತೇಜಸ್ವಿಗಳಾದ ನಿಮ್ಮನ್ನು ನಾನು ವರಿಸಿದೆನು. ನನ್ನ ಸುಖಕ್ಕೆ ಈಗ ಯಾವ ವ್ಯತ್ಯಯವೂ ಇರುವದಿಲ್ಲ. ಸಮಾಜದವರಿಂದ ನಿಮ್ಮ ಆತ್ಮಶಾಂತಿಯು ನಾಶವಾಗಿ ಉದಾಸೀನತೆಯನ್ನು ಹೊಂದುವಿರೆಂಬ ಚಿಹ್ನವು ನನಗೆ ಸ್ಪಷ್ಟವಾಗಿ ಕಾಣತೊಡಗಿದೆ. ಇದೊಂದು ನಮ್ಮ ಸೌಖ್ಯದ ಮಾರ್ಗದಲ್ಲಿ ಬಲವಾದ ಕಂಟಕವಾಗಿರುವದು.''

"ಪ್ರಿಯೆ, ನೀನು ಭಯಪಡುವ ಕಾರಣವಿಲ್ಲ. ಸುಜ್ಞ ಸಮಾಜವು ನನ್ನನ್ನು ಎಂದೂ ಉಪೇಕ್ಷಿಸಲಾರದು. ಇನ್ನೂ ಒಂದೆರಡು ಸ್ಥಳಗಳಲ್ಲಿ ಹೋಗಿ ಅಲ್ಲಿ ಕಾರ್ಯವಾಗದಿದ್ದರೆ ಪುಣ್ಯಮಯವಾದ ಶ್ರೀ ಕ್ಷೇತ್ರ ಜಗನ್ನಾಥಪುರಿಗೆ ಹೋಗಿ ಸಾಹಸ ಮಾಡುವೆನು. ಇದೇ ನನ್ನ ಕೊನೆಯ ಉಪಾಯವು. ನನ್ನ ಬಾಲ್ಯಸ್ನೇಹಿತನೊಬ್ಬನು ಅತ್ಯಂತ ಪ್ರೇಮಲ ಹೃದಯದವನೂ ಸುವಿಚಾರಿಯೂ ಇರುವನು. ಅವನಲ್ಲಿಗೆ ಹೋಗಿ, ಅನಂತರದಲ್ಲಿ ಶ್ರೀಕ್ಷೇತ್ರಕ್ಕೆ ಹೊರಡುವೆನು.''

ಮಾರನೆಯ ದಿನ ಪ್ರಾತಃಕಾಲದಲ್ಲಿಯೆ ಕಾಲಾಚಾಂದನು ಗದಾಧರನ ಭೆಟ್ಟಿಗಾಗಿ ಸಾಂತೋಡೆಗೆ ತೆರಳಿದನು. ಗದಾಧರನು ಸಾಂತೋಡೆಯಲ್ಲಿಯು ತನ್ನ ಶ್ವೇತಮಂದಿರದಲ್ಲಿದ್ದನು. ಅಲ್ಲಿ ಕಾಲಾಚಾಂದನು ಅವನನ್ನು ಕಂಡನು. ಬಹಳ ದಿನಗಳ ಮೇಲೆ ಬಾಲಮಿತ್ರನ ದರ್ಶನವಾದದ್ದರಿಂದ ಗದಾಧರನಿಗೆ ಪರಮಾನಂದವಾಯಿತು. ಅವನು ಮಿತ್ರವಾತ್ಸಲ್ಯದಿಂದ ಕಾಲಾಚಾಂದನನ್ನು ಬಿಗಿದಪ್ಪಿದನು. ತನ್ನ ಮಿತ್ರನು ತನ್ನ ವಿಷಯವಾಗಿ ಇಷ್ಟು ಅನುರಾಗವುಳ್ಳವನಿರುವನೆಂದು ಕಾಲಾಚಾಂದನು ಭಾವಿಸಿದ್ದಿಲ್ಲ. ಅಲ್ಲಿಯಾದರೂ ತನಗೆ ಔದಾಸಿನ್ಯ ತಿರಸ್ಕಾರಗಳು ಎಲ್ಲಿ ವ್ಯಕ್ತವಾಗುವವೋ? ಎಂದು ಅವನು ತಿಳಿದಿದ್ದನು. ಆ ತಿಳುವಳಿಕೆಯು ತೀರ ಹುರುಳಿಲ್ಲದ್ದೆಂದು ಈಗ ಅವನ ನಂಬಿಗೆಯಾಯಿತು. ಪೂರ್ವ ದುಷ್ಕೃತಿಗಳನ್ನು ಮರೆತು ಸದಯಾಂತಃಕರಣವುಳ್ಳವನಾಗಿ ಆಚರಿಸತೊಡಗಿದ ಗದಾಧರನ ವಿಷಯದಲ್ಲಿ ಅವನು ಅತ್ಯಂತ ಆದರವುಳ್ಳವನಾದನು. ಪ್ರೇಮಲ ಸ್ವಭಾವದ ಗದಾಧರನು ತನ್ನನ್ನು ತಿರಸ್ಕರಿಸಲಿಕ್ಕಿಲ್ಲವೆಂದು ಅವನ ಮನವರಿಕೆಯಾಯಿತು, ಆಗ ಅವನು ಗದಾಧರನನ್ನು

ಕುರಿತು:—"ಮಿತ್ರಾ, ಮಧ್ಯಂತರದ ವಿಷಯುವನ್ನು ಮರೆತು, ನೀನು ನನ್ನನ್ನು ಚನ್ನಾಗಿ ಪ್ರೀತಿಸುವೆಯಾ?"

"ಕಾಲಾಚಾಂದರಾಯ, ಯಾವ ಸ್ಥಿತಿಯಲ್ಲಿಯೂ ನಾನು ನಿನ್ನನ್ನು ತ್ಯಾಗ ಮಾಡಿರುವದಿಲ್ಲ. ಆಗಿ ಹೋದ ವಿಷಯುಗಳ ಸಲುವಾಗಿ ವ್ಯಸನ ಪಡುವ ಸ್ವಭಾವವು ನನ್ನದಲ್ಲ."

"ನಾನು ನಿನ್ನ ಮನೆಗೆ ಅತಿಥಿಯೆಂದು ಒಂದಿರುವನೆಂಬದನ್ನು ನೀನು ಅರಿತವನಾಗಿರುವೆ."

"ಅಹುದು; ನನಗೆ ಆ ಸಂಗತಿಯು ತಿಳಿದಿರುವದು. ನಾನಾದರೂ ಗೃಹಸ್ಥ ಧರ್ಮಾನುಸಾರವಾಗಿ ನನ್ನ ಯೋಗ್ಯತೆಯಂತೆ ನಿನ್ನ ಸತ್ಕಾರ ಮಾಡುವೆನು."

"ಚಿಕ್ಕಂದಿನಲ್ಲಿ ನಾವಿಬ್ಬರೂ ಒಂದೇ ಸ್ಥಳದಲ್ಲಿ ಹೇಗೆ ಊಟ ಮಾಡುತ್ತಿದ್ದೆವೋ ಅದರಂತೆ ಈಗ ನಿನ್ನ ಮನಸ್ಸಿನ ಸಿದ್ಧತೆಯಿರುವದೆ?"

"ಕಾಲಾಚಾಂದ, ಆ ಮಾತು ಈಗ ಹೇಗೆ ಸಾಧ್ಯವಾಗಬೇಕು?"

"ಗದಾಧರ, ಸನ್ಮಿತ್ರನೆನಿಸಿಕೊಳ್ಳುತ್ತಿರುವ ನೀನು ಸಹ ನನ್ನನ್ನು ಉಪೇಕ್ಷಿಸಿದೆಯಾ?"

"ನಾನು ನಿನ್ನನ್ನು ತಿರಸ್ಕರಿಸುತ್ತಿರುವದಿಲ್ಲ. ನೀನು ಆ ಯುವನಿಯನ್ನು ತ್ಯಜಿ:...."

"ಇಲ್ಲ; ಸರ್ವಥಾ ತ್ಯಜಿಸುವದಿಲ್ಲ."

"ಪ್ರಾಯಶ್ಚಿತ್ತ:...."

"ನನ್ನಿಂದ ಅಂತಹ ಅಪರಾಧವೇನು ಘಟಿಸಿರುವದು? ಪಾಪವಿಲ್ಲದೆ ಪ್ರಾಯಶ್ಚಿತ್ತ ತೆಗೆದುಕೊಳ್ಳಬೇಕೆ?"

"ಸಮಾಜಕ್ಕೆ ಹೊರತಾದ ನಿನ್ನೊಡನೆ ನಾನು ಹೇಗೆ ಊಟ ಮಾಡಲಿ?"

"ಬಹಳೇ ಚಲೋದಾಯಿತು."

"ಕಾಲಾಚಾಂದ, ಹಿಂದಕ್ಕೆ ಯತಿವರ್ಯರು ಹೇಳಿದ ಭವಿಷ್ಯವು ನಮಗೆ ವಿಚಿತ್ರವಾಗಿ ಕಾಣತೊಡಗಿತ್ತು. ಅವರ ಮಾತುಗಳು ಸತ್ಯವೆಂಬ

ದರ ಪ್ರತ್ಯಂತರವು ಚೆನ್ನಾಗಿ ಬಂತು. ವಿಷಯ ವಾಸನೆಗೆ ಸಿಲುಕಿ ಪರಮ ಪವಿತ್ರವಾದ ಸನಾತನ ಧರ್ಮವನ್ನು ಬಿಸುಟುವಂತಹ ನಿನ್ನ ಆಚರಣೆಯು ತಿರಸ್ಕರಣೀಯವಲ್ಲವೆ? ನಿನಗೆ ವಿಷ ಹಾಕಿ ಕೊಲ್ಲಬೇಕೆಂದು ಯತಿವರ್ಯರು ಮಾಡಿದ ಸೂಚನೆಯು ಯಥಾಯೋಗ್ಯವಿರುವದು.''

''ಗದಾಧರ! ನಾನು ಪವಿತ್ರವಾದ ಸನಾತನ ಧರ್ಮವನ್ನು ತ್ಯಜಿಸಿಲ್ಲ. ಶಹಜಾದಿಯನ್ನು ಹಿಂದು ಧರ್ಮದಲ್ಲಿ ತೆಗೆದುಕೊಂಡು ವಿವಾಹವಾಗಿರುವೆನು. ಜಾತಿ-ಧರ್ಮಗಳನ್ನು ಮೀರಿದಂತಹ ವಿಶಿಷ್ಟ ಕಾರಣಗಳ ಸಲುವಾಗಿ ನಾನು ರಾಜಪುತ್ರಿಯನ್ನು ವರಿಸಿರುವೆನು. ಇದೆಲ್ಲವನ್ನು ನಿನ್ನ ಮುಂದೆ ಹೇಳುವದರಿಂದ ಪ್ರಯೋಜನವೇನು? ಒಳ್ಳೇದು. ಇನ್ನು ಮೇಲೆ ನನ್ನ-ನಿನ್ನ ಭೆಟ್ಟಿಯು ಇಂತಹ ಸೌಮ್ಯ ಸ್ಥಿತಿಯಲ್ಲಾಗಲಾರದೆಂದು ದಿಟವಾಗಿ ನಂಬು!'' ಎಂದು ಕಾಲಾಚಾಂದನು ನುಡಿದು, ಅಲ್ಲಿಂದ ತೆರಳಿದನು.

ಪ್ರತಿಯೊಂದು ಸ್ಥಳಗಳಲ್ಲಿ ಅಪಮಾನವೂ ತಿರಸ್ಕಾರವೂ ಆಗತೊಡಗಿದ್ದರಿಂದ ಕಾಲಾಚಾಂದನ ಹೃದಯಕ್ಕೆ ಬಲವಾದ ಗಾಯವಾಯಿತು. ಸಮಾಜವು ತನ್ನ ಛಲನೆ ಮಾಡತೊಡಗಿದ್ದರಿಂದ ಅದರ ಸೇಡನ್ನು ತೀರಿಸಿಕೊಳ್ಳಬೇಕೆಂಬ ವಿಚಾರವು ಅವನ ಮನಸ್ಸಿನಲ್ಲಿ ಉತ್ಪನ್ನವಾಯಿತು. ''ಸೇಡು! ಸೇಡು! ಭಯಂಕರ ಸೇಡು!!'' ಎಂಬ ಭೀಷಣ ಧ್ವನಿಯು ಅವನ ಹೃದಯಾಕಾಶದಲ್ಲಿ ಪ್ರತಿಧ್ವನಿಗೊಳ್ಳತೊಡಗಿತ್ತು. ಮಹಾತೇಜಸ್ವಿಯಾದ ಅವನ ಹೃದಯದಲ್ಲಿ ಸಂತಾಪಾಗ್ನಿಯು ಧಗಧಗಿಸತೊಡಗಿತು. ಭೀಷಣವಾದ ಕಟುಕರ್ತವ್ಯವನ್ನು ಸ್ವೀಕರಿಸಬೇಕೆಂದು ಅವನ ಜಾಗೃತ-ತಾಮಸ ಹೃದಯವು ಹೇಳುತ್ತಿದ್ದರೂ, ಅವನ ಪ್ರಬಲವಾದ ಸಾತ್ವಿಕ ಬುದ್ಧಿಯು ಅದರ ಆಟವನ್ನು ನಡೆಯಗೊಟ್ಟಿದ್ದಿಲ್ಲ. ಅವನ ಹೃದಯದಲ್ಲಿ ಸತ್ಯಾಸತ್ಯಗಳ, ತಾಮಸ-ಸಾತ್ವಿಕ ಗುಣಗಳ ನಿಕರವಾದ ಕಾಳಗವು ಬಹಳ ವೇಳೆಯ ವರೆಗೆ ನಡೆಯಿತು. ಕಡೆಗೆ ಎಲ್ಲ ಮಾತಿನ ಸಾರಾಸಾರಾ ವಿಚಾರ ಮಾಡಿ ತಾನು ಸಂಕಲ್ಪಮಾಡಿಕೊಂಡಿದ್ದ ಕೊನೆಯ ಉಪಾಯ ಮಾಡಬೇಕೆಂದು ನಿರ್ಧರಿಸಿ, ಪುಣ್ಯಮಯವಾದ ಶ್ರೀ ಕ್ಷೇತ್ರ ಜಗನ್ನಾಥಪುರಿಗೆ ಹೊರಟನು!

## ನೋಡು! ನೋಡು!!

ಆಧ್ಯಾತ್ಮಿಕ ಜ್ಞಾನದಲ್ಲಿ ಭರತಖಂಡವು ಜಗತ್ತಿನೊಳಗಿನ ಎಲ್ಲ ದೇಶಗಳಿಗಿಂತ ವರಿಷ್ಠವೆನಿಸುವದು. ಸದ್ಯದ ಸ್ಥಿತಿಯಲ್ಲಿ ಅಧ್ಯಾತ್ಮಿಕಜ್ಞಾನದ ವಿಷಯಕ್ಕೆ ಈ ದೇಶವು ಅವನತಿ ಹೊಂದಿದ್ದರೂ, ಉಳಿದ ದೇಶಗಳಿಗಿಂತ ಶ್ರೇಷ್ಠವಿರುವದೆಂಬ ಮಾತಿಗೆ ಯಾರಾದರೂ ಒಪ್ಪಬಹುದಾಗಿದೆ. ಓಂಕಾರ, ಪರಬ್ರಹ್ಮ, ಮಾಯಾ ಮೊದಲಾದ ವೇದಾಂತ ವಿಷಯಗಳ ಚರ್ಚೆಯನ್ನು ಈಗ ಬಹು ಜನರು ಮಾಡುತ್ತಿರುವದಿಲ್ಲ. ನಿರ್ಗುಣೋಪಾಸನೆಯಿಂದ ಸಗುಣೋಪಾಸನೆಯು ಪ್ರಾರಂಭವಾಗಿ ಪೌರಾಣಿಕಕಾಲವು ನಿರ್ಮಾಣವಾಯಿತು. ಆಗ ಅನೇಕ ದೇವತೆಗಳು ಉತ್ಪನ್ನವಾದರು. ಅಲ್ಲಲ್ಲಿ ದೇವಮಂದಿರಗಳು ದೃಷ್ಟಿಗೋಚರವಾಗತೊಡಗಿದವು. ದೇವಾಲಯಗಳನ್ನು ಕಟ್ಟಿಸುವಂತಹ ಪುಣ್ಯವು ಬೇರೆ ಯಾತರಲ್ಲಿಯೂ ಇಲ್ಲವೆಂದು ಜನರ ಭಾವನೆಯಾಯಿತು. ದೇವಸ್ಥಾನಗಳಿಲ್ಲದ ಊರುಗಳು ದೃಷ್ಟಿಗೋಚರವಾಗದಂತಾದವು. ಅವುಗಳಲ್ಲಿ ಕೆಲವು ದೇವಸ್ಥಾನಗಳು ಮಹಾಯಾತ್ರೆಯ ಸ್ಥಳಗಳೆಂದು ನಿರ್ಣಯಿಸಲ್ಪಟ್ಟವು. ಮುಸಲ್ಮಾನರ ಆಳಿಕೆಯಲ್ಲಿ ಅನೇಕ ದೇವಸ್ಥಾನಗಳು ವಿಧ್ವಂಸವಾಗಿ ಹೋದವು. ದೇವಸ್ಥಾನಗಳ ಸಂಖ್ಯೆಯು ಮಿತಿಮೀರಿ ಬೆಳೆದದ್ದರಿಂದ ಅವುಗಳ ವ್ಯವಸ್ಥೆಯಾಗದಂತಾಯಿತು. ಹೀಗಾಗಿ ಸಾವಿರ ವರ್ಷಗಟ್ಟಲೆ ವರ್ಷ ಬಿಸಿಲು-ಮಳೆಗಳನ್ನು ತಿನ್ನುತ್ತ ದೇವಕಳೆಯನ್ನು ಕಳಕೊಂಡ ಮೂರ್ತಿಗಳಾದರೂ ಈ ಭರತಭೂಮಿಯಲ್ಲಿ ಅಪರಿಮಿತವಾಗಿ ದೊರೆಯುವವು. ಅತಿ ಪ್ರಾಚೀನ ಕಾಲದಲ್ಲಿ ಕಟ್ಟಿದ ದೇವಸ್ಥಾನಗಳು ಹಿಂದುಸ್ಥಾನದಲ್ಲಿ ಅನೇಕವಿರುವವು; ಅವುಗಳಲ್ಲಿ ಕೆಲವು ದೇವಸ್ಥಾನಗಳು ಮಹಾಯಾತ್ರೆಯಲ್ಲಿ ಗಣಿಸಲ್ಪಡುತ್ತವೆ.

ಉತ್ಕಲ ದೇಶದಲ್ಲಿ ಜಗನ್ನಾಥಪುರಿಯು ಮಹಾಯಾತ್ರೆಯ ಸ್ಥಳವು. ಕಾಶಿ, ರಾಮೇಶ್ವರ, ಬದರಿ, ಕೇದಾರ ಮೊದಲಾದ ಸ್ಥಳಗಳಂತೆ ಜಗನ್ನಾಥಪುರಿಯಾದರೂ ಬಹಳ ಮಹತ್ವದ ಯಾತ್ರಾ ಸ್ಥಳವಾಗಿರುವದು. ಎಷ್ಟೋ ಯಾತ್ರಾ ಸ್ಥಳಗಳ ಮಹಾತ್ಮ್ಯಗಳಂತೆ 'ಪುರೀಮಹಾತ್ಮ್ಯ'ಯು ಪ್ರಸಿದ್ಧವಿರುವದು.

ಬಂಗಾಲದ ಸುಲತಾನನಾದ ಸಲಿಮನನ ಜಾಮಾತ ಕಾಲಾಚಾಂದನು ಜಗನ್ನಾಥಪುರಿಯ ದಾರಿಯನ್ನು ಹಿಡಿದು ನಡೆದಿದ್ದನು. ಅವನು ಮಂಗಲ ಮಯ ಪರಮಾತ್ಮನ ದಿವ್ಯ ನಾಮವನ್ನು ಸ್ಮರಿಸುತ್ತ ಮಾರ್ಗಕ್ರಮಣ ಮಾಡತೊಡಗಿದ್ದನು. ಅವನು ದೊಡ್ಡ ಶ್ರೀಮಂತನೂ ಅಧಿಕಾರಸ್ಥನೂ ರಾಜಜಾಮಾತನೂ ಆಗಿದ್ದಗೂ, ತನ್ನ ದೊಡ್ಡಿಸ್ತಿಕೆಯ ಆಡಂಬರವನ್ನು ಬಿಟ್ಟಿದ್ದನು. ಅವನು ಒಂದು ಕೈಯಲ್ಲಿ ಜೋಳಿಗೆ ಹಾಕಿದ್ದನು; ಮತ್ತೊಂದು ಕೈಯಲ್ಲಿ ದಂಡವನ್ನು ಹಿಡಿದಿದ್ದನು. ಪುಣ್ಯಕರ ಯಾತ್ರೆಗಳಿಗೆ ಬರಿಗಾಲಿನಿಂದ ಹೋಗುವದರಿಂದ ಹೆಚ್ಚಿನ ಪುಣ್ಯವು ಲಭಿಸುವದೆಂಬ ತಿಳುವಳಿಕೆಯ ಮೇರೆಗೆ ಅವನು ಕಾಲಲ್ಲಿ ಪಾದತ್ರಾಣಗಳನ್ನು ಸಹ ಹಾಕಿರಲಿಲ್ಲ. ಅವನು ಒಂದೇಸವನೆ 'ಜಯ ಜಗನ್ನಾಥ-ಜಯ ಜಗನ್ನಾಥ' ಎಂದು ಭಗವನ್ನಾಮಘೋಷಣೆ ಮಾಡತೊಡಗಿದ್ದನು. ಸಮಾಜವು ಧರ್ಮಚ್ಯುತನನ್ನಾಗಿ ಮಾಡಿದ್ದರಿಂದ ಅವನ ಶಾಂತಿಯು ನಷ್ಟವಾಗಿತ್ತು. ಚಿಂತಾಕ್ರಾಂತನಾದ ಅವನ ಮುಖಚರ್ಯೆಯು ಅತ್ಯಂತ ಮ್ಲಾನವಾಗಿತ್ತು. ಪುರಿಗೆ ಹೋಗಿ ಜಗನ್ನಾಥನ ದರ್ಶನ ಹೊಂದಿ ದೇಹವನ್ನು ಪಾವನಗೊಳಿಸಬೇಕೆಂದೂ, ಅಲ್ಲಿಯ ಪಂಡಿತರ ಮುಖಾಂತರವಾಗಿ ತಾನು ನಿರ್ದೋಷಿಯೆಂಬದನ್ನು ಪ್ರಸಿದ್ಧಗೊಳಿಸಬೇಕೆಂದೂ ಅವನು ಆತುರಗೊಂಡಿದ್ದನು. ಅನೇಕ ವಿಧದ ಒಳಿತು-ಹೀನ ವಿಚಾರಗಳಿಂದ ಅವನ ಮನಸ್ಸು ಕ್ಲೇಶಗೊಳ್ಳತೊಡಗಿತ್ತು. ದುಃಖಿತ ಮನಸ್ಕನಾದ ಅವನು ಪುರಿಯ ಕಡೆಗೆ ನೋಡಿದನು; ಆಗ ಜಗನ್ನಾಥೇಶ್ವರನ ದೇವಸ್ಥಾನದ ಶಿಖರವು ಅವನ ಕಣ್ಣಿಗೆ ಬಿತ್ತು. ಕೂಡಲೆ ಅವನು ಭಕ್ತಿ-ಭಾವಗಳಿಂದ ಶಿಖರಕ್ಕೆ ನಮಸ್ಕಾರ ಮಾಡಿದನು. ಅವನು ದೇವಸ್ಥಾನದ ಕಡೆಗೆ ಕೈ ಮುಗಿದುಕೊಂಡು ನಿಂತು, ಭಕ್ತಿಯಿಂದ:—"ದಯಾಮಯ ಪ್ರಭೋ! ನಾನು ಒಬ್ಬ ಯುವತಿಯನ್ನು ಸ್ವಧರ್ಮದಲ್ಲಿ ತೆಗೆದುಕೊಂಡು ವಿವಾಹ ವಾದದ್ದರಿಂದ ದೋಷಿಯಾದೆನೆ ಹೇಗೆ? ನಾನು ಪರಮ ಪವಿತ್ರವಾದ ಹಿಂದು ಧರ್ಮವನ್ನು ತ್ಯಜಿಸದಿದ್ದರೂ, ದುಷ್ಟ ಸಮಾಜವು ನನ್ನ ಛಲನೆ ಮಾಡುತ್ತಿರುವದು. ನಾನು ಪ್ರಾಣಭಯದಿಂದಾಗಲಿ, ಐಶ್ವರ್ಯ

ಲೋಭದಿಂದಾಗಲಿ, ಅಧಿಕಾರ ಲಾಲಸೆಯಿಂದಾಗಲಿ, ರೂಪಾಂಧನಾಗಿಯಾಗಲಿ ಆ ಯುವನಿಯನ್ನು ವರಿಸಿಲ್ಲವೆಂಬ ಮಾತು ಸರ್ವಜ್ಞನೂ ಸರ್ವವ್ಯಾಪಿಯೂ ಸರ್ವತಂತ್ರ ಸ್ವತಂತ್ರನೂ ಆದ ನಿನಗೆ ಅರಿಯದಿಲ್ಲ. ಜಗನ್ನಾಥಾ, ಜಾತಿ-ಧರ್ಮಗಳನ್ನೂ, ಗೋತ್ರ-ಸೂತ್ರಗಳನ್ನೂ ಮೀರಿದ ಒಂದು ಪ್ರಸಂಗದಿಂದ ನಾನು ನಿರುಪಾಯನಾದೆನು. ಆತ್ಮಸಮರ್ಪಣೆ ಮಾಡಿದ ಅಬಲೆಯ ಪಾಣಿಗ್ರಹಣ ಮಾಡದಿದ್ದರೆ, ಅವಳು ನಿಜವಾಗಿಯೂ ಆತ್ಮತ್ಯಾಗ ಮಾಡುತ್ತಿದ್ದಳು. ನನ್ನಿಂದ ಸ್ತ್ರೀಹತ್ಯಾಪಾತಕವು ಘಟಿಸಬಾರದೆಂಬ ಉದ್ದೇಶದಿಂದಲೆ ಮಿಶ್ರವಿವಾಹಕ್ಕೆ ಸಿದ್ಧನಾದೆನು. ಇದರಲ್ಲಿ ನನ್ನ ಅಪರಾಧವೇನು? ಯುವನಿಗೆ ಹಿಂದುಧರ್ಮದೀಕ್ಷೆ ಕೊಟ್ಟು ಅವಳನ್ನು ವರಿಸಿದರೆ ಮಹತ್ಪಾಪವಾಯಿತೆ? ದೇವಾ! ನಿನ್ನ ನೀತಿ ಸಾಮ್ರಾಜ್ಯದಲ್ಲಿ ಈ ಬಗೆಯ ಅಂಧ ಕಾರ್ಯಗಳು ನಡೆಯಬೇಕೆ? ಸಮಾಜವು ನನ್ನನ್ನು ಧರ್ಮದಿಂದ ಆಚೆಗೆ ಒಗೆದರೆ ಗತಿಯೇನು? ಜಗನ್ನಾಥಾ! ನಿನ್ನ ದರ್ಶನಕ್ಕೆ ಸಹ ಎರವಾಗಿ, ನಾನು ಹೇಗೆ ಆತ್ಮಶಾಂತಿಯನ್ನು ಹೊಂದಲಿ? ದೇವಾಧಿದೇವಾ! ನಿನ್ನ ದಿವ್ಯ ರೂಪಸಂದರ್ಶನವಾಗದಿದ್ದರೆ ತಾರಣ ಮಾರ್ಗವು ದೊರೆಯುವದೆ? ಅಯ್ಯೋ! ನಾನು ಪತಿತನಾಗಿರುವೆನೆ? ಪತಿತಪಾವನನಾದ ನಿನ್ನ ಪಾವನ ನಾಮಸ್ಮರಣೆ ಮಾಡುವವನಾದ ನಾನು, ಸನಾತನ ಧರ್ಮಚ್ಯುತನಾಗುವೆನೆ? ದೇವಾ—''

ಕಾಲಾಚಾಂದನ ಮುಖದಿಂದ ಮುಂದೆ ಮಾತುಗಳೇ ಹೊರಡದಾದವು. ಅವನ ಕಂಠವು ಸದ್ಗದಿತವಾಗಿತ್ತು. ನೇತ್ರಗಳಿಂದ ದುಃಖಾಶ್ರುಗಳು ತೆರಪಿಲ್ಲದೆ ಹರಿಯತೊಡಗಿದ್ದವು. ಹಿಂದು ಸಮಾಜದವರು ತಮ್ಮ ಧರ್ಮದಿಂದ ದಬ್ಬಿದ್ದರೂ, ಬಗೆ ಬಗೆಯಿಂದ ಅಪಮಾನಗೊಳಿಸಿದ್ದರೂ, ಅನೇಕ ವಿಧಗಳಿಂದ ವಿಟಂಬನೆ ಮಾಡಿದ್ದರೂ, ಎಲ್ಲವನ್ನೂ ಮರೆತು, ಸ್ವಧರ್ಮದ-ಪವಿತ್ರವಾದ ಸನಾತನ ಧರ್ಮದ-ಕಡೆಗೆ ಧಾವಿಸಿದ್ದ ಧರ್ಮದ ಕಟ್ಟಾಭಿಮಾನಿಯಾದ ಕಾಲಾಚಾಂದನ ಸ್ಥಿತಿಯನ್ನು ನೋಡಿದರೆ ಕಲ್ಲು ಸಹ ಕರಗುವಂತಿತ್ತು. ನವಾಬನ ಜಾಮಾತನು ದೊಡ್ಡ ಅಧಿಕಾರಸ್ಥನು-ಘನ ಶ್ರೀಮಂತನು-ಧರ್ಮದ ಮೂರ್ತಿವಂತ ಕಣಿಯು-ನಿಗ್ರಹಾನುಗ್ರಹ

ಶಕ್ತಿಯುತನು ತನ್ನ ಹೃದಯವನ್ನು ಜಗತ್ತಿಗೆ ತೋರಿಸುತ್ತಿದ್ದರೂ ಅಂಧ ಸಮಾಜವು ಹೆಜ್ಜೆ ಹೆಜ್ಜೆಗೆ ಅಪಮಾನ ಮಾಡತೊಡಗಿದುದು ಕಾಲಾಚಾಂದನ ಮನಸ್ಸಿಗೆ ಅಸಹ್ಯವಾದ ವೇದನೆಯನ್ನುಂಟುಮಾಡಿತ್ತು. ಅವನು ಸುವಿಚಾರಿಯೂ ದಯಾದ್ರ್ರ ಹೃದಯದವನೂ ಇದ್ದುದರಿಂದ ಉಕ್ಕುತ್ತಿರುವ ತನ್ನ ಸಂತಾಪವನ್ನು ಹುದುಗಿಕೊಂಡು, ಮನಸ್ಸಿನ ಮೇಲೆ ವಿವೇಕ ಸಾಮ್ರಾಜ್ಯವನ್ನು ಪ್ರಸ್ಥಾಪಿಸತೊಡಗಿದ್ದನು. ಕೊನೆಯ ಉಪಾಯವೆಂದೇ ಅವನು ಈಗ ಶ್ರೀ ಕ್ಷೇತ್ರ ಜಗನ್ನಾಥಪುರಿಗೆ ಹೊರಟಿದ್ದನು. ಅಲ್ಲಿ ತನ್ನ ಮನಸ್ಸಿನಂತೆ ಕಾರ್ಯವಾಗುವದೆಂದು ಅವನು ಮನೋರಾಜ್ಯವನ್ನು ಕಲ್ಪಿಸಿಕೊಂಡಿದ್ದನು. ಪ್ರವಾಹಪತಿತನಂತೆ ಅವಸ್ಥೆಯನ್ನು ಹೊಂದಿದ ಅವನು, ವಿಚಾರ ಶರಧಿಯಲ್ಲಿ ತೇಲುತ್ತ-ಮುಳುಗುತ್ತ ನಡೆದಿದ್ದನು. ಆಗ ಅವನಿಗೆ ಒಬ್ಬ ಸಂತನು ಭೆಟ್ಟಿಯಾದನು. ಕೂಡಲೆ ಅವನು ಆ ಸಂತನಿಗೆ ನಮಸ್ಕಾರ ಮಾಡಿ:—''ಮಹಾಶಯರೆ, ತಾವು ಯಾರು?''

''ನಾನೊಬ್ಬ ಸಾಮಾನ್ಯ ಮನುಷ್ಯನು.'' ಎಂದು ಆ ಸಂತನು ನಿರಭಿಮಾನದಿಂದ ನುಡಿದನು.''

''ಮಹಾತ್ಮರೆ, ತಾವು ಸಾಮಾನ್ಯ ಮನುಷ್ಯರೆಂಬಂತೆ ಕಾಣುವದಿಲ್ಲ.''

''ಅದೇಕೆ. ನನ್ನ ಬಳಿಯಲ್ಲಿ ಹೆಚ್ಚಿಗೆ ಏನನ್ನು ಕಂಡೆ?''

''ನಿಮ್ಮಲ್ಲಿ ಪೂರ್ಣ ಶಾಂತಿಯ ಭಾಂಡಾರವಿರುವದು.''

''ಅದು ನಿನ್ನಲ್ಲಿಲ್ಲವೆ?''

''ನಾನು ಮನಶ್ಶಾಂತಿಯನ್ನು ಕಳೆದುಕೊಂಡಿರುವದರಿಂದಲೆ ಜಗನ್ನಾಥನ ಬಳಿಯಲ್ಲಿ ಅದನ್ನು ದೊರಕಿಸುವದಕ್ಕಾಗಿ ಹೊರಟಿರುವೆನು.''

''ಹಾಗಿದ್ದರೆ ನೀನು ತಿರುಗಿ ಹೋಗು.''

''ಅದೇಕೆ?''

''ಜಗನ್ನಾಥನು ನಿನಗೆ ಅದನ್ನು ಕೊಡಲೊಪ್ಪುತ್ತಿದ್ದರೂ, ಸಮಾಜವು ಕೊಡಲಾರದು.''

"ಪರಮಾತ್ಮನಿಗಿಂತ ಸಮಾಜದ ಶ್ರೇಷ್ಠತೆಯೇನು?"

"ಬೇಗನೆ ಎಲ್ಲ ಸಂಗತಿಗಳು ನಿನ್ನ ಅನುಭವಕ್ಕೆ ಬರಬಹುದಾಗಿವೆ."

"ಮಹಾಶಯರೆ, ನನ್ನ ದುಃಖವಿಮೋಚನೆಯು ಯಾರಿಂದ ಆಗುವದು?"

"ಯಾರಿಂದಲೂ ಆಗಲಾರದು. ಪುರಿಗೆ ಹೋಗಿ ಅಪಮಾನ ಹೊಂದುವದಕ್ಕಿಂತ ತಿರುಗಿ ಹೋಗುವದೇ ಮೇಲು. ನಿನಗೆ ಶಾಂತಿಯು ಎಂದೂ ದೊರೆಯಲಾರದು. ಸಮಾಜದಲ್ಲಿ ಕೂಡಬೇಕೆಂದು ನೀನು ಮಹತ್ವಾಕಾಂಕ್ಷೆ ತಳೆದರೆ, ನಿನ್ನ ಇಡೀ ಆಯುಃಶ್ಯವು ಇದೇ ಮೇರೆಗೆ ದುಃಖಮಯವಾಗಿ ಹೋಗುವದು."

"ನಾನು ಸಮಾಜದಲ್ಲಿ ಸೇರುವದರಿಂದ ಧರ್ಮನಾಶವಾಗುವದೆ?"

"ಅದನ್ನು ನಾನು ಹೇಳಲಾರೆನು. ನನ್ನ ಗುರುಮಹಾರಾಜರ ಸಂದೇಶವನ್ನಷ್ಟು ನಿನಗೆ ತಿಳಿಸಿರುವೆನು. ನೀನು ಪುರಿಗೆ ಹೋಗದೆ, ಪುರಕ್ಕೆ ಹೋಗುವದೇ ಲೇಸು!"

"ನಿಮ್ಮ ಗುರುಮಹಾರಾಜರು ಎಲ್ಲಿರುವರು? ಅವರು ನನಗೆ ಭೆಟ್ಟಿಯಾಗಲಿಕ್ಕಿಲ್ಲವೆ?"

"ಅವರು ನಿನಗೆ ಭೆಟ್ಟಿಯಾಗುವದಿಲ್ಲ. ಇಲ್ಲಿಂದ ದೂರ ಅಂತರದ ಮೇಲೆ ಅವರು ವಾಸಮಾಡಿಕೊಂಡಿರುವರು. ಹಿಂದೆಯೊಮ್ಮೆ ನಿನಗೆ ಭೆಟ್ಟಿಯಾಗಿ ಅವರು ನಿನ್ನ ಭವಿಷ್ಯವನ್ನು ಹೇಳಿದ್ದರು. ಅವರು ಇನ್ನೊಮ್ಮೆ ನಿನ್ನನ್ನು ಕಾಣಬಹುದು. ಅವರ ಆಜ್ಞೆಯ ಮೇರೆಗೆ ನೀನು ತಿರುಗಿ ಹೋಗುವೆಯೋ ಇಲ್ಲವೊ?"

"ಇಲ್ಲ; ಎಂದೂ ತಿರುಗುವದಿಲ್ಲ."

"ಇದರ ಮೇಲೆ ನಿನ್ನ ಮನಸ್ಸು! ನಿಯತಿಯು ಯಾವಾಗಲೂ ಅಲಂಘನೀಯವಿರುವದು."

ಸಂತನು ಹೀಗೆ ನುಡಿದು ಅಲ್ಲಿಂದ ಹೊರಟು ಹೋದನು. ತರುವಾಯ ಕಾಲಾಚಾಂದನು ಪುರಿಯ ಕಡೆಗೆ ಧ್ರುತಪದದಿಂದ ಸಾಗಿದನು. ಪುರಿಯನ್ನು ಪ್ರವೇಶಿಸಿದ ಕೂಡಲೆ ಅನೇಕ ವಿಧದ ಅಪಶಕುನಗಳು ಅವನ

ದೃಷ್ಟಿಗೋಚರವಾದವು. ನಿರಭ್ರವಾದ ಆಕಾಶವು ಮೇಘಾಚ್ಛಾದಿತವಾಗಿ ಸೂರ್ಯಪ್ರಕಾಶವು ಇಲ್ಲದಂತಾಯಿತು. ಪ್ರಚಂಡವಾದ ಬಿರುಗಾಳಿಯು ಬೀಸತೊಡಗಿ, ಜನರನ್ನು ಹೌಹಾರಿಸಿತು. ಕಾಲಾಚಾಂದನು 'ಜಯ ಜಗನ್ನಾಥ!' ಎಂದು ಜಯಘೋಷ ಮಾಡಿ ಮಹಾದ್ವಾರವನ್ನು ಪ್ರವೇಶಿಸಿದೊಡನೆಯೆ ದೇವಾಲಯದ ಮೇಲಿನ ಒಂದು ದೊಡ್ಡ ಕಲ್ಲು ಭೂಮಿಗೆ ಬಿತ್ತು. ಈ ಎಲ್ಲ ಸಂಗತಿಗಳು ಭಾವಿಕನಾದ ಕಾಲಾಚಾಂದನ ಹೃದಯಕ್ಕೆ ಬರೆಕೊಟ್ಟಂತೆ ಭಾಸವಾದವು. ಇಷ್ಟೆಲ್ಲ ಉತ್ಪಾತಗಳು ನಡೆದ ಕಾರಣವೇನೆಂದು ದೇವಸ್ಥಾನದ ಮಹಂತನು ಬಹಳ ವೇಳೆಯವರೆಗೆ ವಿಚಾರಿಸಿದನು. ಆಗ ಅವನು ತನ್ನ ಪರಿಚಾರಕರನ್ನು ಕುರಿತು:--"ಯತಿಮಹಾರಾಜರು ತಿಳಿಸಿದಂತೆ ಆ ಜಾತಿಭ್ರಷ್ಟ ಮನುಷ್ಯನು ಬಂದಿರುವನೋ-ಹೇಗೋ ನೋಡಿರಿ." ಹೀಗೆ ಹೇಳಿದ ಕೂಡಲೆ ಪರಿಚಾರಕರು ಹೊರಗೆ ಬಂದು ಕಾಲಾಚಾಂದನನ್ನು ನೋಡಿ, ಯಾವನೋ ಒಬ್ಬ ಮನುಷ್ಯನು ದೇವಸ್ಥಾನದಲ್ಲಿ ಪ್ರವೇಶಿಸಿದ ಸಂಗತಿಯನ್ನು ಅವನಿಗೆ ತಿಳಿಸಿದರು. ಕೂಡಲೆ ಮಹಂತನು ಅಲ್ಲಿಗೆ ಒಂದು ಸಂತಾಪದಿಂದ:—"ಕುಲಾಂಗಾರಾ! ನಡೆ ಇಲ್ಲಿಂದ! ಯವನಿಯನ್ನು ವಿವಾಹವಾಗಿ, ದೇವಾಲಯಗಳನ್ನು ಭ್ರಷ್ಟಾಕಾರ ಮಾಡುವದೇ ನಿನ್ನ ಕರ್ತವ್ಯದ ಗುರಿಯೆಂಬಂತೆ ಕಾಣುತ್ತದೆ! ನೀನು ಇಂದು ಇಲ್ಲಿಗೆ ಬರುವೆಯೆಂಬದನ್ನು ನಮ್ಮ ಯತಿಮಹಾರಾಜರು ಮುಂಚಿತವಾಗಿಯೆ ತಿಳಿಸಿರುವರು. ನಿನ್ನ ವೇಷಕ್ಕೂ ಆಡಂಬರಕ್ಕೂ ಇಲ್ಲಿ ಯಾರೂ ಮರುಳಾಗಲಾರರೆಂದು ತಿಳಿದುಕೊ! ಕಾಲಾಚಾಂದ, ಶ್ರೀ ದೇವರ ಮಂದಿರ ಪ್ರವೇಶ ಮಾಡಲಿಕ್ಕೆ ಧರ್ಮಭ್ರಷ್ಟನಾದ ನಿನಗೆ ಲಜ್ಜಾ-ಭಯಗಳು ಹೇಗೆ ಆವರಿಸಲಿಲ್ಲ?"

"ಮಹಂತರೆ!" ಕಾಲಾಚಾಂದನು ಸಮಾಧಾನದಿಂದಲೆ ಮಾತನಾಡತೊಡಗಿದನು: "ನಾನು ಧರ್ಮಭ್ರಷ್ಟನಿರುವದಿಲ್ಲ. ನನ್ನ ಧರ್ಮದ ಪವಿತ್ರತೆಯನ್ನು ಪ್ರಸ್ಥಾಪಿಸುವದಕ್ಕಾಗಿಯೆ ಇಲ್ಲಿಗೆ ಧಾವಿಸಿ ಬಂದಿರುವೆನು. ಸಾಮಾನ್ಯ ಜನರಂತೆ ನೀವೂ ಅವಿಚಾರಿಗಳಾಗಬಾರದೆಂದು ಪ್ರಾರ್ಥಿಸುವೆನು."

"ನಿನ್ನ ಎಲ್ಲ ಚರಿತ್ರವು ನಮಗೆ ಗೊತ್ತಿರುವದು" ಎಂದು ಮಹಂತನು ನುಡಿದು, ಸಂತಪ್ತ ವಾಣಿಯಿಂದ —"ಕಾಲಾಚಾಂದ, ನಿನ್ನ ಆಶೆಯು ಸಫಲವಾಗಲಾರದು. ಯವನಿಯ ಪಾಣಿಗ್ರಹಣದಿಂದ ನೀನು ಧರ್ಮ ಚ್ಯುತನಾಗಿರುವೆ. ನಿನ್ನನ್ನು ಸ್ವಧರ್ಮದಲ್ಲಿ ತೆಗೆದುಕೊಳ್ಳಲಿಕ್ಕೆ ಯಾವ ಹಿಂದುಮನುಷ್ಯನೂ ಸಿದ್ಧನಾಗಲಾರನು. ನೀನು ಕರ್ಮಫಲವನ್ನು ಭೋಗಿಸಲಿಕ್ಕೇ ಬೇಕಾಗಿರುವದು. ಕ್ಷಣ ಸಹ ವಿಲಂಬ ಮಾಡದೆ, ಇಲ್ಲಿಂದ ಹೊರಟು ಹೋಗು. ಮ್ಲೇಂಛನಾದ ನಿನಗೆ ಜಗನ್ನಾಥನ ದರ್ಶನವಾಗಲಾರದು."

"ಮಹಂತರೆ, ನೀವೂ ಸಾಮಾನ್ಯ ಜನರಂತೆ ಮಾತನಾಡತೊಡಗಿದಿರಾ? ಸದಸದ್ವಿವೇಕ ಬುದ್ಧಿಯಿಂದ ನನ್ನನ್ನು ನಿರ್ದೋಷಿಯೆಂದು ನಿರ್ಣಯಿಸಿ, ಸ್ವಧರ್ಮದ ದ್ವಾರವನ್ನು ತೆರೆದು ಬಿಡುವಿರೆಂಬ ಆತ್ಮವಿಶ್ವಾಸದಿಂದಲೆ ಇಲ್ಲಿಗೆ ಬಂದೆನು. ಮಿಕ್ಕವರಂತೆ ನೀವೂ ವಿಚಾರಹೀನತೆಯನ್ನು ಹೊಂದಬಾರದೆಂದು ವಿಜ್ಞಾಪನೆ ಮಾಡಿಕೊಳ್ಳುವೆನು."

"ಇಲ್ಲಿಯ ಧರ್ಮಪಂಡಿತರು ನಿನ್ನನ್ನು ನಿರ್ದೋಷಿಯೆಂದು ತಿಳಿಯಲಾರರು. ನಿನ್ನ ಆಶೆಯು ನಿರರ್ಥಕವಾಗುವದೆಂದು ಸೆರಗಿಗೆ ಗಂಟು ಹೊಡೆದುಕೊ."

"ಮಹಂತ ಮಹಾರಾಜರೆ, ಮುಂದೆ ಏನಾಗುವದೋ ಆಗಲಿ; ಈಗ ಜಗನಾಥನ ದರ್ಶನವನ್ನಂತೂ ಒದಗಿಸಿ ಕೊಡಿರಿ."

"ನಿನಗೆ ದೇವಮಂದಿರದಲ್ಲಿ ಪ್ರವೇಶವು ದೊರೆಯದು."

ಮಹಂತನ ಸ್ಪಷ್ಟೋಕ್ತಿಗಳನ್ನು ಕೇಳಿ ಕಾಲಾಚಾಂದನ ಅಭಿಮಾನಿಯಾದ ಮನಸ್ಸು ಅತ್ಯಂತ ಜಾಗ್ರತವಾಯಿತು. ಜಗತ್ತೇ ಅಜ್ಞಾನಮಯವಾಗಿರುವದೆಂದು ಅವನು ತಿಳಿದುಕೊಂಡನು. ಆ ಅಪಮಾನವನ್ನು ಸಹನ ಮಾಡುವದು ಈಗ ಮಾತ್ರ ಅವನಿಗೆ ಅಸಾಧ್ಯವಾಯಿತು. ಆಗ ಅವನು ಕರ್ಕಶ ಧ್ವನಿಯಿಂದ—"ಮಹಂತರೆ, ನೀವು ಸದಸದ್ವಿವೇಕ ಬುದ್ಧಿಯವರೆಂದು ಇದುವರೆಗೆ ನನ್ನ ಭಾವನೆಯಿತ್ತು. ನಿಮ್ಮ ಇಂದಿನ ವರ್ತನವನ್ನು ನೋಡಿ ನನ್ನ ಆ ತಿಳುವಳಿಕೆಯು ಬೇರೆಯಾಯಿತು. ಇಲ್ಲಿ ನ್ಯಾಯ

ದೊರೆಯುವದೆಂಬ ತಿಳುವಳಿಕೆಯಿಂದಲೆ, ನಾನು ಇಷ್ಟು ದಿನಗಳ ವರೆಗೆ ಸಮಾಜದವರ ಅಪಮಾನ-ವಿಟಂಬನೆಗಳನ್ನು ಸಹನ ಮಾಡಿಕೊಂಡೆನು. ಮಹಂತರೆ, ಇನ್ನೊಮ್ಮೆ ಸ್ಪಷ್ಟವಾಗಿ ಹೇಳಿಬಿಡಿರಿ. ನಾನು ನಿರಪರಾಧಿಯಿರುವೆನು; ಸ್ವಧರ್ಮನಿಷ್ಠೆಯುಳ್ಳವನಿರುವೆನು; ಆಸ್ತಿಕಭಾವನೆಯುವನಿರುವೆನು. ನನ್ನನ್ನು ಸ್ವಧರ್ಮದಲ್ಲಿ ಪ್ರವೇಶ ಮಾಡಗೊಡುವಿರಾ? ಪಾವನಕರನಾದ ಜಗನ್ನಾಥನ ದರ್ಶನಕ್ಕೆ ಒಪ್ಪಿಗೆ ಕೊಡುವಿರಾ? ಇಲ್ಲಿಯ ಧರ್ಮಪಂಡಿತರ ಮುಖಾಂತರವಾಗಿ ನನ್ನ ಶುದ್ಧತೆಯನ್ನು ದೇಶದಲ್ಲಿ ಪ್ರಕಟಗೊಳಿಸುವಿರಾ? ನಾನು ನಿರಪರಾಧಿಯಿರುವೆನು; ಅದಂಡ್ಯನಿರುವೆನು; ಸಮಾಜದಲ್ಲಿ ಸೇರಲಿಕ್ಕೆ ಯೋಗ್ಯನಿರುವೆನು; ದೇವ-ಮಂದಿರಗಳಲ್ಲಿ ಪ್ರವೇಶ ಮಾಡಲಿಕ್ಕೆ ಅಧಿಕಾರಿಯಿರುವೆನು. ಸಾರಾಸಾರ ವಿಚಾರ ಮಾಡಿ ನನ್ನ ಮಾತುಗಳಿಗೆ ಉತ್ತರವೀಯಬೇಕೆಂದು ವಿಜ್ಞಾಪನೆಯುಂಟು.''

``ಕಾಲಾಚಾಂದ, ನೀನು ಇಲ್ಲಿಗೆ ಬರುವದಕ್ಕಿಂತ ಮುಂಚಿತವಾಗಿಯೆ ಪಂಡಿತರ ಸಭೆಗೂಡಿಸಿ ಎಲ್ಲ ಬಗೆಯ ವಿಚಾರಗಳ ನಿರ್ಣಯ ಮಾಡಲ್ಪಟ್ಟಿರುವದು. ಪತಿತನಾದ ನೀನು ಸಮಾಜದಲ್ಲಿ ಕೂಡಲಿಕ್ಕೆ ಅನರ್ಹನಿರುವೆ; ಅರ್ಥಾತ್ ದೇವಮಂದಿರವನ್ನು ಪ್ರವೇಶಿಸುವದಕ್ಕಾದರೂ ನಿನಗೆ ಒಪ್ಪಿಗೆಯು ದೊರೆಯಲಾರದು.''

``ಇದೇ ಕೊನೆಯ ಉತ್ತರವೆ?''

``ಅಹುದು; ಇದೇ ಕೊನೆಯ ಉತ್ತರವು!''

``ಮಹಂತರೆ! ನಿರಪರಾಧಿಯಾದ ಈ ಕಾಲಾಚಾಂದನನ್ನು ವಿಟಂಬನೆಗೊಳಿಸಬೇಕೆಂಬದೇ ನಿಮ್ಮ ಮುಖ್ಯೋದ್ದೇಶವಿದ್ದಂತೆ ತೋರುವದು. ಬಹಳೇ ಚಲೋದಾಯಿತು; ಅತ್ಯುತ್ತಮವಾಯಿತು! ಈ ಕಾಲಾಚಾಂದನು ಯಾವ ಧರ್ಮದ ಮೇಲೆ, ಯಾವ ದೇವತೆಗಳ ಮೇಲೆ ಇಷ್ಟು ದಿನ ಅತ್ಯಂತ ಭಕ್ತಿ-ವಿಶ್ವಾಸಗಳನ್ನು ತಳೆದಿದ್ದನೋ, ಅದೇ ಧರ್ಮಕ್ಕೆ ಅದೇ ದೇವಮೂರ್ತಿಗಳಿಗೆ ಇನ್ನು ಕಾಲನಾಗುವನೆಂಬ ಮಾತನ್ನು ಜಗನ್ನಾಥನ ಸಮ್ಮುಖದಲ್ಲಿ ನಿಶ್ಚಯವಾಣಿಯಿಂದ ಹೇಳುವೆನು! ಹಿಂದುಸಮಾಜದವರ

ಅಪಮಾನದ ಸೇಡನ್ನು ಭಯಂಕರವಾದ ರೀತಿಯಿಂದ ತೀರಿಸಿಕೊಳ್ಳದಿದ್ದರೆ ನಾನು ಕಾಲಾಚಾಂದನೇ ಅಲ್ಲ! ಇದೇ ನನ್ನ ಪ್ರತಿಜ್ಞೆಯು!''

ಕಾಲಾಚಾಂದನು ಕ್ರೋಧಾಂಧನಾಗಿ ಹೀಗೆ ನುಡಿಯುತ್ತಿರಲು, ನಾಲ್ಕು ಜನ ರಾಜಪರಿಚಾರಕರು ಅವನನ್ನು ಹಿಡಿದುಕೊಂಡು ರಾಜಮಂದಿರದ ಕಡೆಗೆ ಸಾಗಿದರು. ಈ ಕೃತಿಯಿಂದಂತು ಕಾಲಾಚಾಂದನ ಮಾನಿಯಾದ ಹೃದಯವು ಪ್ರಖರವಾದ ಸಂತಾಪಾಗ್ನಿಯಿಂದ ತುಂಬಿ ಹೊರ ಸೂಸತೊಡಗಿತು. ತೇಜಸ್ವಿಯಾದ ಅವನು ಅಪಮಾನವನ್ನು ಸಹಿಸಲಾರದೆ, 'ಸೇಡು! ಸೇಡು!' ಎಂದು ಉದ್ಗಾರ ತೆಗೆಯುತ್ತ ನಡೆದಿದ್ದನು. ಪರಿಚಾರಕರು ಅವನನ್ನು ರಾಜಮಂದಿರದ ವಿಚಾರಗೃಹದಲ್ಲಿ ಹಿಡತಂದರು.

ಆಗ ಉತ್ಕಲದೇಶವನ್ನು ರಾಜಾ ಮುಕುಂದದೇವನು ಆಳುತ್ತಿದ್ದನು. ರಾಜಾಲಕ್ಷ್ಮಣದೇವನು ಹೇಗೆ ಬಂಗಾಲದ ಕೊನೆಯ ಅರಸನಾದನೊ, ಅದರಂತೆ ರಾಜಾ ಮುಕುಂದದೇವನೂ ಓರಿಸಾದ ಕೊನೆಯ ಅರಸನಾದನೆಂಬ ಇತಿಹಾಸವು ಯಥಾಕಾಲದಲ್ಲಿ ವಾಚಕಮಹಾಶಯರ ದೃಷ್ಟಿಗೋಚರವಾಗಬಹುದು. ಮುಕುಂದದೇವನು ಲಕ್ಷ್ಮಣದೇವನಂತೆ ವೃದ್ಧನೂ ಶಕ್ತಿಹೀನನೂ ಆಗಿದ್ದಿಲ್ಲ. ಸ್ವಾತಂತ್ರ್ಯಪ್ರಿಯನೂ ಶೂರನೂ ಸಾಹಸಿಯೂ ಆದ ಮುಕುಂದದೇವನು ಶತ್ರುಗಳೆದುರಿಗೆ ಎಂದೂ ತಲೆಬಾಗಿದ್ದಿಲ್ಲ. ಆಗ ಓರಿಸಾದ ವೀರತ್ವವು ಲುಪ್ತಪ್ರಾಯವಾಗಿದ್ದಿಲ್ಲ. ಅಲ್ಲಿಯ ಪ್ರತಿಯೊಬ್ಬ ತರುಣನು ಭಟನಾಗಿದ್ದನು. ಉತ್ಕಲ ದೇಶವು ತನ್ನ ಪರಾಕ್ರಮದ ಅಬ್ಬರದಿಂದ ವಂಗದೇಶದ ಸುಲತಾನನನ್ನು ನಡುಗಿಸಿಬಿಟ್ಟಿತ್ತು. ತ್ರಿವೇಣಿಯಿಂದ ಗೋದಾವರಿಯ ವರೆಗೆ ಈ ದೇಶವು ಪಸರಿಸಿದ್ದು, ಇದು ವರೆಗೆ ಅಲ್ಲಿ ಯಾವ ಅರಿರಾಯನಿಗೂ ಜಯವು ದೊರೆತಿದ್ದಿಲ್ಲ. ಆ ದೇಶವು ಸ್ವತಂತ್ರವಿತ್ತು. ಮಧ್ಯಏಶಿಯಾದಿಂದ ಭರತಖಂಡಕ್ಕೆ ಬಂದ ಆರ್ಯರಲ್ಲಿ ಕೆಲವು ಜನರು ಉತ್ಕಲದೇಶದಲ್ಲಿ ತಳವೂರಿದ್ದರು. ಅವರು ಬಂದಂದಿನಿಂದ ಇದು ವರೆಗೆ ಸ್ವಾತಂತ್ರ್ಯ ಸಾಮ್ರಾಜ್ಯದಲ್ಲಿಯೇ ವಾಸವಾಗಿದ್ದರು. ಎಷ್ಟೋ ಕಡೆಯಲ್ಲಿ ಯವನರ ಹಾವಳಿಗಳು ನಡೆದು,

ಎಷ್ಟೋ ದೇಶಗಳು ಅವರ ಪಾದಾಕ್ರಾಂತವಾಗಿ ಅಲ್ಲಲ್ಲಿ ಕೋಲಾಹಲವೆದ್ದಿದ್ದರೂ ಓರಿಸಾದೇಶವು ಮಾತ್ರ ತನ್ನ ತೇಜಸ್ವಿತೆಯನ್ನು ಕಳಕೊಂಡಿದ್ದಿಲ್ಲ. ರಾಜಾ ಮುಕುಂದ ದೇವನೂ ಅವನ ಪೂರ್ವಜರೂ ತಮ್ಮ ದೇಶದಲ್ಲಿ ಯವನರಿಗೆ ಕಾಲು ಇಡಗೊಟ್ಟಿದ್ದಿಲ್ಲ. ಇಷ್ಟಲ್ಲದೆ ಉನ್ಮತ್ತರಾಗಿ ನಡೆಯತೊಡಗಿದ ಯವನರ ಮೇಲೆ ದಾಳಿ ಮಾಡಿ ಇವರು ವಿಜಯಶಾಲಿಗಳಾಗಿದ್ದರು. ಗೋವಳಕೊಂಡದ ಬಾದಶಹನಾದ ಇಬ್ರಾಹಿಮ ಖಾನನೊಡನೆ ರಾಜಮಹೇಂದ್ರಿಯಲ್ಲಿ ನಿಕರವಾದ ಸಂಗ್ರಾಮ ಮಾಡಿ ವಿಜಯವನ್ನು ಸಂಪಾದಿಸಿದ ಮೇಲೆ, ರಾಜಾ ಮುಕುಂದದೇವನು ರಾಜಧಾನಿಯಾದ ಕಟಕವಾರಣಾಸಿಯನ್ನು ಬಿಟ್ಟು ಜಗನ್ನಾಥಪುರಿಯಲ್ಲಿರತೊಡಗಿದ್ದನು. ಈ ಮುಕುಂದದೇವನು ಶೂರನಿದ್ದಂತೆ ವಿಲಾಸಿಯೂ ಆಗಿದ್ದನು. ಇವನಿಗೆ ನಾಲ್ಕು ನೂರು ಜನ ಪತ್ನಿಯರಿದ್ದರೆಂಬ ಆಖ್ಯಾಯಿಕೆಯುಂಟು! ಮುಕುಂದದೇವನು ಕಟ್ಟಿಸಿದ ತ್ರಿವೇಣಿಯ ಸೋಪಾನವೂ ಅನೇಕ ದೇವಮಂದಿರಗಳೂ ಕೋಟೆ-ಕೊತ್ತಳಗಳೂ ಅವನ ಅಲೌಕಿಕತ್ವವನ್ನು ಪ್ರಕಟಗೊಳಿಸುವದಕ್ಕಾಗಿ ಇನ್ನೂ ಅಸ್ತಿತ್ವದಲ್ಲಿರುವವು. ಮನುಷ್ಯನು ಸರ್ವಗುಣಸಂಪನ್ನನಿರುವದು ಅಸಂಭವವು. ಈ ಮುಕುಂದದೇವನಲ್ಲಾದರೂ ಕೆಲವು ದೋಷಗಳಿದ್ದವು. ಅವನು ಲಾವಣ್ಯಸಂಪನ್ನ ರಮಣಿಯರ ಭೋಕ್ತೃವಾಗಿದ್ದನು. ತಾರುಣ್ಯದಲ್ಲಿ ಮನುಷ್ಯನು ವಿಲಾಸಿಯಾಗುವದುಂಟು; ಈ ನಿಸರ್ಗಗುಣವು ಮಿತಿಮೀರಿತೆಂದರೆ ಅದರಿಂದ ಹಾನಿಯಾಗದೆ ಇರಲಾರದು.

ರಾಜಾ ಮುಕುಂದದೇವನು ತನ್ನ ಓಲಗದಲ್ಲಿ ಕುಳಿತಿದ್ದನು. ಮಹಾಮಂತ್ರಿಯಾದ ಜನಾರ್ದನನೂ, ಉಪಮಂತ್ರಿಯಾದ ಮಹಾಭದ್ರರಾಯನೂ ಅವನ ಬಳಿಯಲ್ಲಿಯ ಆಸನಗಳಲ್ಲಿ ಕುಳಿತುಕೊಂಡಿದ್ದರು. ಆಗ ರಾಜ ಪರಿಚಾರಕರು ಕಾಲಾಚಾಂದನನ್ನು ತಂದು ರಾಜನ ಸಮ್ಮುಖದಲ್ಲಿ ನಿಲ್ಲಿಸಿದರು. ಅಷ್ಟರಲ್ಲಿ ಮಹಂತನಾದರೂ ಓಲಗವನ್ನು ಪ್ರವೇಶಿಸಿದನು. ಅರಸನು ಅವನನ್ನು ಸನ್ಮಾನಿಸಿ, ತಕ್ಕ ಸ್ಥಳದಲ್ಲಿ ಕುಳ್ಳಿರಿಸಿದ ಬಳಿಕ—"ಮಹಾರಾಜರೆ, ಇವನು ಯಾರು?"

“ಇವನು ಕಾಲಾಚಾಂದನು. ಬಂಗಾಲದ ಬಾದಶಹನ ಜಾಮಾತನು.”

“ಕಾಲಾಚಾಂದನು ಇವನೇ ಏನು?” ಎಂದು ಮುಕುಂದದೇವನು ವಿಸ್ಮಯದಿಂದ ನುಡಿದು—“ಯತಿಮಹಾರಾಜರು ಹೇಳಿದಂತೆ ಇವನು ಬಂದೇಬಿಟ್ಟನೆಂದ ಹಾಗಾಯಿತು. ಇವನು ಪತಿತನಿದ್ದು ಮಹಾ ದುರ್ಜನನಿರುವಂತೆ ಕಾಣುತ್ತದೆ.”

“ಸಮಾಜದ ದೃಷ್ಟಿಗೆ ಇವನು ಹಾಗೆ ತೋರುತ್ತಿರುವದು ನಿಜವು. ಇವನಂತಹ ಧಾರ್ಮಿಕನೂ ಪುಣ್ಯವಂತನೂ ಜಗತ್ತಿನಲ್ಲಿ ದೊರೆಯುವದು ದುರ್ಮಿಳವು. ಪಂಡಿತ ಮಹಾಸಭೆಯಲ್ಲಿ ನಾನೂ ಯತಿಮಹಾರಾಜರೂ ಇವನ ಧರ್ಮವಂತಿಕೆಯು ಹಾಗು ಪವಿತ್ರತೆಯ ಬಗ್ಗೆ ಎಷ್ಟು ತಿಳಿಸಿ ಹೇಳಿದರೂ, ಸಮಾಜವು ಇವನನ್ನು ನಿರ್ದೋಷಿಯೆಂದು ತಿಳಿಯಲಿಕ್ಕೆ ಸಿದ್ಧವಾಗಲಿಲ್ಲ.” ‘ ನಿಯತಿಯು ಅಲಂಘನೀಯವಿರುವದು. ಧರ್ಮಚ್ಯುತನಂತಹ ಶತ್ರುವಿಲ್ಲವೆಂಬ ಮಾತು ಓರಿಸಾದೇಶದ ಅನುಭವಕ್ಕೂ ಜಗತ್ತಿನ ನಿದರ್ಶನಕ್ಕೂ ಬರಬೇಕೆಂದು ಈಶಸಂಕೇತವಿದ್ದರೆ ಅದಕ್ಕೆ ಮನುಷ್ಯನ ಉಪಾಯವೇನು? ಸನಾತನ ಧರ್ಮನಿಷ್ಠನಾದ ಈ ಮೂರ್ತಿಪೂಜಕನು ಮೂರ್ತಿಭಂಜಕನಾಗಿ ವೈದಿಕ ಧರ್ಮಕ್ಕೆ ಕಾಲನಾಗಬೇಕೆಂದೂ, ಓರಿಸಾದ ಸ್ವಾತಂತ್ರ್ಯವಿಧ್ವಂಸಕನಾಗಬೇಕೆಂದೂ ಜಗನ್ನಾಥನ ಇಚ್ಛೆಯಿದ್ದರೆ, ಅದನ್ನು ಯಾರಿಂದ ತಿರುಗಿಸಲಾಗುವದು? ಭವಿತವ್ಯಕ್ಕೆ ಅನುಕೂಲವಾಗುವಂತೆಯೆ ಸಮಾಜದ ದೃಷ್ಟಿಕೋನವಿರುವದು. ಕಾಲಾಯ ತಸ್ಮೈ ನಮಃ!”

“ಮಹಂತರೆ, ನಿಮ್ಮ ಮಾತಿನಲ್ಲಿ ನನಗೆ ಹೇಗೆ ನಂಬಿಗೆಯಾಗಬೇಕು? ನೀವು ಈ ಕಾಲಾಚಾಂದನಲ್ಲಿ ಪ್ರೇಮವುಳ್ಳವರಾಗಿರುವದರಿಂದ ಹೀಗೆ ಮಾತನಾಡುತ್ತಿರುವಿರಿ.”

“ರಾಜಾ, ನೀನು ಬೇಕಾದ ಹಾಗೆ ಮಾತನಾಡಲು ಅಧಿಕಾರಿಯಿರುವೆ. ಯತಿಮಹಾರಾಜರ ಅನುಗ್ರಹದಿಂದಲೂ ಜಗನ್ನಾಥನ ಕೃಪೆಯಿಂದಲೂ ನನಗುಂಟಾದ ಜ್ಞಾನದಿಂದ ತಿಳಿದಷ್ಟು ಹೇಳಿರುವೆನು.”

ಮುಕುಂದದೇವನು ಮಹಂತನೊಡನೆ ಮಾತು ಬೆಳೆಸುವ ಸಾಹಸ

ಮಾಡಲಿಲ್ಲ. ಅವನು ಕಾಲಾಚಾಂದನ ಕಡೆಗೆ ಮುಖವನ್ನು ತಿರುಗಿಸಿ—
"ಕಾಲಾಚಾಂದ, ಯವನಿಯೊಡನೆ ವಿವಾಹವಾಗಿ ಪತಿತನಾದ ನೀನು, ಶ್ರೀ ಮಂದಿರವನ್ನು ಪ್ರವೇಶಿಸುವ ಸಾಹಸ ಮಾಡಿದ್ದು ನೋಡಿದರೆ ಸೋಜಿಗ ವಾಗುತ್ತದೆ. ನೀನು ದೇವತಾದರ್ಶನಕ್ಕಾಗಿಯೇ ಇಲ್ಲಿಗೆ ಬಂದಿರುವಿಯೊ, ಮತ್ತಾವ ಉದ್ದೇಶವಿಟ್ಟುಕೊಂಡು ಬಂದಿರುವಿಯೊ?"

"ನನ್ನ ಉದ್ದೇಶಗಳೇನಿದ್ದರೇನು? ಅರ್ಥಹೀನವಾದ ಮಾತು ಗಳನ್ನು ಬಳಿಯಿಸುವದಕ್ಕೆ ನನ್ನ ಸಿದ್ಧತೆಯಿಲ್ಲ.'

"ನೀನು ಉದ್ದಾಮನಿರುವೆ!"

"ರಾಜಾ, ನಾನು ಉದ್ದಾಮನಲ್ಲ; ಸತ್ಯಾಶ್ರಯಿ ಇರುವೆನು. ನಿರಪರಾಧಿಯಾದ ನನ್ನನ್ನು ಸಮಾಜದವರು ಧರ್ಮಚ್ಯುತನನ್ನು ಮಾಡಿದ್ದ ರಿಂದ ಇಲ್ಲಿಯ ಪಂಡಿತರ ಹಾಗು ಹಿಂದುರಾಜನಾದ ನಿನ್ನ ಮುಖಾಂತರ ವಾಗಿ ನಾನು ನಿರ್ದೋಷಿಯಿರುವೆನೆಂಬ ಸಂಗತಿಯನ್ನು ಅಜ್ಞ ಸಮಾಜದ ನಿದರ್ಶನಕ್ಕೆ ತಂದುಕೊಡಬೇಂಬ ಉದ್ದೇಶದಿಂದ ಇಲ್ಲಿಗೆ ಬಂದೆನು. ಇಲ್ಲಿಯ ಸಮಾಜದ ಹಾಗು ಧರ್ಮಪಂಡಿತರ ಹಾಗು ನಿನ್ನ ಸ್ವಭಾವಗಳು ವಿಚಿತ್ರವಿದ್ದದ್ದು ನನ್ನ ಅನುಭವಕ್ಕೆ ಬಂದಿತು. ಸತ್ಯಕ್ಕೆ ಎಲ್ಲಿ ಆಶ್ರಯ ವಿಲ್ಲವೋ ಅಲ್ಲಿ ಕಾಲಗಳಿಗೆಯಾದರೂ ನಿಲ್ಲಲಿಕ್ಕೆ ನನ್ನ ಮನಸ್ಸಿಲ್ಲ."

"ಕಾಲಾಚಾಂದ, ನೀನು ಧರ್ಮಚ್ಯುತನಾಗಿಲ್ಲವೆ?"

"ಇಲ್ಲ."

"ತೀರ ಸುಳ್ಳು! ಈ ಮನುಷ್ಯನ ಮಾತುಗಳು ತೀರ ಸುಳ್ಳು! ಯವನಿಯನ್ನು ವಿವಾಹವಾದ ಮೇಲೆ ಧರ್ಮವು ಹೇಗೆ ಉಳಿಯುವದು? ಮಹಾರಾಜರೆ, ಪತಿತನನ್ನು ಸಮಾಜದಲ್ಲಿ ತೆಗೆದುಕೊಂಡು, ಪವಿತ್ರವಾದ ಸನಾತನ ಧರ್ಮದ ಕೀರ್ತಿಗೆ ಕಲಂಕವನ್ನುಂಟು ಮಾಡಬಾರದು!"

ಓಲಗದ ಕಿಟಕಿಯ ಬಳಿಯಲ್ಲಿ ನಿಂತ ಇಬ್ಬರು ಬಂಗಾಲೀ ತರುಣಿ ಯರಲ್ಲಿ ಒಬ್ಬಳು ಹೀಗೆ ನುಡಿದ ಕೂಡಲೆ ಎಲ್ಲರ ಲಕ್ಷ್ಯವು ಆ ತರುಣಿಯ ಕಡೆಗೆ ಹೋಯಿತು. ಮುಕುಂದದೇವನಾದರೂ ಅತ್ತ ಕಡೆಗೆ ಮುಖವನ್ನು ತಿರುಗಿಸಿದನು. ಕಣ್ಣು ಕುಕ್ಕುವ ಲಾವಣ್ಯ ತೇಜವುಳ್ಳ ಆ ತರುಣಿಯನ್ನು

ನೋಡಿ ಅವನು ಬೆರಗಾದನು. ಅವಳ ಮುಖಚಂದ್ರನಲ್ಲಿ ನೆಟ್ಟ ದೃಷ್ಟಿಯನ್ನು ಕಿತ್ತುಕೊಳ್ಳಲಿಕ್ಕೆ ಮುಕುಂದದೇವನು ಅಸಮರ್ಥನಾಗಿ ಹೋದನು. ಕಾಲಾಚಾಂದನಾದರೂ ಅವಳನ್ನು ಕೆಂಗಣ್ಣಿನಿಂದ ನೋಡಲಾರಂಭಿಸಿದ್ದನು. ತಾನು ಹಿಂದುವಲ್ಲವೆಂದು ಹೇಳಿದ ತರುಣಿಯು ವ್ರಜಬಾಲೆಯೇ ಎಂಬದು ಅವನಿಗೆ ಗೊತ್ತಾಯಿತು. ಆಗ ಅವನು ಕರ್ಣಕಠೋರಧ್ವನಿಯಿಂದ:--''ಡಾಕಿನಿ! ನೀನು ಇಲ್ಲಿಯೂ ನನ್ನ ಗೃಹದ ಮೇಲಿರುವೆಯಾ?''

''ಸೇಡು! ಸೇಡು!!'' ವ್ರಜಬಾಲೆಯ ಮುಖದಿಂದ ಸಂತಾಪಯುಕ್ತವಾದ ಉದ್ಗಾರವು ಹೊರಟಿತು.

ಮುಕುಂದದೇವನಿಗೆ ಈ ಉದ್ಗಾರವೂ ಕಾಲಾಚಾಂದನಾಡಿದ ಮಾತುಗಳೂ ಕೇಳಿಸಲಿಲ್ಲ. ಅವನು ಸ್ವರ್ಗೀಯ ಲಾವಣ್ಯದ ಆ ಮೂರ್ತಿಯನ್ನು ಕಣ್ತುಂಬ ನಿರೀಕ್ಷಿಸುವದರಲ್ಲಿ ಲೀನನಾಗಿದ್ದನು. ಎಷ್ಟೋ ವೇಳೆಯ ಮೇಲೆ ಅವನು ಮೈಮೇಲೆ ಎಚ್ಚರವನ್ನು ತಂದುಕೊಂಡು—''ಕಾಲಾಚಾಂದನು ಪತಿತನಾಗಿರುವನೆಂದು ಹೇಳಿದ ಯುವತಿಯು ಇಲ್ಲಿ ಬರಬೇಕು.''

ವ್ರಜಬಾಲೆಯು ಓಲಗವನ್ನು ಪ್ರವೇಶಿಸಿದಳು. ಆಗ ಮುಕುಂದದೇವನು ಅವಳನ್ನು ಕುರಿತು—''ಕಾಲಾಚಾಂದನ ವಿಷಯವಾಗಿ ನಿನಗೆ ಎಲ್ಲ ಸಂಗತಿಗಳು ಗೊತ್ತಿರುವವೇನು?''

''ಎಲ್ಲವೂ ತಿಳಿದಿರುತ್ತವೆ. ಮಹಾರಾಜರೆ, ಇವನು ಯವನಿಯನ್ನು ವರಿಸಿರುವನು. ನಿಮಿತ್ತಕ್ಕಾಗಿ ಅವಳಿಗೆ ಹಿಂದುಧರ್ಮದ ದೀಕ್ಷೆ ಕೊಟ್ಟಂತೆ ಮಾಡಿ ಪಾಣಿಗ್ರಹಣ ಮಾಡಿದರೆ ಸನಾತನ ಧರ್ಮಕ್ಕೆ ಶೋಭಿಸುವದೇನು? ಇವನು ನೀಚನು! ಪಾತಕಿಯು! ಆಚಾರಭ್ರಷ್ಟನು!!—''

''ಪಿಶಾಚಿ! ಬಾಯಿ ಮುಚ್ಚು!!''

''ಹಾ! ನೀನು ನಡುವೆ ಮಾತನಾಡಬೇಡ!'' ಎಂದು ಮುಕುಂದದೇವನು ಗರ್ಜಿಸಿದನು. ಆಗ ವ್ರಜಬಾಲೆಯು ತಾರಸ್ವರದಿಂದ:''ಮಹಾರಾಜರೆ, ನಾನು ಇವನ ಬೆದರಿಕೆಗೆ ಸೊಪ್ಪು ಹಾಕುವಂತಿಲ್ಲ. ಈ ಕಾಲಾಚಾಂದನು ಬ್ರಾಹ್ಮಣನಿರುವನು. ಇವನು ಒಬ್ಬಳನ್ನು ಬಲಾತ್ಕಾರದಿಂದ

ವಿವಾಹವಾಗಿ ಅವಳ ಸೌಖ್ಯವನ್ನು ಸೂರೆ ಮಾಡಿದನು; ಮತ್ತೊಬ್ಬಳನ್ನು ತವರುಮನೆಯಲ್ಲಿಯೇ ಬಿಟ್ಟಿರುವನು. ಧರ್ಮಶೀಲಳೂ, ಪತಿವ್ರತೆಯೂ ಆದ ಪತ್ನಿಯಿದ್ದರೂ ಇವನು ಪ್ರೇಮದ ಬಲೆಯಲ್ಲಿ ಸಿಲುಕಿ ಯುವನಿಯನ್ನು ವಿವಾಹವಾದನು. ಇವನು ಪುರಿಯನ್ನು ಪ್ರವೇಶಿಸದ ಕೂಡಲೆ ಆದ ಅಪಶಕುನಗಳು ಸರ್ವವಿದಿತವಿರುವವು. ಸೂರ್ಯನು ಮೇಘದಿಂದ ಆವರಿಸಲ್ಪಟ್ಟು ಕಾಂತಿಹೀನನಾದನು; ಪ್ರಚಂಡವಾದ ಬಿರುಗಾಳಿಯು ಬಿಟ್ಟಿತು; ಭದ್ರವಾಗಿದ್ದ ದೇವಸ್ಥಾನದ ಶಿಖರದ ಮೇಲಿನ ದೊಡ್ಡ ಕಲ್ಲು ಉರುಳಿ ಭೂಮಿಗೆ ಬಿತ್ತು. ಧರ್ಮಕರ್ಮಭ್ರಷ್ಟನಾದ ಈ ಕಾಲಾಚಾಂದನು ಪತಿತನಿರುವದರಿಂದಲೆ ಇಷ್ಟೆಲ್ಲ ಉತ್ಪಾತಗಳಾದವು.''

''ಕಾಲಾಚಾಂದ, ಈ ತರುಣಿಯ ಮಾತುಗಳು ನಿಜವೆಂದು ಭಾಸವಾಗುವವು.''

''ಈ ತರುಣಿಯು ಸ್ವೈರಿಣಿಯು! ಮಹಾ ಪಾತಕಿಯು!!''

''ನೀನು ಮಾತ್ರ ಧರ್ಮವಂತನಿರುವೆ!'' ಎಂದು ವ್ರಜಬಾಲೆಯು ಗರ್ಜಿಸಿ, ಮುಕುಂದದೇವನನ್ನು ಕುರಿತು—''ಮಹಾರಾಜರೆ, ಇವನು ಅಸಾಧ್ಯನಿರುವನು. ಇವನನ್ನು ಜೀವಂತವಾಗಿ ಬಿಟ್ಟರೆ ನಿಮಗೂ ನಿಮ್ಮ ರಾಜ್ಯಕ್ಕೂ ನಿಮ್ಮ ಧರ್ಮಕ್ಕೂ ನಿಮ್ಮ ಪವಿತ್ರವಾದ ದೇವಸ್ಥಾನಗಳಿಗೂ ಮೃತ್ಯುವಾಗುವನು. ಹಿಂದಕ್ಕೆ ಒಬ್ಬ ಯತಿಗಳು ಭವಿಷ್ಯವನ್ನು ಹೇಳಿದ್ದರ ಮೇಲಿಂದ ಇವನ ಪ್ರಕರಣವು ಸಾಮಾನ್ಯವಾದದ್ದಲ್ಲವೆಂಬುದು ಎಷ್ಟೋ ಜನರಿಗೆ ತಿಳಿದಿರುವದು. ಇವನನ್ನು ಕೊಲ್ಲಿಸಿಯೆ ಬೇರೆ ಕೆಲಸ ಮಾಡಿರಿ.''

''ಮಂತ್ರಿಗಳೆ, ನಿಮ್ಮ ಅಭಿಪ್ರಾಯವೇನಿರುವದು?''

''ಬ್ರಾಹ್ಮಣನು ಅವಧ್ಯನು.''

''ಇವನು ಬ್ರಾಹ್ಮಣನೆಂದು ಯಾರು ಹೇಳುವರು? ಮಂತ್ರಿಗಳೆ, ಚನ್ನಾಗಿ ಯೋಚಿಸಿ ಮಾತನಾಡಿರಿ!'' ವ್ರಜಬಾಲೆಯು ಗಂಭೀರತೆಯಿಂದ ನುಡಿದಳು.

''ಇವನನ್ನು ಗಡೀಪಾರು ಮಾಡಿಬಿಡಿರಿ. ನೀವು ಈ ವಿಷಯದಲ್ಲಿ

ಹೆಚ್ಚಿನ ಹವ್ಯಾಸಕ್ಕೆ ಹೋಗಬಾರದು'' ಎಂದು ಮಹಂತನು ರಾಜನಿಗೂ ಮಂತ್ರಿಗೂ ತನ್ನ ಅಭಿಪ್ರಾಯ ತಿಳಿಸಿದನು.

'ನೀವಾದರೂ ಈ ಸ್ವೈರಿಣಿಯ ಮಾತುಗಳಿಗೆ ಮಹತ್ವ ಕೊಟ್ಟಿರಾ?' ಎಂದು ಕಾಲಾಚಾಂದನು ನುಡಿದ ಕೂಡಲೆ, ಮಹಂತನು—''ಕಾಲಾಚಾಂದ, ನಾನು ಎರಡನೆಯವರ ಮಾತಿಗೆ ಮನಸೋಲುವವನಲ್ಲ.''

''ಮಹಾರಾಜರೆ, ನಾನು ಇಲ್ಲಿಗೆ ಯಾವ ಉದ್ದೇಶದಿಂದ ಬಂದಿರುವೆನೆಂಬದು ನಿಮಗೆ ಗೊತ್ತಿಲ್ಲವೆ? ನಾನು ನಿರಪರಾಧಿಯಿರುವೆನೆಂಬ ಸಂಗತಿಯಾದರೂ ಸಾತ್ವಿಕರಾದ ನಿಮ್ಮ ಸದಸದ್ವಿವೇಕ ಬುದ್ಧಿಗೆ ತಿಳಿದಿಲ್ಲವೇ? ಪ್ರವಾಹಪತಿತನಾದ ನನ್ನನ್ನು ದಂಡೆಗೆ ಹಚ್ಚಿ ಪುಣ್ಯಪಡಕೊಳ್ಳಬೇಕೆಂದು ನಾನು ಬೇಡಿಕೊಳ್ಳುವೆನು.''

''ಯುವಕಾ, ಈ ವಿಷಯದಲ್ಲಿ ನಾನು ನಿರುಪಾಯನಾಗಿರುವೆನು.''

''ಉಪಾಯವಿಲ್ಲವೆ? ನಾನು ಶುದ್ಧ ಸನಾತನಿಯಾಗಿದ್ದರೂ ಸಮಾಜದಿಂದ ದೂರವಿರಬೇಕಾಗುವೆನೆ? ದೇವಮಂದಿರ ಪ್ರವೇಶಕ್ಕೆ ಎರವಾಗಬೇಕಾಗುವದೆ?''

''ಈ ಎಲ್ಲ ಸಂಗತಿಗಳ ವಿಚಾರ ಮಾಡುವವನು ನಾನಲ್ಲ.''

''ನನ್ನನ್ನು ಬ್ರಾಹ್ಮಣನೆಂದು ತಿಳಿಯಲಿಕ್ಕೆ ನೀವು ಒಪ್ಪುವದಿಲ್ಲವೆ? ನನ್ನನ್ನು ಮ್ಲೇಂಛನೆಂದು ನೀವು ತಿಳಿದುಕೊಳ್ಳುವಿರಾ?''

''ಸಮಾಜದಿಂದ ಬಹಿಷ್ಕೃತನಾದ ನಿನ್ನನ್ನು ಬ್ರಾಹ್ಮಣನೆಂದು ತಿಳಿದುಕೊಳ್ಳುವದು ಹೇಗೆ? ಎಲ್ಲ ಭಾರವು ಸಮಾಜವನ್ನು ಕೂಡಿರುವದರಿಂದ ನಾನು ಈ ವಿಷಯದಲ್ಲಿ ಯಾವ ಅಭಿಪ್ರಾಯವನ್ನೂ ವ್ಯಕ್ತಪಡಿಸಲಾರೆನು.''

''ನಾನು ಹಿಂದು ಧರ್ಮದಲ್ಲಿ ಪ್ರವೇಶಿಸಲಿಕ್ಕೆ ಅಯೋಗ್ಯನಿರುವೆನೆಂದು ಧರ್ಮ ಪಂಡಿತರ ಅಭಿಪ್ರಾಯವಿರುವದೇನು?''

''ಅಹುದು.''

''ಅವರು ನನ್ನನ್ನು ತಮ್ಮ ಸಮಾಜದಲ್ಲಿ ತೆಗೆದುಕೊಳ್ಳುವದಿಲ್ಲವೆ?''

''ಇಲ್ಲ.''

"ಬಹಳೇ ಉತ್ತಮವಾಯಿತು. ಇಷ್ಟು ದಿನ ನಾನು ಹಿಂದು ಇದ್ದೆನು; ಪವಿತ್ರ ಬ್ರಾಹ್ಮಣನಿದ್ದೆನು! ಇನ್ನು ಮೇಲೆ ಮಾತ್ರ ಮ್ಲೇಂಛ ನಾದೆನು; ಮುಸಲಮಾನನಾದೆನು! ಅಗ್ನಿ-ಬ್ರಾಹ್ಮಣರ ಮುಖಾಂತರವಾಗಿ ವಿಧಿಪೂರ್ವಕ ಗ್ರಹಣ ಮಾಡಿದ ಈ ಯಜ್ಞೋಪವೀತವನ್ನು ನಾನು ಇಂದೇ ತ್ಯಾಗಮಾಡುತ್ತೇನೆ!" ಎಂದು ಕಾಲಾಚಾಂದನು ನುಡಿದು, ಯಜ್ಞೋಪ ವೀತವನ್ನು ಹರಿದು ಚಲ್ಲಿ:—"ಮಹಾಂತರೆ, ಹಿಂದು ಸಮಾಜವು ಇಂದು ಒಬ್ಬ ನಿರಪರಾಧಿಯಾದ ಬ್ರಾಹ್ಮಣನ ಕೊಲೆ ಮಾಡಿರುವದು. ಈ ಬ್ರಹ್ಮ ಹತ್ಯಾ ದೋಷದ ಪಾಪದ ಭಾರವು ಸಮಾಜದ ಮೇಲಿರುವದೆಂಬದನ್ನು ನಾನು ಹೇಳಬೇಕೆನ್ನುವಂತಿಲ್ಲ. ಸನಾತನ ಧರ್ಮಾನುಯಾಯಿಯಾದ ನನ್ನನ್ನು ಹೆಜ್ಜೆ-ಹೆಜ್ಜೆಗೆ ಅಪಮಾನಗೊಳಿಸಿ ಧರ್ಮಚ್ಯುತಗೊಳಿಸಿದ ಸಮಾ ಜಕ್ಕೆ ಧಿಃಕಾರವಿರಲಿ! ನನ್ನ ಇಹ-ಪರ ಸೌಖ್ಯಕ್ಕೆ ಕಾಲವಾದ ಹಿಂದು ಸಮಾಜಕ್ಕೆ ನಾನು ಕಾಲನಾಗುವೆನು. ನನಗಾದ ಅಪಮಾನದ ಹಾಗು ನನ್ನ ಸೌಖ್ಯ ನಾಶದ ಸೇಡನ್ನು ಭಯಂಕರವಾದ ರೀತಿಯಿಂದ ತೀರಿಸಿ ಕೊಳ್ಳದಿದ್ದರೆ ನಾನು ಕಾಲಾಚಾಂದನಲ್ಲ! ಮಹಾಜ್ಞಾನಿಗಳೆನಿಸಿಕೊಳ್ಳುವ ನಿಮಗೂ, ನಿಷ್ಠುರನೂ ಅತ್ಯಾಚಾರಿಯೂ ಆದ ಈ ರಾಜನಿಗೂ, ನಿರ್ಘೃಣ ವಾದ ಸಮಾಜಕ್ಕೂ ತಮ್ಮ ಪಾತಕಕ್ಕಾಗಿ ಪ್ರಳಾಪಿಸುತ್ತ ಕುಳಿತು ಕೊಳ್ಳುವ ಸಮಯವೊದಗುವದು! ಸೇಡು! ಸೇಡು!!"

ಕಾಲಾಚಾಂದನು ಹೀಗೆ ಉದ್ಗಾರ ತೆಗೆದು, ಅಲ್ಲಿಂದ ವೇಗವಾಗಿ ಹೊರಟು ಹೋದನು.

———

## ಕಾಲಾ ಪಹಾಡ!

"ಬಾನಾ!"

"ಮಹಾರಾಜರೆ!"

'ನಾನು ಇಂದು ನಿನಗೆ ದುಷ್ಟವಾರ್ತೆಯನ್ನು ಹೇಳುವವನಿರುವೆನು.

"ನೀವು ಇಂದೇ ಪರದೇಶದಿಂದ ಬಂದಿರುವಿರಿ. ಈ ಆನಂದ ದಾಯಕ ಪ್ರಸಂಗದಲ್ಲಿ ದುಷ್ಟವಾರ್ತೆಯನ್ನೇನು ಹೇಳುವಿರಿ?"

"ಬೂನಾ, ನನ್ನಿಂದ ಭಯಂಕರವಾದ ಕೃತಿಯು ಘಟಿಸಿರುವದು."

"ಅದೇನು?"

"ನಾನು ಇಂದು ನನ್ನ ಕೈಯಿಂದಲೆ ಸರ್ವನಾಶ ಮಾಡಿಕೊಂಡಿ ರುವೆನು."

"ಪ್ರಭುಗಳೇ, ನಿಮ್ಮ ಮಾತಿನ ಅರ್ಥವಾಗಲೊಲ್ಲದು."

"ನಾನು ಇಂದು ಮುಸಲಮಾನ ಧರ್ಮವನ್ನು ಸ್ವೀ—"

"ಬಹಳೇ ಚಲೋದಾಯಿತು."

"ನಿನಗೆ ನನ್ನ ಮಾತುಗಳು ತಿಳಿಯಲಿಲ್ಲವೆಂಬಂತೆ ಕಾಣುತ್ತದೆ. ನಾನು ಇಂದು ನನ್ನ ಪವಿತ್ರವಾದ ಸನಾತನ ಧರ್ಮವನ್ನು ತ್ಯಜಿಸಿ ಮುಸಲ ಮಾನನಾದೆನು."

"ಇದರಲ್ಲಿ ಏನು ಕೆಟ್ಟಿತು? ಮುಸಲ್ಮಾನ ಧರ್ಮಗ್ರಹಣ ಮಾಡಿದ್ದ ರಿಂದ ನೀವು ಧರ್ಮತ್ಯಾಗ ಮಾಡಿದಂತಾಗಲಿಲ್ಲ. ಪರಮಾತ್ಮನ ಉಪಾ ಸನೆಯ ಮಾರ್ಗವನ್ನು ಮಾತ್ರ ಬೇರೆ ಮಾಡಿಕೊಂಡಂತಾಯಿತು."

"ಬೂನಾ!"

"ಪ್ರಭುಗಳೆ, ಮತ್ತೇನು?"

"ನಾನು ಧರ್ಮತ್ಯಾಗ ಮಾಡಿದಂತಾಗಲಿಲ್ಲವೆ? ನಾನು ನನ್ನ ಧರ್ಮವನ್ನು ತ್ಯಜಿಸಿ ಇಸ್ಲಾಮಿ ಧರ್ಮವನ್ನು ಪ್ರವೇಶಿಸಿದರೂ ಧರ್ಮ ತ್ಯಾಗ ಮಾಡಿದಂತಾಗಲಿಲ್ಲವೆ?"

"ಇಸ್ಲಾಮಿ ಧರ್ಮದಲ್ಲಿ ಸೇರಿದ್ದರಿಂದ ಧರ್ಮತ್ಯಾಗ ಮಾಡಿ ದಂತಾಗಲಿಲ್ಲ. ಉಪಾಸ್ಯದೇವತೆಗಳ ಹೆಸರು ಮಾತ್ರ ಬೇರೆ ಮಾಡಿ ಕೊಂಡಂತಾಯಿತು. ಮೊದಲು 'ಹರಿ' ಅನ್ನುತ್ತಿದ್ದರೆ ಈಗ 'ಅಲ್ಲಾ' ಅನ್ನಬೇಕಾಯಿತು; ಭಗವದ್ಗೀತೆಯನ್ನು ಮುಚ್ಚಿಟ್ಟು ಕುರಾಣವನ್ನು ಓದಬೇಕಾಯಿತು. ಇದರಲ್ಲಿ ಧರ್ಮತ್ಯಾಗವೇನು ಮಾಡಿದಂತಾ ತಾಯಿತು?"

"ಬೂನಾ, ನೀನು ಜ್ಞಾನವಂತನಿರುವೆ. ನನ್ನ ಸೇವಕನಾಗಿದ್ದರೂ ನಿನ್ನ ಯೋಗ್ಯತೆಯು ಘನತರವಾದದ್ದಿರುವದು. ನಿನ್ನಿಂದಲೇ ನನ್ನ ಕ್ಲೇಶಬಡುತ್ತಿರುವ ಆತ್ಮಕ್ಕೆ ಶಾಂತಿಯು ದೊರೆಯುತ್ತಲಿರುವದು."

"ಮಹಾರಾಜರೆ, ನಾನು ನಿಮ್ಮಿಂದಲೆ ಎಲ್ಲ ಬಗೆಯ ಜ್ಞಾನ ಹೊಂದಿರುವೆನು."

"ಬೂನಾ, ನಾನು ಅನೇಕ ಧರ್ಮಪಂಡಿತರನ್ನು ಕಂಡಿರುವೆನು ಅವರಲ್ಲಿ ನಿನ್ನಂತಹ ಸಮತಾಬುದ್ಧಿಯಿದ್ದರೆ ನಾನು ಸ್ವಧರ್ಮವನ್ನು ತ್ಯಜಿಸುವ ಪ್ರಸಂಗವೊದಗುತ್ತಿದ್ದಿಲ್ಲ."

ಈ ಮೇರೆಗೆ ಸಂಭಾಷಣವು ಕಾಲಾಚಾಂದ-ಬೂನಾರಲ್ಲಿ ನಡೆದಿತ್ತೆಂಬದನ್ನು ಬೇರೆ ಹೇಳುವ ಕಾರಣವಿಲ್ಲ. ಕಾಲಾಚಾಂದನು ಜಗನ್ನಾಥಪುರಿಯಿಂದ ಹೊರಟು ಗೌಡರಾಜಧಾನಿಗೆ ಬಂದನು. ಹಿಂದುಧರ್ಮವನ್ನು ಯಾವಾಗ ತ್ಯಜಿಸುವೆನೋ, ಯಾವಾಗ ಹಿಂದು ಧರ್ಮದ ಕಟ್ಟಾವೈರಿಯಾಗುವೆನೋ ಎಂದು ಆತುರಗೊಂಡವನಾದ ಅವನು ರಾಜಧಾನಿಯನ್ನು ಪ್ರವೇಶಿಸಿದ ಕೂಡಲೆ ಮೌಲವಿಯ ಮನೆಗೆ ಹೋಗಿ ಮಹಮ್ಮದೀಯ ಧರ್ಮದೀಕ್ಷೆ ಹೊಂದಿದನು. ಅನಂತರದಲ್ಲಿ ಅವನು ತನ್ನ ಮನೆಗೆ ಬಂದು ಎಲ್ಲ ಸಂಗತಿಗಳನ್ನು ಬೂನಾನಿಗೂ ಪ್ರಿಯಪತ್ನಿಯಾದ ಕಮಲಸುಂದರಿಗೂ ತಿಳಿಸಿದನು. ತನ್ನ ಮನಸ್ಸಿನ ಸಮಾಧಾನಕ್ಕಾಗಿ ಅವನು ಕಮಲಸುಂದರಿಗೆ ಮಹಮ್ಮದೀ ಧರ್ಮದೀಕ್ಷೆ ಕೊಡಿಸಿದನು. ದುಲಾರಿಯೆಂಬ ಮೊದಲಿನ ಹೆಸರಿನಿಂದಲೇ ಸಂಬೋಧಿಸಿಕೊಳ್ಳಬೇಕೆಂದು ಅವನು ತನ್ನ ಪತ್ನಿಗೆ ಕಟ್ಟಪ್ಪಣೆ ಮಾಡಿದನು. ತಾನು ಮುಸಲಮಾನನಾದರೂ ಬೂನಾನು ತನ್ನ ಮೇಲೆ ಮೊದಲಿನಂತೆಯೆ ಭಕ್ತಿಭಾವವುಳ್ಳವನಾಗಿದ್ದುದನ್ನು ನೋಡಿ ಕಾಲಾಚಾಂದನಿಗೆ ಪರಮಾವಧಿಯಾದ ಆನಂದವಾಯಿತು. ಆಗ ಅವನ ಮನಸ್ಸಿನಲ್ಲಿ ನಾನಾ ಪ್ರಕಾರದ ಆಲೋಚನೆಗಳು ತಲೆದೋರತೊಡಗಿದವು. ತನ್ನ ಬಾಲ್ಯದ ಐತಿಹ್ಯವೆಲ್ಲ ಕಣ್ಣೆದುರಿಗೆ ಕಟ್ಟಿದಂತಾಯಿತು. ತನ್ನ ಮನಶ್ಯಾಂತಿಯನ್ನು ನಾಶಮಾಡಲಿಕ್ಕೂ ಜನ್ಮಾಗ್ರಾಮವಾದ ವೀರಜಾವನವನ್ನು ಬಿಡಿಸಿ ಯವನ ಸೇವೆಗೆ ಹಚ್ಚು

ಲಿಕ್ಕೂ ವ್ರಜಬಾಲೆಯೇ ಕಾರಣಳೆಂದು ಅವನು ಭಾವಿಸಿದನು. ತನ್ನ ಮೇಲಿನ ಸೇಡುತೀರಿಸಿಕೊಳ್ಳಲಿಕ್ಕೆ ಅವಳು ಇನ್ನೂ ಪ್ರಯತ್ನಿಸುತ್ತಿರುವಳೆಂಬದು ಪುರಿಯಲ್ಲಿ ಕಾಲಾಚಾಂದನ ನಿದರ್ಶನಕ್ಕೆ ಬಂದಿತ್ತು. ಆಗ ವ್ರಜಬಾಲೆಯ ರಾಕ್ಷಸೀ ಹೃದಯದ ಚಿತ್ರವು ಅವನ ಕಣ್ಣೆದುರಿಗೆ ಕಟ್ಟಿದಂತಾಯಿತು. ಭೂಪಬಾಲೆಯಂತಹ ಸಾಧ್ವಿಯನ್ನು ತ್ಯಜಿಸಿ, ವ್ರಜಬಾಲೆಯ ಲಕಿಲಕಿಸುವ ರೂಪಕ್ಕೆ ಮರುಳಾದದ್ದು ಹೆಚ್ಚಿನ ಮೂರ್ಖತನವಾಯಿತೆಂದು ಅವನು ಬಗೆದನು. ಆಗ ಅವನು ವಿಷಣ್ಣಮನಸ್ಕನಾಗಿ ಬೂನಾನನ್ನು ಕುರಿತು:—"ಬೂನಾ, ನಿನ್ನನ್ನು ನೋಡಿದ ಕೂಡಲೆ ನನಗೆ ನನ್ನ ಹಿರಿಯ ಹೆಂಡತಿಯಾದ ಭೂಪಬಾಲೆಯು ನೆನಪಾಗುತ್ತದೆ. ಅವಳು ನಿನ್ನ ಹೋಲಿಕೆಯುವಳೇ ಇರುವಳು. ಅವಳನ್ನು ತ್ಯಾಗಮಾಡಿ ನಾನು ಕಡು ಮೂರ್ಖನಾದೆನು."

"ಅವಳಲ್ಲಿ ಏನಾದರೂ ಅಪರಾಧವಿರಬಹುದು. ಹಾಗಿಲ್ಲದಿದ್ದರೆ ನೀವು ಅವಳನ್ನು ತ್ಯಜಿಸೇರೇಕೆ?"

"ಬೂನಾ, ಅವಳು ನಿರಪರಾಧಿಯು. ನಾನು ಆಗ ರೂಪಾಂಧನಾದ್ದರಿಂದ ನಿಷ್ಕಲಂಕಳೂ ಸಚ್ಚರಿತಳೂ ಆದ ಭೂಪಬಾಲೆಯನ್ನು-ನನ್ನ ಆಯುಷ್ಯದ ಸೌಖ್ಯಮಯ ರತ್ನವನ್ನು-ತ್ಯಜಿಸಿ, ಥಳಥಳಿಸುವ ಲಾವಣ್ಯರಾಶಿಗೆ ಮೋಹಿತನಾದೆನು."

"ಈಗ ಆ ವಿಷಯದ ನೆನಪನ್ನೇಕೆ ತೆಗೆಯುವಿರಿ?"

"ಬೂನಾ, ನನ್ನಂತಹ ದುಃಖಿತನು ಈ ಜಗತ್ತಿನಲ್ಲಿ ಯಾರೂ ಇರಲಿಕ್ಕಿಲ್ಲ ಕಂಡಿಯಾ! ನಾನು ಯಾರನ್ನು ಪ್ರೀತಿಸುತ್ತ ಬಂದೆನೋ ಅವರು ನನ್ನನ್ನು ತ್ಯಜಿಸಿದರು. ಬಹಳ ದೂರವೇಕೆ? ಸನಾತನ ಧರ್ಮದಲ್ಲಿ ನಾನು ಎಷ್ಟು ನಿಷ್ಠೆಯುಳ್ಳವನಿದ್ದೆನೆಂಬದು ನಿನಗೆ ಗೊತ್ತಿರುವದಿಲ್ಲವೆ? ಅದನ್ನು ತ್ಯಜಿಸುವ ಪ್ರಸಂಗವು ಸಹ ನನಗೊದಗಿದ ಮೇಲೆ ನನ್ನಂತಹ ದುಃಖಿಗಳು ಜಗತ್ತಿನಲ್ಲಿ ದೊರೆಯಬಹುದೆ? ಇನ್ನು ನನಗೆ ಜಗತ್ತಿನಲ್ಲಿ ಯಾವ ಆಧಾರಗಳಿರುವವು? ಮಿತ್ರನೂ ಸೇವಕನೂ ನೀನೇ ಎಂದು ತಿಳಿದು, ನಾನು ಸಂಭ್ರಮಗೊಂಡಿದ್ದೆನು; ಆದರೆ ಈಗ ನಿನ್ನನ್ನು ಕೂಡ ತ್ಯಜಿಸಬೇಕಾಗಿದೆ."

ಕಾಲಾಚಾಂದನ ಮಾತುಗಳನ್ನು ಕೇಳಿ ಬೂನಾನು ದುಃಖಿತನಾದನು. ಅವನ ಕಣ್ಣುಗಳು ದುಃಖಬಾಷ್ಪಗಳಿಂದ ತುಂಬಿದವು ಆಗ ಅವನು ದುಃಖ ವಿಸ್ಮಯುಗಳಿಂದ —"ನನ್ನಲ್ಲಿ ಯಾವ ಅಪರಾಧಗಳೂ ಇಲ್ಲದೆ ನೀವು ನನ್ನನ್ನು ತ್ಯಜಿಸುವಿರಾ?"

"ಬೂನಾ, ನಮ್ಮಿಬ್ಬರ ಧರ್ಮಗಳು ಈಗ ಬೇರೆಯಾಗಿರುವವು. ನನ್ನ ನಿನ್ನ ಧರ್ಮಗಳು ಪರಸ್ಪರ ವಿರೋಧಿಯಾಗಿರುವವು; ಆದ್ದರಿಂದ ನೀನು ನನ್ನ ಬಳಿಯಲ್ಲಿರಲಿಕ್ಕೆ ಬರುವದಿಲ್ಲ."

"ಪ್ರಭುಗಳೆ, ನೀವು ನನ್ನನ್ನು ತ್ಯಜಿಸಬೇಡಿರಿ. ನಾನಾದರೂ ಮುಸಲಮಾನ ಧರ್ಮವನ್ನು ಆನಂದದಿಂದ ಸ್ವೀಕರಿಸುವೆನು"

"ಬೂನಾ, ನೀನೂ ಮುಸಲಮಾನ ಧರ್ಮವನ್ನು ಸ್ವೀಕರಿಸುವೆಯಾ? ಬೇಡ; ಸರ್ವಥಾ ಹಾಗೆ ಮಾಡಬೇಡ. ಪರಮ ಪವಿತ್ರವಾದ ಸನಾತನ ಧರ್ಮವನ್ನು ನೀನು ತ್ಯಜಿಸಬೇಡ."

"ಮಹಾರಾಜರೆ, ಯಾವ ಧರ್ಮದಲ್ಲಿದ್ದರೇನು? ಜಾತಿಗೆ ಭೇದ ವಾದರೂ ನೀತಿಗೆ ಭೇದವಿರುವದೆ? ನಾನು ಆನಂದದಿಂದ ಧರ್ಮಾಂತರ ಹೊಂದಲಿಕ್ಕೆ ಸಿದ್ಧನಿರುವೆನು."

ಕಾಲಾಚಾಂದನು ಬೂನಾನ ಮಾತಿಗೆ ಸಮ್ಮತಿಸಿದನು. ಕಾಜಿಯನ್ನು ಕರೆಯಿಸಿ ಅವನಿಗೆ ಯವನ ಧರ್ಮದೀಕ್ಷೆ ಕೊಡಿಸಬೇಕೆಂದು ಅವನು ನಿರ್ಧರಿಸಿದನು. ಅಷ್ಟರಲ್ಲಿ ಅವನ ಪತ್ನಿಯಾದ ದುಲಾರಿಯು ಅಲ್ಲಿಗೆ ಬಂದಳು. ಪತಿಯು ಇಸ್ಲಾಮೀ ಧರ್ಮಗ್ರಹಣ ಮಾಡಿದ್ದರಿಂದ ಅವಳಿಗೆ ಪುತ್ರೋತ್ಸವವಾದಂತಾಗಿತ್ತು! ಅವಳು ಪತಿಯ ಬಳಿಗೆ ಬಂದು: "ತಂದೆಯವರು ವಿಚಾರಗೃಹದಲ್ಲಿ ನಿಮ್ಮ ಮಾರ್ಗಪ್ರತೀಕ್ಷೆ ಮಾಡುತ್ತ ಕುಳಿತಿರುವರು. ನೀವು ಧರ್ಮಾಂತರ ಹೊಂದಿದ್ದರಿಂದ ಅವರಿಗೆ ಪರಮಾವಧಿ ಆನಂದವಾಗಿದೆ."

"ಕಮಲಸುಂದರಿ, ಅಲ್ಲಲ್ಲ; ದುಲಾರಿ, ಇದಕ್ಕೂ ಹೆಚ್ಚಿಗೆ ಆನಂದ ಹೊಂದುವ ಪ್ರಸಂಗಗಳು ಅನೇಕವಿರುವವು . ಮೂರ್ತಿಪೂಜಕನಾದ ಕಾಲಾಚಾಂದನು ಮೂರ್ತಿ ಭಂಜಕನಾಗಿ, ಹಿಂದು ಧರ್ಮದ ಮೇಲಿನ

ಸೇಡನ್ನು ಭಯಂಕರವಾದ ರೀತಿಯಿಂದ ತೀರಿಸಿಕೊಳ್ಳುವದನ್ನು ನೋಡುತ್ತ ನಿನ್ನ ತಂದೆಯವರು ಆನಂದಸಾಗರದಲ್ಲಿ ಲೋಲಾಡುವರು. ಕಂಡೆಯಾ?''

ಕಾಲಾಚಾಂದನ ಮಾತುಗಳನ್ನು ಕೇಳಿ ದುಲಾರಿಯ ಕೋಮಲವಾದ ಹೃದಯವು ನಡುಗಿತು! ಅಪಮಾನದಿಂದ ನೊಂದುಕೊಂಡ ಪತಿಯಿಂದ ಇನ್ನುಮೇಲೆ ಹಿಂದುಧರ್ಮವು ಗಂಡಾಂತರಕ್ಕೊಳಗಾಗುವದೆಂಬ ಭೀಷಣ ಚಿತ್ರವು ಅವಳ ಕಣ್ಣೆದುರಿಗೆ ಕಟ್ಟಿದಂತಾಯಿತು. ಆಗ ಅವಳು ವಿಷಣ್ಣಳಾಗಿ—''ನಾಥರೇ, ಇಸ್ಲಾಮೀ ಧರ್ಮವನ್ನು ಸ್ವೀಕರಿಸಿದರೇನಾಯಿತು? ಮುಹಮ್ಮದೀಯರು ಹಿಂದುಗಳ ಕಡುತರವಾದ ಹಗೆಗಳಾಗಬೇಕೆಂದು ಕುರಾಣದಲ್ಲಿ ಬರೆದಿರುವದೇನು?''

''ಪ್ರಿಯ ದುಲಾರಿ, ನಾನು ಇನ್ನು ಕುರಾಣ-ಪುರಾಣಗಳ ಕಡೆಗೆ ಲಕ್ಷ್ಯಗೊಡುವದಿಲ್ಲ. ಹಿಂದುಗಳು ನನ್ನ ಆಯುಷ್ಯವನ್ನು ಕೇವಲ ಅನ್ಯಾಯದಿಂದ ಹಾಳು ಮಾಡಿರುವರು. ಅನ್ಯಾಯಕ್ಕೆ ತಕ್ಕ ಪ್ರತಿಕಾರ ಮಾಡದಿದ್ದರೆ ಮನುಷ್ಯನಾಗಿ ಹುಟ್ಟಿದ್ದಕ್ಕೆ ಪ್ರಯೋಜನವೇನು? ನಾನು ಹಿಂದುಧರ್ಮದಲ್ಲಿ ಎಷ್ಟು ಪ್ರೀತಿ-ವಿಶ್ವಾಸಗಳನ್ನು ತಳೆದಿದ್ದೆನೋ, ಈಗ, ಅಷ್ಟೇ, ಕಿಂಬಹುನಾ ಅದಕ್ಕಿಂತ ಹೆಚ್ಚಾಗಿ ಹಗೆತನ ಮಾಡುವೆನು. ಅಪಮಾನದ ಭಯಂಕರ ಸೇಡನ್ನು ತೀರಿಸಿಕೊಳ್ಳದಿದ್ದರೆ ನನ್ನ ಪೌರುಷವೇನು?''

ದುಲಾರಿಯು ಪತಿಯ ಮಾತಿಗೆ ಉತ್ತರ ಕೊಡಲಸಮರ್ಥಳಾಗಿ ಸುಮ್ಮನೆ ಕುಳಿತಳು. ಅನಂತರದಲ್ಲಿ ಕಾಲಾಚಾಂದನು ಸುಲತಾನನಿಗೆ ಭೆಟ್ಟಿಯಾಗಿ, ಆನಂದದಾಯಕ ಸಮಾಚಾರಗಳನ್ನು ತಿಳಿಸಬೇಕೆಂಬ ಉತ್ಸುಕತೆಯಿಂದ ವಿಚಾರಗೃಹದ ಕಡೆಗೆ ತೆರಳಿದನು.

ಸಲಿಮನ ಸುಲತಾನನು ಮುಹಾಮಂತ್ರಿಯಾದ ಖಾನಜಹಾನ ಲೋಡಿ ಹಾಗು ಸೇನಾಪತಿಯಾದ ಕಾತಲೂಖಾನ ಇವರೊಡನೆ ಮಾತನಾಡುತ್ತ ಕುಳಿತಿದ್ದನು. ತನ್ನ ಜಾಮಾತನು ಮುಹಮ್ಮದೀಯ ಧರ್ಮಸ್ವೀಕಾರ ಮಾಡಿದ್ದರಿಂದ ಅವನು ಹರ್ಷನಿರ್ಭರನಾಗಿದ್ದನು. ಪರಾಕ್ರಮಿಯೂ ಸಾಹಸಿಯೂ ಆದ ಕಾಲಾಚಾಂದನನ್ನು ಸೇನಾಪತಿಯ ಕೆಲ

ಸದ ಮೇಲೆ ನಿಯಮಿಸಬೇಕೆಂದು ಅವನ ಮನಸ್ಸಿನಲ್ಲಿ ಬಂದಿತ್ತು. ಅವನನ್ನು ಸೇನಾನಾಯಕನ ಸ್ಥಳದಲ್ಲಿ ನಿಯಮಿಸಿದರೆ ವಂಗರಾಜ್ಯವು ಅಭ್ಯುದಯ ಹೊಂದುವದೆಂದು ಖಾನಜಹಾನನೂ ಅಭಿಪ್ರಾಯಪಿತ್ತನು. ನಾಮಾಂಕಿತ ಶೂರನಾದ ಕಾಲಾಚಾಂದನ ಸಹಾಯದಿಂದ ತನ್ನ ಪರಾಕ್ರಮದ ಬೆಳಕಾದರೂ ಚೆನ್ನಾಗಿ ಬೀಳುವದೆಂದು ತಿಳಿದು, ಕಾತಲೂಖಾನ ಸೇನಾಪತಿಯೂ ಅವನನ್ನು ಸೇನಾಪತಿಯ ಸ್ಥಳದಲ್ಲಿ ನಿಯಮಿಸುವ ವಿಷಯದಲ್ಲಿ ಸುಲತಾನನಿಗೆ ಅನುಕೂಲವಾಗಿ ಅಭಿಪ್ರಾಯಪಿತ್ತನು. ಅಷ್ಟರಲ್ಲಿ ಕಾಲಾಚಾಂದನೂ ಅಲ್ಲಿಗೆ ಬಂದು ನವಾಬನಿಗೆ ಮುಜುರೆ ಮಾಡಿ:-"ಶಾಹೆನ ಶಾಹ! ನಾನು ಇಸ್ಲಾಮಿ ಧರ್ಮವನ್ನು ಸ್ವೀಕರಿಸಿ, ತಮ್ಮ ಚರಣದರ್ಶನಕ್ಕಾಗಿ ಬಂದಿರುವೆನು."

"ಕಾಲಾಚಾಂದ, ಈ ಸಂಗತಿಯನ್ನು ಕೇಳಿ ನನಗೆ ಬಹಳೇ ಆನಂದವಾಗಿರುವದು. ಇಂದಿನಂಥ ಆನಂದವನ್ನು ನಾನು ಇಡೀ ಜನ್ಮದಲ್ಲಿ ಅನುಭವಿಸಿದ್ದಿಲ್ಲ. ಇಂದಿನ ಆನಂದದ ಸ್ಮಾರಕಕ್ಕಾಗಿ ನಿನಗೆ ದೊಡ್ಡ ಪಾಂತೋಷಕ ಕೊಡುವೆನು; ಹಾಗು ಜಹಾಗೀರನ್ನು ನಿನಗೆ ಅರ್ಪಿಸುವೆನು."

"ಬಂಗಾಲದ ಬಾದಶಹರಾದ ನಿಮ್ಮ ಕೃಪೆಯಾದರೆ ನಾನು ನಿಶ್ಚಯವಾಗಿ ಅಭ್ಯುದಯ ಹೊಂದುವೆನು."

"ಇಂದಿನಿಂದ ನಾನು ನಿನಗೆ ಐದುಸಾವಿರ ಸೈನ್ಯದ ಆಧಿಪತ್ಯವನ್ನು ಕೊಟ್ಟಿರುವೆನು."

"ನವಾಬರೆ, ಸೈನ್ಯವನ್ನು ತೆಗೆದುಕೊಂಡು ನಾನು ಮಾಡುವದೇನು? ಅದಕ್ಕೆ ಕೆಲಸವು ಬೇಕಲ್ಲವೆ?"

"ಪ್ರಸಂಗಾನುಸಾರವಾಗಿ ಆ ಸೈನ್ಯದ ಯೋಜನೆ ಮಾಡು."

"ನಾನು ಉತ್ಕಲದೇಶದ ಮೇಲೆ ದಂಡೆತ್ತಿ ಹೋಗಬೇಕೆನ್ನುವೆನು."

"ಕಾಲಾಚಾಂದ, ಓರಿಸಾ ದೇಶದ ಮೇಲೆ ದಾಳಿ ಮಾಡುವದು ಸಾಧ್ಯವಲ್ಲ"

"ಖಾವಿಂದ, ಇದರಲ್ಲಿ ಅಸಾಧ್ಯವೇನಿರುವದು? ಐದುಸಾವಿರ

ಸೈನ್ಯವು ಕೈಯಲ್ಲಿ ದೊರೆತ ಮೇಲೆ ಈ ಕಾರ್ಯವು ಅಸಾಧ್ಯವೆಂದು ಹೇಗೆ ತಿಳಿಯುವಿರಿ?''

"ನಾನು ಹಿಂದಕ್ಕೊಮ್ಮೆ ಮುಕುಂದದೇವನ ಮೇಲೆ ದಂಡೆತ್ತಿ ಹೋಗಿದ್ದೆನು. ಆಗ ಜೀವವುಳಿಸಿಕೊಂಡು ಬರಬೇಕಾದರೆ ನನಗೆ ಸಾಕು ಸಾಕಾಗಿ ಹೋಯಿತು. ಓರಿಸಾ ದೇಶವು ಸಂಘಟಿತ ಶಕ್ತಿಯುಳ್ಳದ್ದಿರುವದು. ಅಲ್ಲಿ ಒಳಜಗಳಗಳು ಹುಟ್ಟಿದರೆ ಮಾತ್ರ ಏನಾದರೂ ಉಪಯೋಗವಾಗಬಹುದು; ಹಾಗಾಗದಿದ್ದರೆ ಪ್ರತ್ಯಕ್ಷ ದಿಲ್ಲೀಶ್ವರನಿಗಾದರೂ ಅಲ್ಲಿ ಯಶವು ದೊರೆಯಲಾರದು.''

"ಜಹಂಪನಾಹ, ನಿಮ್ಮ ಮಾತುಗಳನ್ನು ನಾನು ಅಲ್ಲಗಳೆಯಲಾರೆನು. ನನ್ನ ಪ್ರತಾಪವನ್ನು ತೋರಿಸಬೇಕೆಂಬ ಕುತೂಹಲವು ನನ್ನಲ್ಲುಂಟಾಗಿದೆ. ಈ ನನ್ನ ಮಹತ್ವಾಕಾಂಕ್ಷೆಯು ಈಡೇರುವದಕ್ಕೆ ಓರಿಸಾ ದೇಶವು ಯೋಗ್ಯವಾದ ಕ್ಷೇತ್ರವೆಂದು ನಾನು ನಿರ್ಧರಿಸಿರುವೆನು. ನೀವು ಓರಿಸಾ ದೇಶಕ್ಕೆ ಅಷ್ಟೊಂದು ಮಹತ್ವ ಕೊಡಬೇಡಿರಿ. ಇಸ್ಮಾಯಿಲ ಗಾಜಿಯು ಓರಿಸಾದ ಕೃಷ್ಣರಾಯನ ಮೇಲೆ ದಂಡೆತ್ತಿ ಹೋಗಿ ವಿಜಯಸಂಪಾದನೆ ಮಾಡಲಿಲ್ಲವೆ?''

"ಕಾಲಾಚಾಂದ, ಕೃಷ್ಣರಾಯನಿಲ್ಲದಾಗ ಇಸ್ಮಾಯಿಲ ಗಾಜಿಯು ಕಳ್ಳನಂತೆ ಪುರಿಯನ್ನು ಸೇರಿ, ಅಲ್ಲಿ ಕೊಲೆ ಸುಲಿಗೆ ಮಾಡಿದನು. ಕೃಷ್ಣರಾಯನು ಆಗಿಂದಾಗ ಅಲ್ಲಿಗೆ ಬಂದು ಅವನನ್ನು ಹಿಂದಕ್ಕಟ್ಟಿದನು. ಈಗ ಓರಿಸಾ ದೇಶವನ್ನು ಪ್ರವೇಶಿಸುವದು ಸಹ ಅಸಾಧ್ಯವಿರುವದು. ಆ ದೇಶದಲ್ಲಿಯು ಶೂರ ದಂಡಾಳುಗಳು ಅಜೇಯರಿರುವರು. ಅನಂತರ ವೀರರೂ ಸಾಹಸಿಗಳೂ ಬಂಗಾಲದಲ್ಲಿ ದೊರೆಯುವದಿಲ್ಲ. ಉತ್ಕಲ ದೇಶವು ಅಜಿಂಕ್ಯವಿರುವದೆಂಬದು ಇವತ್ತು ನಿನ್ನಿನ ಮಾತಲ್ಲ. ಮೂರು ನೂರು ವರ್ಷಗಳ ಇತಿಹಾಸವು ಇದೇ ಮಾತನ್ನು ಹೇಳುತ್ತಿರುವದು. ಮೂರು ನೂರು ವರ್ಷಗಳಿಂದ ಎಷ್ಟೋ ತಾರ್ತರೀ ಭಟರೂ ಎಷ್ಟೋ ಸುಲತಾನರೂ ಎಷ್ಟೋ ಬಾದಶಹರೂ ಓರಿಸಾದ ಮೇಲೆ ದಾಳಿ ಮಾಡಿ ಭಗ್ನಮನೋರಥರಾದರು. ಓರಿಸಾ ದೇಶವನ್ನು ಜಯಿಸುವದು ಅಸಂಭವ

ನೀಯುವೆಂದು ಎಲ್ಲ ಜನರಿಗೆ ನಂಬಿಗೆಯಾಗಿರುವದು.''

''ವಸ್ತುಸ್ಥಿತಿಯು ಹೇಗಿದ್ದರೂ ಪ್ರಯತ್ನಮಾಡಿ ನೋಡಲಿಕ್ಕೆ ಅಡ್ಡಿಯೇನಿರುವದು?''

''ಕಾಲಾಚಾಂದ, ಕಾಲುಕೆದರಿ ಜಗಳ ತೆಗೆದು ಹಿಂದಿನಿಂದ ಅಪಜಯವಾದರೆ ಆ ಅಪಮಾನವನ್ನು ನಾನು ಸಹಿಸಲಾರೆನು.''

ಸುಲತಾನನ ಮಾತುಗಳನ್ನು ಕೇಳಿ ಕಾಲಾಚಾಂದನು ವಿಚಾರಕ್ಕೊಳಗಾದನು. ಸುಲತಾನನ ಮನಸ್ಸನ್ನು ಸಂತುಷ್ಟಗೊಳಿಸಬೇಕೆಂದು ಅವನು ಬಹು ವಿಧವಾಗಿ ಯತ್ನಿಸಿದನು. ಪ್ರಸಂಗಾನುಸಾರವಾಗಿ ವಿಚಾರ ಮಾಡೋಣವೆಂದು ಸುಲತಾನನು ಆಗ ಕಾಲಾಚಾಂದನಿಗೆ ಹೇಳಿದನು.

''ಖಾವಿಂದ, ನೀವು ಹೀಗೆ ಔದಾಸೀನ್ಯ ತಳೆಯುವದು ನನಗೆ ಸರಿಯಾಗಿ ತೋರುವದಿಲ್ಲ. ನಿಮ್ಮ ನಾಶಕ್ಕಾಗಿ ದಿಲ್ಲೀಶ್ವರನಾದ ಅಕಬರನು ಹೊಂಚುಹಾಕಿರುವನಷ್ಟೆ? ಈಗ ಅವನು ಮುಕುಂದದೇವನೊಡನೆ ಗುಪ್ತವಾಗಿ ಒಪ್ಪಂದ ಮಾಡಿಕೊಂಡು, ತನ್ನ ಬಲವನ್ನು ಹೆಚ್ಚಿಸಿಕೊಳ್ಳುವದಕ್ಕೆ ಸಾಹಸ ಮಾಡುತ್ತಿರುವನು. ನಾವು ಮುಕುಂದದೇವನನ್ನು ನಾಶಗೊಳಿಸದಿದ್ದರೆ ಬಂಗಾಲದ ಪಾಡು ಒಳಿತಾಗಲಾರದು.''

''ದಿಲ್ಲಿಯ ಬಾದಶಹನು ಮುಕುಂದದೇವನೊಡನೆ ಗುಪ್ತವಾಗಿ ಒಪ್ಪಂದ ಮಾಡಿಕೊಂಡ ಸಂಗತಿಯು ನಿಜವೆ?''

''ಈ ಮಾತಿನಲ್ಲಿ ಸಂಶಯವಿಲ್ಲ. ಮುಕುಂದದೇವನು ಅಕಬರನೊಡನೆ ಒಳಸಂಚು ನಡೆಯಿಸಿದ ವಾರ್ತೆಯೂ ಬಂದಿರುವದು. ದಿಲ್ಲಿಯಿಂದ ಪುರಿಗೂ, ಪುರಿಯಿಂದ ದಿಲ್ಲಿಗೂ ಗುಪ್ತಚರರು ಎಡತಾಕತೊಡಗಿರುವರು. ಈ ಒಳಸಂಚಿನ ಸಲುವಾಗಿ ದಿಲ್ಲಿಯಿಂದ ಪುರಿಗೆ ಗುಪ್ತಚರರ ನಾಯಕನಾದ ಹಸನಖಾನನು ಹೋಗಿದ್ದನಂತೆ.''

ಕಾಲಾಚಾಂದನ ಮಾತುಗಳನ್ನು ಕೇಳಿ ಸುಲತಾನನು ವಿಚಾರಕ್ಕೊಳಗಾದನು. ಬೇಡವೆನ್ನುತ್ತಿದ್ದರೂ ಯುದ್ಧದ ಪ್ರಸಂಗವು ಬರತೊಡಗಿದ್ದರಿಂದ ಅವನ ಮನಸ್ಸು ತೊಂದರೆಗೊಳಗಾಯಿತು. ಒರಿಸಾದಂತಹ ಪ್ರಬಲ ರಾಷ್ಟ್ರದೊಡನೆ ಹೋರಾಡುವದು ಸಾಮಾನ್ಯ ಸಂಗತಿಯಲ್ಲ.

ವೆಂಬದು ಗೊತ್ತಿದ್ದದರಿಂದ ಅವನು ಗೊಂದಲದಲ್ಲಿ ಬಿದ್ದಿದ್ದನು. ನವಾಬನು ವಿಚಾರಕ್ಕೊಳಗಾದದ್ದನ್ನು ನೋಡಿ ಕಾಲಾಚಾಂದನು ಅವನನ್ನು ಕುರಿತು:—“ಖಾವಿಂದ, ಯುದ್ಧಪ್ರಸಕ್ತಿಗಾಗಿ ಅಂಜುವಂತಹ ಬಲಹೀನ ಸ್ಥಿತಿಗೆ ನಮ್ಮ ವಂಗದೇಶವು ಬಂದಿರುವದಿಲ್ಲ. ಮುಕುಂದದೇವನಾಗಲಿ, ಅಕಬರಬಾದಶಹನಾಗಲಿ ದಂಡೆತ್ತಿ ಬರುವದಕ್ಕಿಂತ ಮುಂಚಿತವಾಗಿಯೇ ನಾವು ಅವರ ರಾಜ್ಯದಲ್ಲಿ ನುಗ್ಗುವದು ಒಳಿತು.”

“ಓರಿಸಾದ ಮೇಲೆ ಮೊದಲು ದಂಡೆತ್ತಿ ಹೋಗುವದು ಲೇಸು.”

ಕಾತಲೂಖಾನನು ಹೀಗೆ ನುಡಿದ ಕೂಡಲೆ ಖಾನಜಹಾನಲೋಡಿಯು ವಂಗದೇಶದ ಮುಖ್ಯಮಂತ್ರಿಯು-ಸುಲತಾನನನ್ನು ಕುರಿತು:—“ಹುಜೂರ, ಮಲಗಿದ ಸಿಂಹನನ್ನು ಎಬ್ಬಿಸುವದು ಒಳಿತಲ್ಲವೆಂದು ನನ್ನ ಮತವಿರುವದು.”

“ಮಂತ್ರಿಗಳೇ, ಓರಿಸಾದ ಮೇಲೆ ದಂಡೆತ್ತಿ ಹೋಗಬೇಕಾದರೆ ಇಷ್ಟು ಅಂಜಬೇಕೇಕೆ? ನಿಮ್ಮ ಕಲ್ಪನೆಯೇ ತಪ್ಪಾದದ್ದಿರುವದು. ಮುಕಂದದೇವನು ಅಷ್ಟೊಂದು ಬಲಾಢ್ಯನಲ್ಲ” ಎಂದು ಕಾಲಾಚಾಂದನು ಮಂತ್ರಿಗೆ ಹೇಳಿ, ಸುಲತಾನನನ್ನು ಕುರಿತು:—“ಜಹಾಂಪನಾಹ, ನೀವು ಮುಂಗೇರಾದಲ್ಲಿ ದಿಲ್ಲೀಶ್ವರನೊಡನೆ ಕಾದಲಿಕ್ಕೆ ಹಿಂಜರಿಯಲಿಲ್ಲ; ಬಿಹಾರದ ಮೇಲೆ ದಂಡೆತ್ತಿ ಹೋಗಿ ವಿಜಯ ಸಂಪಾದನೆ ಮಾಡಿರುವಿರಿ. ಇಂತಹ ಅಜೇಯರಾದ ನೀವು ಓರಿಸಾದ ಹೆಸರು ಕೇಳಿದ ಕೂಡಲೆ ಹೆದರತೊಡಗಿರುವಿರಿ! ನಿಮ್ಮ ಖಡ್ಗಗಳ ಮೇಲಿನ ವಿಶ್ವಾಸವು ಈಗ ಹಾರಿರುವದೇನು? ಮುಂಗೈಯ ಶಕ್ತಿಯೂ ಆತ್ಮವಿಶ್ವಾಸವೂ ಮನೋಧೈರ್ಯವೂ ನಾಶವಾಗಿರುವದೇನು? ಓರಿಸಾದ ಮೇಲೆ ದಾಳಿಮಾಡಿ ವಿಜಯಸಂಪಾದನೆ ಮಾಡಲಿಕ್ಕೆ ಈ ಕಾಲಾಚಾಂದನು ಸಿದ್ಧನಿರುವನು. ವಿಚಾರಕ್ಕೊಳಗಾಗದೆ ಅಪ್ಪಣೆಯನ್ನು ಕೊಡಿರಿ.”

“ಕಾಲಾಚಾಂದರಾಯ, ನಾನು ಯುದ್ಧಕ್ಕೆ ಅಂಜುವದಿಲ್ಲ. ಕೀರ್ತಿಗಾಗಿ ಸಾಯುವದಕ್ಕೆ ನಾನು ಹಿಂದೆ ಮುಂದೆ ನೋಡುವದಿಲ್ಲ. ಭಾವೀ ಯುದ್ಧದ ಸೇನಾಪತಿಯ ಕೆಲಸವನ್ನು ನಿನಗೇ ಕೊಡಬೇಕೆಂದು ನನ್ನ

ನಿಶ್ಚಯವಿರುವದು. ನೀನು ಎಷ್ಟು ಸೈನ್ಯದಿಂದ ಓರಿಸಾಪ್ರಾಂತವನ್ನು ಜಯಿಸುವೆ?''

''ನೀವು ಎಷ್ಟು ಸೈನ್ಯವನ್ನು ಕೊಡಬೇಕೆಂದು ನಿಶ್ಚಯಿಸಿರುವಿರಿ?''

''ಒಂದು ಲಕ್ಷಕ್ಕಿಂತ ಹೆಚ್ಚು ಸೈನ್ಯವು ಈ ವೇಳೆಯಲ್ಲಿ ನಿನಗೆ ದೊರೆಯಲಾರದು. ನಿನ್ನ ಸಹಾಯಕ್ಕೆ ಕಾತಲೂಖಾನ ಸೇನಾಪತಿಯನ್ನು ಕೊಡುವೆನು.''

''ಏನೂ ಅಡ್ಡಿಯಿಲ್ಲ. ಒಂದು ಲಕ್ಷ ಸೈನ್ಯದ ಸಹಾಯವಿದ್ದರೆ ಇಡೀ ಭರತಖಂಡವನ್ನು ಕೈವಶಪಡಿಸಿಕೊಳ್ಳಬಹುದು.''

''ಕಾಲಾಚಾಂದ!' ನವಾಬನು ಉತ್ತೇಜಿತ ಸ್ವರದಿಂದ—''ನೀನು ಹಿಂದುವಿದ್ದು ಹಿಂದುರಾಜ್ಯದ ನಾಶಮಾಡಲಿಕ್ಕೆ ಪ್ರವೃತ್ತನಾದದ್ದನ್ನು ನೋಡಿ ನನಗೆ ಪರಮಾನಂದವಾಯಿತು!''

''ಖಾವಿಂದ ನಾನು ಈಗ ಹಿಂದುವಲ್ಲ; ಧರ್ಮನಿಷ್ಠ ಮುಹಮ್ಮದೀಯನಿರುವೆನು.''

''ಬಹೂತ ಅಚ್ಛಾ! ಕಾಲಾಚಾಂದರಾಯ, ನಿನ್ನ ಪ್ರವೃತ್ತಿಯನ್ನು ನೋಡಿ ನನಗೆ ಪರಮಾನಂದವಾಯಿತು. ನಾನು ನಿನಗೆ **ಕಾಳಾಪಹಾಡ** ಎಂಬ ಪದವಿಯನ್ನು ಅರ್ಪಿಸಿರುತ್ತೇನೆ. ನಿನ್ನ ಈ ಕಾಳಾಪಹಾಡವೆಂಬ ಪದವಿಯು ಬಂಗಾಲದ ಇತಿಹಾಸದಲ್ಲಿ ಅಜರಾಮರವಾಗಬೇಕೆಂದು ಖುದಾನನ್ನು ಅನನ್ಯಭಾವದಿಂದ ಪ್ರಾರ್ಥಿಸುವೆನು.'

**ಕಾಲಾಚಾಂದನಿಗೆ ಕಾಳಾಪಹಾಡ** ಎಂಬ ಪದವಿಯಿಂದ ಬಹಳೇ ಆನಂದವಾಯಿತು.



# ನೀನು ನನ್ನೊಡನೆ ಬರುವೆಯಾ?

ಸಾಂತೋಡೆಯಿಂದ ಮನೋಭಂಗ ಹೊಂದಿ ಹೊರಟ ವ್ರಜಬಾಲೆಯು ತನ್ನ ಸಹಚರಿಯಾದ ಉಷಾಸುಂದರಿಯೊಡನೆ ಜಗನ್ನಾಥಪುರಿಗೆ ಬಂದಳು. ಜಗನ್ನಾಥನ ಸೇವೆಯಲ್ಲಿ ಕಾಲಕಳೆಯಬೇಕೆಂಬ ಅವಳ ಸಾತ್ವಿಕ ಭಾವನೆಯು ಲುಪ್ತಪ್ರಾಯವಾಗಿತ್ತು. ತನ್ನ ಸೌಖ್ಯವನ್ನು ನಾಶ ಮಾಡಿದ ಕಾಲಾಚಾಂದನ ಮೇಲಿನ ಸೇಡು ತೀರಿಸಿಕೊಳ್ಳಬೇಕೆಂದು ಅವಳು ಮಹತ್ವಾಕಾಂಕ್ಷೆ ತಳೆದಿದ್ದಳು. ಅವಳು ಪುರಿಯ ಸಮೀಪದಲ್ಲಿ ಸಮುದ್ರತೀರದ ಮೇಲೆ ಒಂದು ಗುಡಿಸಲಲ್ಲಿ ಇರತೊಡಗಿದ್ದಳು. ತನ್ನ ವೈರಿಯ ಮೇಲಿನ ಸೇಡನ್ನು ಹೇಗೆ ತೀರಿಸಿಕೊಳ್ಳಬೇಕೆಂದು ಅವಳು ನಾನಾ ವಿಧವಾಗಿ ಯತ್ನಿಸತೊಡಗಿದ್ದಳು. ಜಗನ್ನಾಥನ ಆರಾಧನೆಯಲ್ಲಿ ಕಾಲಕಳೆಯಬೇಕೆನ್ನುವ ಉಷಾಸುಂದರಿಯ ಮನಸ್ಸನ್ನು ಅವಳು ರಾಜಕಾರಣದಲ್ಲಿ ತೊಡಗಿಸಬೇಕೆಂದು ಯತ್ನಿಸಲಾರಂಭಿಸಿದ್ದಳು. ಉಷಾಸುಂದರಿಯು ಅತ್ಯಂತ ಭೀರುವಾಗಿದ್ದಳು. ಯುದ್ಧ, ರಕ್ತಪಾತ, ಕೊಲೆ ಮೊದಲಾದ ವಿಷಯಗಳನ್ನು ಕೇಳಿದ ಕೂಡಲೆ ಅವಳ ಹೃದಯವು ನಡುಗುತ್ತಿತ್ತು. ಅಂತಹಳನ್ನು ತನ ದಾರಿಗೆ ತರುವದು ಮಹತ್ಪ್ರಯಾಸವೆಂದು ವ್ರಜಬಾಲೆಗೆ ಗೊತ್ತಾಗಿದ್ದರೂ, ಅವಳು ಸಾಧ್ಯವಿದ್ದಷ್ಟು ಸಾಹಸಮಾಡಬೇಕೆಂದು ನಿರ್ಧರಿಸಿದ್ದಳು. ಕಾಲಾಚಾಂದನು ಯವನಿಯನ್ನು ವಿವಾಹವಾಗಿ ಜಾತಿಭ್ರಷ್ಟನಾದ ಮೇಲಂತೂ ವ್ರಜಬಾಲೆಯ ಸೇಡಿನ ಭಾವನೆಯು ಮತ್ತಷ್ಟು ಜಾಗ್ರತವಾಗಿತ್ತು. ಸಮಾಜಬಹಿಷ್ಕೃತನಾದ ಕಾಲಾಚಾಂದನ ಮೇಲಿನ ಸೇಡು ತೀರಿಸಿಕೊಳ್ಳುವದಕ್ಕೆ ತನಗೆ ಲೋಕಾಶ್ರಯವು ದೊರೆಯಬಹುದೆಂದು ಅವಳು ಭಾವಿಸಿಕೊಂಡಿದ್ದಳು. ಪ್ರತಿಯೊಂದು ಕಾರ್ಯದಲ್ಲಿ ಕಾಲಾಚಾಂದನಿಗೆ ಕಂಟಕಪ್ರಾಯಳಾಗಬೇಕೆಂದು ವ್ರಜಬಾಲೆಯು ನಿಶ್ಚಯಿಸಿಕೊಂಡಳು. ಕಾಲಾಚಾಂದನು ಪುರಿಗೆ ಬಂದಾಗ ಮುಕುಂದದೇವನ ಮನಸ್ಸಿನ ಮೇಲೆ ಪರಿಣಾಮಕಾರಕ ವಾಗುವಂತೆ ಭಾಷಣ ಮಾಡಿ, ಅವಳು ತನ್ನ ಪ್ರತಿಸ್ಪರ್ಧಿಯನ್ನು ಮುಖಭಂಗಿತನನ್ನಾಗಿ ಮಾಡಿದ್ದಳು.

ಅವನ ಮೇಲಿನ ಸೇಡು ತೀರಿಸಿಕೊಳ್ಳಲಿಕ್ಕೆ ಪುರಿಯು ಯೋಗ್ಯವಾದ ಕಾರ್ಯಕ್ಷೇತ್ರವಿರುವದೆಂದು ಅವಳ ಭಾವನೆಯಾಗಿತ್ತು. ಹೇಗಾದರೂ ಮಾಡಿ ಮುಕುಂದದೇವನ ನೆರವು ಹೊಂದಿ, ವೈರಿಯನ್ನು ನಾಶಗೊಳಿಸ ಬೇಕೆಂಬ ರಾಕ್ಷಸೀ ಮಹತ್ವಾಕಾಂಕ್ಷೆಯು ಅವಳಲ್ಲಿ ಉದಯವಾಗಿ, ರಭಸದಿಂದ ಬೆಳೆಯಲಾರಂಭಿಸಿತ್ತು.

ಮುಕುಂದದೇವನು ಅತ್ಯಂತ ವಿಲಾಸಿಯಿದ್ದನೆಂದು ಹಿಂದೆ ಹೇಳಿದೆ ಯಷ್ಟೆ? ಓಲಗದಲ್ಲಿ ವ್ರಜಬಾಲೆಯ ದರ್ಶನವಾದಂದಿನಿಂದ ಅವನು ಆ ಲಾವಣ್ಯಲತಿಕೆಯ ಆರಾಧನೆ ಮಾಡಹತ್ತಿದ್ದನು. ತಾನು ಅಸಂಖ್ಯ ರಾಣಿಯರನ್ನು ಸಂಗ್ರಹಿಸಿದ್ದು. ಅವರಲ್ಲಿ ವ್ರಜಬಾಲೆಯನ್ನು ಸರಿಗಟ್ಟು ವಂತಹಳು ಒಬ್ಬಳೂ ಇಲ್ಲದ್ದರಿಂದ ಮುಕುಂದ ದೇವನು ಬಹಳೇ ಕ್ಲೇಶ ಗೊಂಡನು. ಯುಕ್ತಿಪ್ರಯುಕ್ತಿಗಳಿಂದ ವ್ರಜಬಾಲೆಯನ್ನು ತನ್ನ ಅಂತಃ ಪುರದಲ್ಲಿ ಸೇರಿಸಿಕೊಳ್ಳಬೇಕೆಂದು ಅವನು ಸಾಹಸ ನಡೆಯಿಸಿದ್ದನು. ವೈಭವಶಾಲಿ ನರೇಶನಾದ ತನ್ನ ಒಂದೇ ಮಾತಿಗೆ ಒಪ್ಪಿ, ವ್ರಜಬಾಲೆಯು ಆನಂದದಿಂದ ತನ್ನ ಸನ್ನಿಧಿಗೆ ಬರುವಳೆಂದು ಅವನು ತಿಳಿದಿದ್ದನು. ಅಲ್ಪಾವಧಿಯಲ್ಲಿ ಅವನ ಈ ಅಹಂಕಾರವು ನಿವೃತ್ತಿಯನ್ನು ಹೊಂದಿತು. ಅವನು ವ್ರಜಬಾಲೆಯನ್ನು ಕರೆತರುವದಕ್ಕಾಗಿ ಪಲ್ಲಕ್ಕಿಯನ್ನು ಕಳುಹಿಸಿದ್ದನು; ಕುಲಯುವತಿಯಾದ ತಾನು ಅರಮನೆಯಲ್ಲಿರಲಾರೆನೆಂದು ಅವಳು ಮುಕುಂದದೇವನಿಗೆ ಹೇಳಿಕಳುಹಿದಳು ವ್ರಜಬಾಲೆಯ ಉತ್ತರದಿಂದ ಮುಕುಂದದೇವನಿಗೆ ಸೋಜಿಗವಾಯಿತು. ಹೇಗಾದರೂ ಮಾಡಿ ಅವಳ ಮನಸ್ಸನ್ನು ಒಲಿಸಿಕೊಳ್ಳಬೇಕೆಂದು ಅವನು ವ್ರಜಬಾಲೆಯ ಕಡೆಗೆ ಬಹು ಮೌಲ್ಯವಾದ ವಸ್ತ್ರಗಳನ್ನೂ ರತ್ನಾಲಂಕಾರಗಳನ್ನೂ ಕಳುಹಿಸಿ ಕೊಟ್ಟನು. ವ್ರಜಬಾಲೆಗೆ ಈಗ ಯಾವ ಆಶೆಯೂ ಇದ್ದಿಲ್ಲ; ಕೇವಲ ಸೇಡು ತೀರಿಸಿಕೊಳ್ಳುವ ಭಾವನೆಯಿಂದ ಅವಳು ಬದುಕಿಕೊಂಡಿದ್ದಳೆಂದು ಹೇಳಲಿಕ್ಕೆ ಪ್ರತ್ಯವಾಯವಿಲ್ಲ. ಅವಳು ಅರಸನ ಆ ಎಲ್ಲ ವಸ್ತ್ರಾಲಂಕಾರ ಗಳನ್ನು ತಿರುಗಿ ಕಳುಹಿಸಿ, ವನವಾಸಿಯಾದ ತನಗೆ ವಸ್ತ್ರಾಲಂಕಾರಗಳ ಅವಶ್ಯಕತೆಯಿಲ್ಲವೆಂದು ತಿಳಿಸಿದಳು. ಅವಳಿಗೆ ಮುಕುಂದದೇವನ

ಹೃದಯ ಚಿತ್ರವು ಸ್ಪಷ್ಟವಾಗಿ ಕಾಣತೊಡಗಿತ್ತು. ಯಾವನ ಸಹಾಯ ದಿಂದ ಕಾಲಾಚಾಂದನ ಸೇಡುತೀರಿಸಿಕೊಳ್ಳಬೇಕೆಂದು ಅವಳು ಇಚ್ಛಿಸಿದ್ದಳೋ, ಅವನೇ ತನ್ನ ಪ್ರಾಪ್ತಿಗಾಗಿ ಹಂಬಲಿಸತೊಡಗಿದ್ದನ್ನು ನೋಡಿ ಅವಳ ಉತ್ಸಾಹಭಂಗವಾಯಿತು. ಪುರಿಯಲ್ಲಿ ವಾಸವಾಗಿರುವದು ಅವಳಿಗೆ ಅತ್ಯಂತ ಅಸಹ್ಯವಾಯಿತು. ಕಾಲಾಚಾಂದನ ಸೇಡುತೀರಿಸಿಕೊಳ್ಳಬೇಕೆಂದು ಮುಕುಂದದೇವನಲ್ಲಿ ತಾನಾಗಿ ವಿಜ್ಞಾಪನೆ ಮಾಡಿಕೊಳ್ಳ ಹೋದರೆ, ಅದರ ಪರಿಣಾಮವು ಒಳಿತಾಗಲಾರದೆಂದು ಅವಳ ಭಾವನೆಯಾಯಿತು. ಶೂರನೂ ಸಾಹಸಿಯೂ ಆದ ಮುಕುಂದದೇವನು ಅತಿ ಕಾಮಿಯಾಗಿರದಿದ್ದರೆ, ಅವನು ಲಬ್ಧಪ್ರತಿಷ್ಠನಾಗುತ್ತಿದ್ದನೆಂದು ಅವಳು ಮನಸ್ಸಿನಲ್ಲಿ ಅಂದುಕೊಂಡಳು. ತನಗೆ ಭೆಟ್ಟಿಯಾಗಿ ಹೋಗಬೇಕೆಂದು ಮುಕುಂದದೇವನು ಹೇಳಿಕಳುಹಿದರೂ, ಕಟ್ಟುನಿಟ್ಟಿನ ಸ್ವಭಾವದ ವ್ರಜಬಾಲೆಯು ಅವನ ಆಜ್ಞೆಯನ್ನು ಉಪೇಕ್ಷಿಸಿದ್ದಳು. ವ್ರಜಬಾಲೆಯು ಬಹುಪರಿಯಿಂದ ತಿರಸ್ಕಾರವನ್ನು ವ್ಯಕ್ತಮಾಡಿದರೂ ಮುಕುಂದದೇವನ ಕೃತನಿಶ್ಚಯವು ವಿಮುಖವಾಗಲಿಲ್ಲ. ಅವನು ದಿನಾಲು ವ್ರಜಬಾಲೆಯ ಭೆಟ್ಟಿಗಾಗಿ ಅವಳ ಗುಡಿಸಲಿಗೆ ಬರತೊಡಗಿದನು. ಒಂದೊಂದು ದಿವಸ ವ್ರಜಬಾಲೆಯು ಅವನೊಡನೆ ಮಾತನಾಡುತ್ತಿದ್ದಳು; ಒಮ್ಮೊಮ್ಮೆ ಅವನ ಮುಖಾವಲೋಕನ ಕೂಡ ಮಾಡದೆ, ಸಮುದ್ರತೀರದ ವಾಲುಕಾಮಯ ದೇಶದಲ್ಲಿ ತಿರುಗಾಡುವ ನಿಮಿತ್ತದಿಂದ ಹೊರಟುಹೋಗುತ್ತಿದ್ದಳು. ಕಾರ್ಯಸಾಧನೆಗಾಗಿ ಹವಣಿಸುತ್ತಿದ್ದ ವ್ರಜಬಾಲೆಯು ಮುಕುಂದದೇವನ ಕಾಮುಕ ಚೇಷ್ಟೆಗಳನ್ನು ಸಹಿಸಿಕೊಳ್ಳುತ್ತಿದ್ದಳು. ಪ್ರಸಂಗಾನುಸಾರವಾಗಿ ಅವನ ಕಣ್ಣಿಗೆ ತೀಕ್ಷ್ಣವಾದ ಅಂಜನವನ್ನಿಕ್ಕಬೇಕೆಂದು ವ್ರಜಬಾಲೆಯು ನಿಶ್ಚಯಿಸಿಕೊಂಡಳು. ಯುವನರ ಅಬ್ಬರದ ಕಾಲದಲ್ಲಿ ಮುಕುಂದದೇವನಂತಹ ಪ್ರತಿಷ್ಠಿತರಾಜನು ವಿಲಾಸದಲ್ಲಿ ತೊಡಗಿ, ರಾಜಕಾರಣವನ್ನು ದುರ್ಲಕ್ಷಿಸುವದು ಅವಳಿಗೆ ಎಷ್ಟು ಮಾತ್ರವೂ ಸರಿಯಾಗಿ ತೋರಲಿಲ್ಲ. ಕರ್ತವ್ಯಪರಾಙ್ಮುಖನಾಗತೊಡಗಿದ ಮುಕುಂದದೇವನಿಗೆ ರಾಜಧರ್ಮವನ್ನು ತಿಳಿಸಿ, ಅವನನ್ನು ಒಳಿತಾಗಿ ಜಾಗ್ರತೆಗೊಳಿಸಬೇಕೆಂದು ವ್ರಜ

ಬಾಲೆಯು ಯೋಚನೆಯಿತ್ತು. ಅಷ್ಟರಲ್ಲಿ ವಂಗಸೇನಾಪತಿಯಾದ ಕಾಳಾಪಹಾಡನು ಒಂದು ಲಕ್ಷ ಸೈನ್ಯದೊಡನೆ ಓರಿಸಾ ದೇಶವನ್ನು ಪಾದಾಕ್ರಾಂತಗೊಳಿಸಲಿಕ್ಕೆ ಹೊರಟಿರುವನೆಂಬ ಭೀಷಣವಾದ ವಾರ್ತೆಯು ಅವಳ ಕಿವಿಗೆ ಬಿತ್ತು.

ಉತ್ಕಲದೇಶದಲ್ಲಿ ಯುದ್ಧದ ಕೋಲಾಹಲವೇಳುವ ವಾರ್ತೆಯು ಪಸರಿಸಿದೊಡನೆಯೆ ಉಷಾಸುಂದರಿಯ ಹೃದಯವು ಥರಥರನೆ ನಡುಗತೊಡಗಿತು. ಇನ್ನು ಮೇಲೆ ಪುರಿಯಲ್ಲಿರುವದು ಅವಳಿಗೆ ಭಯಪ್ರದವಾಗಿ ಕಂಡು ಎಲ್ಲಿಯಾದರೂ ಸುರಕ್ಷಿತವಾದ ಸ್ಥಳಕ್ಕೆ ಹೋಗಬೇಕೆಂದು ವ್ರಜಬಾಲೆಗೆ ಹೇಳಿದಳು. 'ವೈದ್ಯ ಹೇಳಿದ್ದೂ ರೋಗಿ ಬಯಸಿದ್ದೂ ಒಂದೇ' ಎಂಬಂತೆ ವ್ರಜಬಾಲೆಯ ಮನಃಸ್ಥಿತಿಯಾಗಿತ್ತು. ಕಾಲಾಪಹಾಡನ ಸೇಡನ್ನು ಯಾವ ಉಪಾಯದಿಂದ ತೀರಿಸಿಕೊಳ್ಳಬೇಕೆಂದು ಯೋಚಿಸುತ್ತಿದ್ದ ವ್ರಜಬಾಲೆಗೆ ಈಗ ಸಂಧಿಯು ಸಾಧಿಸಿದಂತಾಯಿತು. ಇಂಥಹ ಪ್ರಸಂಗದಲ್ಲಿ ಅವಳು ಉಷಾಸುಂದರಿಯು ಮನಸ್ಸಿನಂತೆ ನಡೆಯಲಿಕ್ಕೆ ಸಿದ್ಧಳಾಗುವಳೆ? ಉತ್ಕಲದೇಶದ ಸ್ವಾತಂತ್ರ್ಯಹರಣ ಮಾಡಲಿಕ್ಕೆ ಬಂದ ಕಾಳಾಪಹಾಡನ ಅಹಂಕಾರೋರ್ಮಿಯನ್ನು ನಾಶಗೊಳಿಸಿ, ಅವನ ಮೇಲಿನ ಸೇಡು ತೀರಿಸಿಕೊಳ್ಳಲಿಕ್ಕೆ ಅನುಕೂಲ ಕಾಲವು ಪ್ರಾಪ್ತವಾಯಿತೆಂದು ವ್ರಜಬಾಲೆಯು ಆನಂದಪಟ್ಟಳು. ತನಗಾದ ಅಪಮಾನದ ಸೇಡನ್ನು ಭಯಂಕರವಾದ ರೀತಿಯಿಂದ ತೀರಿಸಿಕೊಳ್ಳಬೇಕೆಂಬ ಉದ್ದೇಶದಿಂದ ಕಾಳಾಪಹಾಡನು ದಂಡೆತ್ತಿ ಬಂದಿರುವನೆಂಬ ಮಾತು ಸೂರ್ಯಪ್ರಕಾಶದಷ್ಟು ನಿಚ್ಚಳವಾಗಿತ್ತು. ಕಾಳಾಪಹಾಡನನ್ನು ಯುಕ್ತಿ-ಪ್ರಯುಕ್ತಿಗಳಿಂದ ನಾಶಗೊಳಿಸಿದರೆ, ಹಿಂದುಗಳ ಮೇಲಿನ ದೊಡ್ಡ ಗಂಡಾಂತರವು ದೂರವಾಗಿ, ಸೇಡಿನೊಡನೆ ರಾಷ್ಟ್ರಕಾರ್ಯವೂ ಸಾಧಿಸುವದೆಂದು ವ್ರಜಬಾಲೆಯು ತಿಳಿದಳು. ಅವಳು ವಿಲಾಸಿಯಾದ ಮುಕುಂದದೇವನನ್ನು ಕರ್ತವ್ಯರತನನ್ನಾಗಿ ಮಾಡಬೇಕೆಂದು ಸಾಹಸ ನಡೆಯಿಸಿದಳು.

ರಾಜಾ ಮುಕುಂದದೇವನು ಅರಮನೆಯಲ್ಲಿ ಕುಳಿತಿದ್ದನು. ನಾಮಾಂಕಿತ ಯೋಧನಾದ ಕಾಳಾಪಹಾಡನು ಅಪರಿಮಿತ ಸೇನೆಯೊಡನೆ

ಉತ್ಕಲ ದೇಶವನ್ನು ನುಗ್ಗಲಿಕ್ಕೆ ಹೊರಟಿರುವನೆಂಬ ವಾರ್ತೆಯು ಅವನಿಗೆ ತಿಳಿದಿತ್ತು. ದೇಶದ ರಕ್ಷಣೆಗಾಗಿಯೂ, ಶತ್ರುಗಳ ದಾಳಿಯನ್ನು ತಡೆಯುವದಕ್ಕಾಗಿಯೂ ಅವನು ತನ್ನ ಮಂತ್ರಿಯಾದ ಜನಾರ್ದನನನ್ನು ದೊಡ್ಡ ಸೈನ್ಯದೊಡನೆ ಶೀಮಾಂತರಕ್ಕೆ ಕಳುಹಿಸಿದ್ದನು. ಪ್ರಸಂಗವೊದಗಿದರೆ ತನ್ನ ಸೇನಾಪತಿಯಾದ ದೀನಕೃಷ್ಣನನ್ನು ಸೈನ್ಯದೊಡನೆ ಕಳುಹಿಸಬೇಕೆಂದು ಅವನು ನಿರ್ಧರಿಸಿದ್ದನು. ಕಾಳಾಪಹಾಡನ ಸೈನ್ಯವು ಅಪರಿಮಿತವಿದ್ದುದರಿಂದ ಯುದ್ಧದ ಪ್ರಸಂಗವು ತನ್ನ ಮೇಲೆಯೂ ಬರುವದೆಂದು ಗೊತ್ತಾದ ಕೂಡಲೆ ಅವನು ಸಂಗ್ರಾಮ ಸಿದ್ಧತೆಯಲ್ಲಿ ತೊಡಗಿದ್ದನು. ಮಹಾಯೋಧನೂ ಪ್ರತಾಪನಿಧಿಯೂ ಇದ್ದ ಮುಕುಂದದೇವನು ಕಾಳಾಪಹಾಡನ ಸೈನ್ಯಕ್ಕೆ ಎದುರಾಗುವದಕ್ಕಾಗಿ ತಾನೇ ಹೊರಡತಕ್ಕವನು; ಆದರೆ, ಸದ್ಯದ ಪ್ರಸಂಗದಲ್ಲಿ ಅವನ ಚಿತ್ತವೃತ್ತಿಯು ಚಂಚಲತೆಯನ್ನು ಹೊಂದಿತ್ತು. ಅವನ ಹೃದಯವು ವಿಕಾರವಶವಾದ್ದರಿಂದ ಅವನು ಕರ್ತವ್ಯ ಧರ್ಮವನ್ನು ನೆರವೇರಿಸಲಿಕ್ಕೆ ಅಸಮರ್ಥನಾಗಿದ್ದನು. ವ್ರಜಬಾಲೆಯ ಪ್ರಾಪ್ತಿಗಾಗಿ ಅವನು ಅನೇಕ ತರದ ಸಾಹಸಗಳನ್ನು ಮಾಡಿದ್ದನು. ಅವನ ಯತ್ನಗಳು ನಿಷ್ಫಲವಾಗತೊಡಗಿದಂತೆ ಮನಸ್ಸಿನ ಆತುರತೆಯೂ ಹೆಚ್ಚಳ ಹೊಂದಲಾರಂಭಿಸಿತ್ತು. ಪುರಿಯನ್ನು ತ್ಯಜಿಸಿ ಕಟಕ ರಾಜಧಾನಿಗೆ ಹೋಗುವದು ಅವನಿಗೆ ಅತ್ಯವಶ್ಯವಿತ್ತು; ಯಾಕಂದರೆ ಕಟಕದ ಕೋಟೆಯು ದುರ್ಭೇದ್ಯವಿದ್ದು, ಬಳ್ಳೇ ಸುರಕ್ಷಿತವಾಗಿತ್ತು. ವ್ರಜಬಾಲೆಯನ್ನು ಸಮುದ್ರತೀರದಲ್ಲಿಯ ಪರ್ಣಕುಟೀರದಲ್ಲಿರಿಸಿ ಕಟಕಕ್ಕೆ ಹೋಗುವದು ಮುಕುಂದದೇವನಿಗೆ ಬಹಳೇ ದುಃಖಕರವಾಗಿತ್ತು. ವ್ರಜಬಾಲೆಯನ್ನು ಒಳಿಯಲ್ಲಿ ಕರೆದುಕೊಂಡು ಹೋಗಬೇಕೆಂದು ಅವನ ಇಚ್ಛೆಯಿತ್ತು. ಅವಳು ತನ್ನೊಡನೆ ಬರುವಳೋ-ಇಲ್ಲವೊ ಎಂಬ ವಿಚಾರವು ಅವನನ್ನು ಬಾಧಿಸತೊಡಗಿತು. ರಾಜ್ಯದಲ್ಲಿ ಮುಸಲಮಾನರ ಹಾವಳಿಯಾಗುವದೆಂಬ ಭಯ ತೋರಿಸಿ, ಅವಳನ್ನು ಸಂಗಡ ಕರೆದೊಯ್ಯಬೇಕೆಂದು ಮುಕುಂದದೇವನು ನಿರ್ಧರಿಸಿಕೊಂಡನು. ಅಷ್ಟರಲ್ಲಿ ಉಷಾಸುಂದರಿಯು ಅಲ್ಲಿಗೆ ಬಂದು:—"ವ್ರಜಬಾಲೆಯು ನಿಮ್ಮನ್ನು ಕರೆದುಕೊಂಡು ಬರುವದಕ್ಕಾಗಿ ಹೇಳಿರುವಳು."

ಉಷಾಸುಂದರಿಯ ಅಮೃತೋಪಮ ವಾಣಿಯಿಂದ ಮುಕುಂದ ದೇವನ ಆನಂದವು ಹೃದಯಾಕಾಶವನ್ನೆಲ್ಲ ತುಂಬಿಕೊಂಡಿತು! ತನ್ನನ್ನು ಆದರದಿಂದ ಕರೆಯಿಸಿದ ವ್ರಜಬಾಲೆಯನ್ನು ಅವನು ಮನಸ್ವೀಯಾಗಿ ಕೊಂಡಾಡಿ, ತನ್ನ ಸುದೈವವನ್ನು ಯಥೇಷ್ಟವಾಗಿ ವರ್ಣಿಸಿಕೊಳ್ಳತೊಡಗಿದನು. ಉಷಾಸುಂದರಿಯ ಮಾತುಗಳು ಮುಗಿಯುವಷ್ಟರಲ್ಲಿ ಮುಕುಂದ ದೇವನು ಕುಳಿತ ಸ್ಥಳದಿಂದೆದ್ದು ತನ್ನ ಮನೋಹರೆಯ ಗುಡಿಸಲಿನ ದಾರೀ ಹಿಡಿದಿದ್ದನು.

ಮುಕುಂದದೇವನು ಬಂದಾಗ ವ್ರಜಬಾಲೆಯು ಸಮುದ್ರತೀರದ ವಾಲುಕಾಮಯ ಪ್ರದೇಶದಲ್ಲಿ ಕುಳಿತಿದ್ದಳು. ಇಂದಿನ ಅವಳ ಮುಖ ಚಿಹ್ನವೇ ಬೇರೆ ವಿಧವಾಗಿತ್ತು. ಬಹು ದಿವಸದ ಹಾರೈಕೆಯು ಪೂರೈಸಿದರೆ ಎಷ್ಟು ಆನಂದವಾಗುವದೋ-ಅಷ್ಟೇ ಆನಂದವು ಅವಳಿಗಾಗಿತ್ತು. ಅರಸನು ಬಂದ ಕೂಡಲೆ ಅವನನ್ನು ಸನ್ಮಾನಿಸಿ ಕುಳ್ಳಿರಿಸಿದ ಒಳಿಕ, ಅವಳು ತನ್ನ ಮನೋಭಿಪ್ರಾಯವನ್ನು ಹೇಳತೊಡಗಿದಳು:

"ಪಠಾಣ ಸೇನಾಪತಿಯಾದ ಕಾಳಾಪಹಾಡನು ಒಂದು ಲಕ್ಷ ಸೈನ್ಯದೊಡನೆ ತಮ್ಮ ಮೇಲೆ ಸಾಗಿ ಬರುವವನಿರುವನೆಂಬ ವಾರ್ತೆಯಿದೆ. ಇಂತಹ ಸಂಧಿಯಲ್ಲಿ ನೀವು ಈ ಬಗೆಯ ಅಜಾಗ್ರತೆಯಿಂದ ಕಾಲಕಳೆಯುವದು ಯುಕ್ತವೆ? ಇಷ್ಟು ದಿನಗಳ ವರೆಗೆ ವೀರಾಗ್ರಣಿಗಳೆಂದು ಹೆಸರು ಪಡೆದ ನೀವೂ, ಪಟುಭಟರೆನಿಸಿಕೊಂಡ ನಿಮ್ಮ ಸೇನೆಯೊಳಗಿನ ಜನರೂ ಕೀರ್ತಿಗೆ ಕುಂದು ತಂದುಕೊಳ್ಳುವಿರೆಂದು ನನಗೆ ತೋರಲಾರಂಭಿಸಿರುವದು. ನಿಮ್ಮಂತಹ ಕರ್ತವ್ಯಭಾರವುಳ್ಳ ಕಾರ್ಯಕರ್ತರು ಕರ್ತವ್ಯ ಪರಾಙ್ಮುಖರಾದರೆ, ಅದರ ದುಷ್ಫಲವನ್ನು ಎಲ್ಲರೂ ಉಣ್ಣುವ ಪ್ರಸಂಗವು ಬರುವದು. ಅದ್ವಿತೀಯ ಪ್ರತಿಭಾಶಾಲಿಗಳಾದ ನಿಮಗೆ ಅಬಲೆಯೂ ದೈನ್ಯಾವಸ್ಥೆಗೊಳಗಾದವಳೂ ಆದ ನಾನು ಉಪದೇಶಿಸಬೇಕೆನ್ನುವಂತಿರುವದಿಲ್ಲ. ಸ್ವದೇಶದ ಹಾಗು ಸ್ವಧರ್ಮದ ಮೇಲಿನ ಅನುರಾಗದಿಂದ ಸ್ತ್ರೀಜನೋಚಿತವಾದ ಲಜ್ಜಾಸಂಕೋಚಗಳನ್ನು ಬಿಸುಟಿ, ನಾನು ನಿಮ್ಮೊಡನೆ ಎರಡು ಮಾತನಾಡುವ ಧೈರ್ಯಗೊಂಡಿರುವೆನು. ಮಹಾರಾಜರು,

ನೀವು ಬೇಗನೆ ಕರ್ತವ್ಯರತರಾಗಿರಿ.''

"ವ್ರಜಬಾಲೆ, ನೀನು ರೂಪವತಿಯಿರುವಂತೆ ಗುಣವತಿಯೂ ಇರುವೆಯೆಂಬದು ಇಂದು ನನ್ನ ಮನವರಿಕೆಯಾಯಿತು. ನಿನ್ನ ಸ್ವದೇಶಾಬಿಮಾನವು ಅವರ್ಣನೀಯವಿರುವದು. ಕಾಳಾಪಹಾಡನು ಈಗಾಗಲೆ ಓರಿಸಾದ ಶೀಮಾಂತರವನ್ನು ಸಮೀಪಿಸಿರಬಹುದು. ಅವನ ಸೈನ್ಯಕ್ಕೆ ಎದುರಾಗಿ ನಿಲ್ಲುವದಕ್ಕಾಗಿ ನಾನೂ ಸೈನ್ಯವನ್ನು ಕಳುಹಿಸಿರುವೆನು.''

"ಮಹಾರಾಜರೆ, ನೀವು ಸೈನ್ಯವನ್ನು ಎಲ್ಲಿಗೆ ಕಳುಹಿಸಿರುವಿರಿ?''

"ತ್ರಿವೇಣಿಗೆ.''

"ಎಷ್ಟು ಸೈನ್ಯವನ್ನು ಕಳುಹಿಸಿರುವಿರಿ?''

"ಮೂವತ್ತು ಸಾವಿರ.''

"ಸೇನಾಪತಿಯು ಯಾರು?''

"ಮುಖ್ಯ ಮಂತ್ರಿಯಾದ ಜನಾರ್ದನನನ್ನು ಕಳುಹಿಸಿರುವೆನು.''

"ಮಹಾರಾಜರೆ, ನೀವು ಜನಾರ್ದನನನ್ನು ಕಳಿಸಬಾರದಾಗಿತ್ತು!''

"ಅದೇಕೆ?''

"ಜನಾರ್ದನನು ದೇಶದ್ರೋಹಿಯೂ, ರಾಜದ್ರೋಹಿಯೂ ಇರುವನು. ಅವನು ನಿಮ್ಮ ಸಿಂಹಾಸನವನ್ನು ತೆಗೆದುಕೊಳ್ಳಬೇಕೆಂದು ಸಾಹಸ ನಡೆಯಿಸಿದ್ದನು. ಈಗಿನ ಪ್ರಸಂಗದಲ್ಲಿ ಅವನು ನಿಮ್ಮ ನಾಶಕ್ಕಾಗಿ ವೈರಿಗಳನ್ನು ಕೂಡಲಿಕ್ಕಿಲ್ಲವೆಂದು ಅದಾರು ಹೇಳಬೇಕು? ಅವನು ರಣಕ್ಷೇತ್ರದಲ್ಲಿ ನಿಶ್ಚಯವಾಗಿ ವಿಶ್ವಾಸಘಾತ ಮಾಡಬಹುದೆಂದು ನನ್ನ ಭಾವನೆಯಿರುವದು.''

"ಅವನು ರಾಜಧಾನಿಯಲ್ಲಿದ್ದರೆ ವಿಶ್ವಾಸಘಾತ ಮಾಡುವನೆಂಬದು ಗೊತ್ತಿದ್ದರಿಂದಲೆ ಅವನನ್ನು ಶತ್ರುಸೈನ್ಯದ ಮೇಲೆ ಕಳುಹಿಸಿರುವೆನು.''

"ಅವನು ಶತ್ರುಪಕ್ಷಕ್ಕೆ ಒಡೆದರೆ ಬಹಳೇ ಹಾನಿಯಾಗುವದು. ಈ ಪ್ರಸಂಗದಲ್ಲಿ ಅವನು ನಿಮ್ಮ ನೇತೃತ್ವದಲ್ಲಿರಬೇಕಾಗಿತ್ತು. ಜನಾರ್ದನನು ರಾಜಧಾನಿಯಲ್ಲಿದ್ದರೆ ಎಷ್ಟು ಹಾನಿಯಾಗುತ್ತಿತ್ತೋ, ಅದರ ನೂರಾರು ಪಟ್ಟು ಹಾನಿಯು ನಿಮಗೆ ಈಗ ಆಗದಿರಲಾರದು. ಯಾವನ

ಮೇಲೆ ಸಂಶಯವಿರುವದೋ ಅವನನ್ನು ಬಳಿಯಲ್ಲಿಟ್ಟುಕೊಳ್ಳುವದು ಶ್ರೇಯಸ್ಕರವು.''

''ವ್ರಜಬಾಲೆ, ನಿನ್ನಂತೆ ನನಗಾದರೂ ಸಂಶಯವು ಬಂದಿತ್ತು. ಅವನು ರಾಜಧಾನಿಯಲ್ಲಿದ್ದರೆ ಹೆಚ್ಚಾಗಿ ಹಾನಿಯಾಗುವದೆಂಬ ಕಲ್ಪನೆಯಿಂದಲೇ ಅವನನ್ನು ದಬ್ಬಿಕೊಟ್ಟೆನು.''

''ನಿಮ್ಮ ಈ ಕೃತಿಯು ನನ್ನ ಮನಸ್ಸಿಗೆ ಸರಿಯಾಗಿ ಕಾಣಲಿಲ್ಲ. ಇಷ್ಟು ದಿನ ರಾಜಕಾರಣಪಟುಗಳೆಂದು ಪ್ರಸಿದ್ಧರಾದ ನಿಮಗೆ ಈ ಮಾತು ಲಾಂಛನಾಸ್ಪದವಿರುವದು. ಇಂತಹ ವೇಳೆಯಲ್ಲಿ ಮಂತ್ರಿಯನ್ನು ಬಿಡ ತಕ್ಕದ್ದಿದ್ದಿಲ್ಲ. ಅವನು ರಣಕ್ಷೇತ್ರದ ಮೇಲೆ ನಿಜವಾಗಿಯೂ ವಿಶ್ವಾಸ ಘಾತ ಮಾಡುವನು..''

ವ್ರಜಬಾಲೆಯು ಮಾತುಗಳನ್ನು ಕೇಳಿ ಮುಕಂದದೇವನು ಚಕಿತನಾದನು. ಅವಳು ರಾಜಕಾರಣದಲ್ಲಿ ನಿಷ್ಣಾತಳಿರುವಳೆಂಬದು ಮುಕುಂದದೇವನಿಗೆ ಗೊತ್ತಾಯಿತು. ಒರಿಯ ರೂಪವಿಂದ ಮಾತ್ರವಲ್ಲದೆ ಬುದ್ಧಿಬಲದಿಂದಲೂ ತನ್ನ ರಾಜ್ಞಿಯಾಗಲಿಕ್ಕೆ ವ್ರಜಬಾಲೆಯು ಯೋಗ್ಯಳಿರುವಳೆಂದು ಅವನ ಭಾವನೆಯಾಯಿತು. ಆಗ ಅವನು ವ್ರಜಬಾಲೆಯನ್ನು ಗೌರವಿಸುವದಕ್ಕಾಗಿ —''ವ್ರಜಬಾಲೆ, ನೀನು ರಾಜಕಾರಣಸ್ಥಾನದಲ್ಲಿ ತಜ್ಞಳಿರುವೆಯೆಂದು ನನಗೆ ಇದುವರೆಗೆ ತಿಳಿದಿದ್ದಿಲ್ಲ. ನೀನು ಒರಿಸಾದೇಶದ ಮಹಾರಾಜ್ಞಿಯ ಸ್ಥಳದಲ್ಲಿ ವಿಭೂಷಿಸಲು ಯೋಗ್ಯಳಿರುವೆ.''.

''ಮಹಾರಾಜರೆ, ಇಂತಹ ಸಂಧಿಯಲ್ಲಿ ನೀವು ವಿಕಾರವಶರಾಗಬಾರದೆಂದು ನಾನು ಸೆರಗೊಡ್ಡಿ ಪ್ರಾರ್ಥಿಸುವೆನು. ನಿಮ್ಮ ಮೇಲೆ ಇಡಿ ಉತ್ಕಲದ ಸುಖ-ಸ್ವಾತಂತ್ರ್ಯಗಳು ಅವಲಂಬಿಸಿರುವವು. ಬಲಾಢ್ಯನಾದ ಶತ್ರುವು ಲಕ್ಷಾವಧಿ ಸೈನ್ಯದೊಡನೆ ಒರಿಸಾದೇಶವನ್ನು ವಿಧ್ವಂಸಗೊಳಿಸಲಿಕ್ಕೆ ಸಾಗಿಬರತೊಡಗಿರುವನು. ಈಗಿನ ವೇಳೆಯಲ್ಲಿ ನೀವು ವಿಷಯಲಾಲಸೆಯಿಂದಾಗಲಿ, ಲಾವಣ್ಯ ಭ್ರಮೆಯಿಂದಾಗಲಿ, ರೂಪಾಂಧರಾಗಿಯಾಗಲಿ ಕರ್ತವ್ಯವಿಮುಖರಾದರೆ ಉತ್ಕಲದ ಪಾಡು ನಿಶ್ಚಯವಾಗಿ ಒಳ್ಳಿತಾಗಲಾರದು. ಕಾಳಾಪಹಾಡನ ಸೈನ್ಯಕ್ಕೆ ಪ್ರತೀಕಾರ ಮಾಡುವದ

ಕ್ಕಾಗಿ ನೀವು ಯೋಗ್ಯನಾದ ಸೇನಾಪತಿಯನ್ನು ಕಳಿಸಬೇಕಾಗಿತ್ತು. ಆ ಕೆಲಸವು ನಿಮ್ಮಿಂದಾಗದೆ, ಜನಾರ್ದನನನ್ನು ಕಳುಹಿಸಿ ಕಾರ್ಯಭಾಗವನ್ನು ಕೆಡಿಸಿ ಬಿಟ್ಟಿರುವಿರಿ. ಕಟಕ ರಾಜಧಾನಿಯನ್ನೂ ಬಾರಾತಟ ದುರ್ಗವನ್ನೂ ಭದ್ರಪಡಿಸಿ, ಸೈನ್ಯವನ್ನು ಬೆಳೆಯಿಸಬೇಕಾಗಿತ್ತು. ಆಯುಕಟ್ಟಿನ ದುರ್ಗಗಳನ್ನೂ ಕೋಟೆ-ಕೊತ್ತಳಗಳನ್ನೂ ಸುವ್ಯವಸ್ಥಿತಗೊಳಿಸಬೇಕಾಗಿತ್ತು. ಜನಾರ್ದನ ಮಂತ್ರಿಯ ಮೇಲೆ ಗುಪ್ತಚರರ ಕಾವಲು ಇರಿಸಬೇಕಾಗಿತ್ತು. ಇಷ್ಟೆಲ್ಲ ಕಾರ್ಯಭಾರಗಳನ್ನು ಮೈಮೇಲೆಟ್ಟುಕೊಂಡು, ಒಬ್ಬ ದೀನ ತರುಣಿಗಾಗಿ ಮನಸೋತು ಜಗನ್ನಾಥಪುರಿಯನ್ನು ಹಿಡಿದು ಕುಳಿತುಬಿಟ್ಟಿರಿ. ಮುಂದೆ ರಾಷ್ಟ್ರದ ಗತಿಯೇನು? ಪ್ರಜಾಜನರ ಪಾಡೇನು? ಉತ್ಕಲದ ಸ್ವಾತಂತ್ರ್ಯ ಸಿಂಹಾಸನದ ಅವಸ್ಥೆಯೇನು? ಜನಾನಖಾನೆಯನ್ನು ವೃದ್ಧಿಂಗತ ಮಾಡುವ ಭರದಲ್ಲಿ ತೊಡಗಿ, ರಾಷ್ಟ್ರನಾಶ ಮಾಡುವದು ಉಚಿತವಲ್ಲವೆಂದು ನನ್ನ ಅಲ್ಪಬುದ್ಧಿಗೆ ತೋಚುವದು. ಮಹಾರಾಜರೆ, ನೀವು ಯಾವ ಕಾರಣದಿಂದಲೂ ಶತ್ರುಗಳನ್ನು ಉಪೇಕ್ಷಿಸಬೇಡಿರಿ; ಪರಾಕ್ರಮದ ಗರ್ವದಿಂದ ಮೈಮರೆಯಬೇಡಿರಿ. ನೀವು ಮನಸ್ಸುಗೊಟ್ಟು ಸಾಹಸ ಮಾಡಿದರೆ ವಿಜಯಶ್ರೀಯು ನಿಮ್ಮ ಸ್ವಾಧೀನಳಾಗುವಳೆಂದು ನಾನು ಕೈ ಎತ್ತಿ ಹೇಳುವೆನು.''

ವ್ರಜಬಾಲೆಯ ಮಾತುಗಳು ಮುಕುಂದದೇವನ ತಲೆಯಲ್ಲಿ ಅಲ್ಪ ಮಟ್ಟಿಗಾದರೂ ಪ್ರಕಾಶವನ್ನು ಕೆಡಹಿದವು. ಕಟಕ ವಾರಣಾಶಿ ಹಾಗು ಬಾರಾತಟದುರ್ಗ ಇವುಗಳಂತಹ ಒಳ್ಳೇ ಆಯುಕಟ್ಟಿನ ಸ್ಥಳಗಳನ್ನು ಭದ್ರಪಡಿಸದೆ, ಜಗನ್ನಾಥಪುರಿಯನ್ನು ಹಿಡಿದು ಸ್ವಸ್ಥವಾಗಿ ಕುಳಿತದ್ದು ಯೋಗ್ಯವಾಗಲಿಲ್ಲವೆಂದು ಅವನ ಭಾವನೆಯಾಯಿತು. ಆಗ ಅವನು ವ್ರಜಬಾಲೆಯನ್ನು ಕುರಿತು—''ನಾನು ಶತ್ರುಗಳನ್ನು ಉಪೇಕ್ಷಿಸಿಲ್ಲವಾದರೂ ನನ್ನಿಂದ ಆಗತಕ್ಕಷ್ಟು ವ್ಯವಸ್ಥೆಯಾಗಿಲ್ಲ. ಕಟಕದ ಬಳಿಯಲ್ಲಿ ನಾನು ಸೈನ್ಯವನ್ನಿರಿಸಿರುವೆನು. ನಾನಾದರೂ ಬೇಗನೆ ಹೊರಡುವೆನು. ವ್ರಜಬಾಲೆ, ಪುರಿಯನ್ನು ಬಿಟ್ಟು ಹೋಗಬೇಕೆಂದರೆ ನನ್ನ ಕಾಲುಗಳೇ ಏಳವಾಗಿವೆ. ಅದಕ್ಕೆ ನಾನೇನು ಮಾಡಲಿ?''

“ಮಹಾರಾಜರೆ, ಹೀಗೆ ಮೂರ್ಖತನದ ಮಾತುಗಳನ್ನಾಡಬೇಡಿರಿ. ಪ್ರಸಂಗವು ಮೈಮೇಲೆ ಬಂದಿರುವದೆಂಬುದನ್ನು ಮರೆತು ವಿಚಾರವಶರಾಗುವದು ಒಳಿತಲ್ಲ. ನಾನು ನಿಮ್ಮ ಮನೋಭೂಮಿಕೆಯನ್ನು ಅರಿತಿರುವೆನು. ಜಗತ್ತಿನೊಳಗಿನ ಎಲ್ಲ ಆಶೆಗಳಿಗೂ ಆಧಾರಗಳಿಗೂ ಹೊರತಾಗಿ, ದೀನಳಾದ ನಾನು ದೇಶಕಾರ್ಯದಲ್ಲಿ ಕೈಲಾದಷ್ಟು ಪ್ರಯತ್ನ ಮಾಡಬೇಕೆಂಬ ಉದ್ದೇಶದಿಂದ ಇಲ್ಲಿಗೆ ಬಂದಿರುವೆನು. ನಾನು ಉತ್ಕಲದ ರಾಣಿಯಾಗಬೇಕೆಂದು ಮಹತ್ವಾಕಾಂಕ್ಷೆಯುಳ್ಳವಳಾಗಿ ಬಂದಿಲ್ಲವೆಂದು ನಿಮಗೆ ಸ್ಪಷ್ಟವಾಗಿ ಹೇಳುವೆನು, ಕಾಳಾಪಹಾಡನು ಪುರಿಯಲ್ಲಿ ಅಪಮಾನಿತನಾಗಿ ಹೋಗಿರುವದರಿಂದ ತನ್ನ ಅಪಮಾನದ ಸೇಡನ್ನು ತೀರಿಸಿಕೊಳ್ಳಬೇಕೆಂಬ ಉದ್ದೇಶವುಳ್ಳವನಾಗಿ ದಂಡೆತ್ತಿ ಬಂದಿರುವನು. ನೀವು ಸಂಗ್ರಾಮದಲ್ಲಿ ಅವನನ್ನು ‘ತ್ರಾಹಿ ಭಗವನ್’ ಎಂದೆನ್ನಲಿಕ್ಕೆ ಹಚ್ಚಿದರೆ ಉತ್ಕಲದ ಸ್ವಾತಂತ್ರ್ಯಸಿಂಹಾಸನಕ್ಕೆ ಮರ್ಯಾದೆಯು ಬರುವದು. ಜಾತಿಭ್ರಷ್ಟನಾದ ಆ ಕಾಳಾಪಹಾಡನಿಗೆ ಒಡಂಬಡಿಕೆ ಮಾಡಿಕೊಳ್ಳುವದಕ್ಕೆ ಸಹ ಸ್ಥಳಕೊಡದೆ, ಅವನನ್ನು ರಣದೇವತೆಗೆ ಬಲಿಕೊಡಬೇಕೆಂದು ನನ್ನ ಅಭಿಲಾಷೆಯುಂಟು. ನೀವು ದೃಢಸಂಕಲ್ಪದಿಂದಲೂ ಸ್ಫೂರ್ತಿಯಿಂದಲೂ ಕರ್ತವ್ಯರತರಾದರೆ ಹಿರಿದಾದ ಪಟ್ಟಣವು ಸುಖ-ಸ್ವಾತಂತ್ರ್ಯಗಳೂ ಉಳಿಯುವವು; ಹಾಗಿಲ್ಲದಿದ್ದರೆ ಇವು ನಿಮ್ಮೊಡನೆ ಅಸ್ತಂಗತವಾಗುವವೆಂದು ಸಾರಿ ಹೇಳುವೆನು. ಸುಜ್ಞರಾದ ನಿಮಗೆ ಹೆಚ್ಚಿಗೆ ಇನ್ನೇನು ಹೇಳಲಿ?”

“ವ್ರಜಬಾಲೆ, ನನ್ನ ಮಾರ್ಗದರ್ಶಕ ದೇವತೆ! ನಾನು ರಣಭೂಮಿಗೆ ಅಗತ್ಯವಾಗಿ ಹೊರಡುವೆನು. ಈ ಜನ್ಮದಲ್ಲಿ ತಿರುಗಿ ನಿನ್ನ ಭೆಟ್ಟಿಯಾಗಲಿಕ್ಕಿಲ್ಲವೆಂದು ನನ್ನ ಮನಸ್ಸಿಗೆ ಹೊಳೆಯತೊಡಗಿರುವದು.”

“ಹೀಗೆ ಅಭದ್ರವಾದ ಮಾತುಗಳನ್ನಾಡಬೇಡಿರಿ. ನಿಮ್ಮ ಅಸ್ತಿತ್ವದ್ದಲ್ಲಿಯೇ ಉತ್ಕಲದ ಪ್ರಜಾಜನರ ಸುಖ-ಸ್ವಾತಂತ್ರ್ಯಗಳು ವಾಸಿಸಿರುವವು. ನೀವು ಯವನರೊಡನೆ ಕಾದುವಾಗ ಮಡಿದರೆ, ಅವುಗಳನ್ನು ಮಹತ್ವಾಕಾಂಕ್ಷಿಗಳಾದ ವೈರಿಗಳು ನಿಜವಾಗಿಯೂ ಹರಣ ಮಾಡುವರು.

ನೀವು ನಾಮಾಂಕಿತ ಶೂರರಿರುವದರಿಂದ ಅಪಯಶದ ಗಾಳಿಯು ನಿಮ್ಮನ್ನು ಸೋಂಕಲಾರದು. ನೀವು ಕೊರಳಲ್ಲಿ ವಿಜಯಮಾಲೆಯನ್ನು ಧರಿಸಿಯೇ ತಿರುಗಿ ಬರುವಿರಿ.''

''ನಿನ್ನ ಉತ್ಸಾಹಜನಕವಾದ ಮಾತುಗಳಿಂದ ನನ್ನಲ್ಲಿ ನವಚೈತನ್ಯವು ಪ್ರಾಪ್ತವಾಯಿತು. ನಿನ್ನಂತಹರು ಮಾರ್ಗದರ್ಶಕ ಗೃಹಿಣಿಯರಾಗಿ ಅಂತಃಪುರದಲ್ಲಿರುತ್ತಿದ್ದರೆ, ನಾನು ಪರಮ ಧನ್ಯನಾಗುತ್ತಿದ್ದೆನು.''

ವ್ರಜಬಾಲೆಯು ಮುಕುಂದದೇವನ ಮಾತುಗಳಿಗೆ ಏನೂ ಉತ್ತರ ಕೊಡಲಿಲ್ಲ. ಅವಳು ಮುಖವನ್ನು ಕೆಳಗೆ ಮಾಡಿ ಸುಮ್ಮನೆ ಕುಳಿತಿದ್ದಳು. ಅವಳ ಸೊಬಗುಳ್ಳ ಮುಖವನ್ನು ನೋಡುತ್ತ ಮುಕುಂದದೇವನು ಸೌಂ-ದರ್ಯಪಾನತೃಷ್ಣೆಯನ್ನು ಶಾಂತಗೊಳಿಸಲಾರಂಭಿಸಿದ್ದನು; ಆದರೆ ಅವನ ತೃಷ್ಣೆಯು ಶಾಂತವಾಗದೆ ಕ್ಷಣಕ್ಷಣಕ್ಕೆ ಹೆಚ್ಚಾಗತೊಡಗಿತ್ತು. ವ್ರಜ ಬಾಲೆಯ ಮುಂದೆ ಅವನಿಗೆ ಓರಿಸಾದ ಸ್ವಾತಂತ್ರ್ಯ ಸಿಂಹಾಸನವು ತುಚ್ಛ ವಾಗಿ ಕಾಣುತ್ತಿತ್ತು. ಎಷ್ಟೋ ಹೊತ್ತಿನ ವರೆಗೆ ಅವನು ಆ ಲಾವಣ್ಯ ಲತಿಕೆಯ ಸ್ವರ್ಗೀಯ ಸೌಂದರ್ಯಪಾನವನ್ನು ಯಥೇಷ್ಟವಾಗಿ ಮಾಡಿದನು. ಅನಂತರದಲ್ಲಿ ಅವನು ದೈನ್ಯದಿಂದ—''ನೀನು ರಾಜಕಾರಣದಲ್ಲಿ ತಜ್ಞ ಳಿರುವೆ. ಇಂತಹ ಗೊಂದಲದ ವೇಳೆಯಲ್ಲಿ ರಾಜಕಾರಣ ಕುಶಲಳಾದ ನೀನು ಮಾರ್ಗದರ್ಶಕಳಾದರೆ ಬಹಳೇ ಲೇಸಾಗುವದು. ವ್ರಜಬಾಲೆ, ನೀನು ನನ್ನೊಡನೆ ಕಟಕವಾರಣಾಶಿಗೆ ಬರುವೆಯಾ?''

''ಮಹಾರಾಜರೆ, ನೀವು ಕರೆಯದಿದ್ದರೂ, ನಾನು ನಿಮ್ಮೊಡನೆ ಬರತಕ್ಕವಳೇ! ಉನ್ಮತ್ತನಾದ ಕಾಳಾಪಹಾಡನು ತನಗಾದ ಅಪಮಾನದ ಸೇಡನ್ನು ತೀರಿಸಿಕೊಳ್ಳಬೇಕೆಂಬ ಉದ್ದೇಶದಿಂದ ಅಮೋಘ ಸೈನ್ಯದೊ ಡನೆ ಸಾಗಿ ಬಂದಿರುವನು. ಈ ಸಂಧಿಯಲ್ಲಿ ಸ್ವದೇಶಾಭಿಮಾನಿಗಳಾದ ಹಿಂದುಗಳು ಕಾಯಾ-ವಾಚಾ ಮನಸ್ಸಿನಿಂದ ಉತ್ಕಲದ ಸ್ವಾತಂತ್ರ್ಯ ಸಿಂಹಾಸನದ ಸೇವೆ ಮಾಡದಿದ್ದರೆ, ದೇಶದ್ರೋಹದಂತಹ ಮಹಾಪಾತ ಕಕ್ಕೆ ಗುರಿಯಾಗಬೇಕಾಗುವದು. ಪ್ರತಿಯೊಬ್ಬ ಹಿಂದುವು ಸ್ವಾಭಿ ಮಾನ ಪ್ರೇರಿತನಾಗಿ, ಭಾವೀ ಸ್ವಾತಂತ್ರ್ಯಸಂಗ್ರಾಮದಲ್ಲಿ ಭಾಗ ತೆಗೆದು

ಕೊಳ್ಳಲಿಕ್ಕೇ ಬೇಕು. ಕ್ಷಾತ್ರಮನೋವೃತ್ತಿಯು ಆರ್ಯಲಲನೆಯರಾದರೂ ತಮ್ಮ ಯೋಗ್ಯತಾನುಸಾರವಾಗಿ ರಾಷ್ಟ್ರಧರ್ಮನಿರತರಾಗುವದು ಶ್ರೇಯಸ್ಕರವು. ಅಪಮಾನದ ಸೇಡನ್ನು ತೀರಿಸಿಕೊಳ್ಳಬೇಕೆಂದು ಸಾಗಿ ಬಂದ ಕಾಳಾಪಹಾಡನ ಸೇಡನ್ನು ತೀರಿಸಿಕೊಳ್ಳಬೇಕೆಂದು ನಾನು ಎಂದೋ ದೃಢ ಸಂಕಲ್ಪ ಮಾಡಿಕೊಂಡಿರುವೆನು. ಅಬಲೆಯಾದ ನನ್ನಿಂದ ಈ ಕಾರ್ಯವು ಸಾಧಿಸಲಾರದೆಂದು ಇಷ್ಟು ದಿನ ಭಗ್ನಮನೋರಥಳಾಗಿದ್ದೆನು. ನಾನು ಹೇಳಿದಂತೆ ನಡೆಯಲೊಪ್ಪಿದರೆ ಭಾವೀ ಸಂಗ್ರಾಮದಲ್ಲಿ ನೀವು ನಿಶ್ಚಯವಾಗಿ ವಿಜಯಶಾಲಿಗಳಾಗುವಿರಿ.''

"ವ್ರಜಬಾಲೆ, ನಾನು ನಿನ್ನ ಮಾತಿಗೆ ಹೊರತಿಲ್ಲ ನೀನು ನನ್ನ ಸಂಗಡ ಕಟಕ ವಾರಣಾಶಿಗೆ ಬರುವೆಯಾ? ನಿಶ್ಚಯವಾಗಿಯೂ ಬರುವೆಯಾ? ವ್ರಜಬಾಲೆ, ನಿನ್ನ ಮಾತುಗಳು ನಿಜವಾದವುಗಳೇ? ನೀನು ನನ್ನೊಡನೆ ಬರುವೆಯಾ?''

"ಮಹಾರಾಜರೆ, ನಾನು ನಿಜವಾಗಿಯೂ ನಿಮ್ಮೊಡನೆ ಬರುವೆನು. ರಾಷ್ಟ್ರಕಾರ್ಯ ಮಾಡಬೇಕೆಂದು ಸುಸಜ್ಜಿತಳಾದ ನನಗೆ ಎಲ್ಲಿ ಹೋಗಲಿಕ್ಕೂ ಪ್ರತ್ಯವಾಯವಿಲ್ಲ. ಪ್ರಸಂಗವೊದಗಿದರೆ ಕೈಯಲ್ಲಿ ಖಡ್ಗವನ್ನು ಧರಿಸಿ ಮಹಿಷಾಸುರಮರ್ದಿನಿಯಂತೆ ಸಂಗ್ರಾಮ ಕೌಶಲ್ಯವನ್ನು ತೋರಿಸಲಿಕ್ಕಾದರೂ ನನ್ನ ಸಿದ್ಧತೆಯಿರುವದು.''

ವ್ರಜಬಾಲೆಯ ಮಾತುಗಳನ್ನು ಕೇಳಿ ಮುಕುಂದದೇವನು ಆನಂದಮಯನಾದನು. ಪಲ್ಲಕ್ಕಿಯನ್ನು ಕಳಿಸಿದರೂ, ಅನೇಕ ವಸ್ತ್ರಾಲಂಕಾರಗಳ ಕಾಣಿಕೆಗಳನ್ನರ್ಪಿಸಿದರೂ ತನ್ನ ವಿನಂತಿಯನ್ನು ಧಿಃಕರಿಸಿದ ವ್ರಜಬಾಲೆಯು, ಈಗ ತಾನಾಗಿ ಕಟಕವಾರಣಾಶಿಗೆ ಹೊರಡಲು ಸಜ್ಜಾದದ್ದನ್ನು ನೋಡಿ ಅವನು ವಿಸ್ಮಿತನಾದನು. ದಿವ್ಯಲಾವಣ್ಯಮಯಿಯ ಚಿರ ಸಹವಾಸ ಸುಖವು ದೊರೆಯುವದೆಂಬ ಭ್ರಾಮಕ ಕಲ್ಪನೆಯಿಂದ ಅವನು ತನ್ನಷ್ಟಕ್ಕೆ ತಾನೇ ಕೃತಕೃತ್ಯನಾದೆನೆಂದು ಭಾವಿಸಿದನು. ಮೋಹಕಳಾದ ವ್ರಜಬಾಲೆಯು ಸೌಂದರ್ಯಮೋಹಿತನಾದ ಆ ಕಾಮಾಂಧನಿಗೆ, ಭಾವೀ ಸಂಗ್ರಾಮದ ಪಡಿಕಟ್ಟು ಆಗ ಹೇಗೆ ಗೊತ್ತಾಗಬೇಕು?

ಮುಕುಂದದೇವನು ವ್ರಜಬಾಲ – ಉಷಾಸುಂದರಿಯರನ್ನೊಡಗೊಂಡು ಜಗನ್ನಾಥಪುರಿಯಿಂದ ಕಟಕಪಾರಣಾತಿಗೆ ಅಂದೇ ಪ್ರಯಾಣ ಬೆಳೆಯಿಸಿದನು.



## ಜಡಸ್ವಾರ್ಥಿ.

ವಂಗೇಶ್ವರನಾದ ಸಲಿಮನ ಸುಲತಾನನ ಆಜ್ಞೆಯನ್ನು ಹೊಂದಿ ಕಾಳಾಪಹಾಡನು ಅಮೋಘವಾದ ಸೈನ್ಯದೊಡನೆ ಗೌಡರಾಜಧಾನಿಯಿಂದ ಹೊರಟು ತ್ರಿವೇಣಿಯ ಬಳಿಯಲ್ಲಿ ಬೀಡುಬಿಟ್ಟಿದ್ದನು. ಅವನು ತನ್ನ ಪ್ರೀತಿಯ ಸೇವಕನಾದ ಬೂನಾನನ್ನು ಸಂಗಡ ಕರೆದುಕೊಂಡು ಹೊರಟಿದ್ದನು. ಹಿಂದುಗಳ ದೇವಮೂರ್ತಿಗಳನ್ನೂ, ದೇವಸ್ಥಾನಗಳನ್ನೂ, ಅವುಗಳೊಡನೆ ಉತ್ಕಲದೇಶದ ಸ್ವಾತಂತ್ರ್ಯಸಿಂಹಾಸನವನ್ನೂ ಉಧ್ವಸ್ತಗೊಳಿಸಿ, ತನ್ನ ಹೃದಯದಲ್ಲಿ ಧಗಧಗಿಸುತ್ತಿರುವ ಸಂತಾಪಾಗ್ನಿಯನ್ನು ಶಾಂತಗೊಳಿಸಬೇಕೆಂದು ಅವನು ದೃಢಸಂಕಲ್ಪನಾಗಿದ್ದನು. ಈಗ ಅವನ ಹೃದಯವು ಕಲ್ಲಿಗಿಂತಲೂ ಕಲ್ಲಾಗಿತ್ತು! ಜಾತಿಭ್ರಷ್ಟರಂತಹ ಶತ್ರುಗಳಿಲ್ಲವೆಂಬ ನಾಣ್ನುಡಿಯು ಯಥಾಸ್ಥಿತವಾದದ್ದಿರುವದು. ಮನಸ್ಸಿನ ಇಚ್ಛೆಯು ನೆರವೇರದಿದ್ದರೆ ಮನುಷ್ಯನು ವಿವೇಕವನ್ನು ಕಳೆದುಕೊಳ್ಳುತ್ತಾನೆ; ಅವಿವೇಕಿಯಾದ ಕೂಡಲೆ ಬುದ್ಧಿಭ್ರಂಶವಾಗುವದು; ಬುದ್ಧಿನಾಶಹೊಂದಿದ ಮೇಲೆ ಮನುಷ್ಯನು ಎಂತಹ ಅನರ್ಥಗಳನ್ನು ಮಾಡಲಿಕ್ಕೂ ಹಿಂಜರಿಯುವದಿಲ್ಲ. ಕಾಳಾಪಹಾಡನ ಸ್ಥಿತಿಯಾದರೂ ಬಹ್ವಂಶದಿಂದ ಇದೇ ಬಗೆಯದಾಗಿತ್ತು. ಪವಿತ್ರವಾದ ಸನಾತನ ಧರ್ಮದ ಕಡೆಗೆ ಓಡಿಬರುತ್ತಿದ್ದ ಆ ಸ್ವಧರ್ಮಪ್ರೇಮಿಯನ್ನು ಸಮಾಜವು ನಿರ್ದಯತೆಯಿಂದಲೂ ನಿಷ್ಠುರತೆಯಿಂದಲೂ ಅಪಮಾನಗೊಳಿಸಿದಾಗಲೆ ಅವನ ಮನಸ್ಸು ವಿಭ್ರಮೆಗೊಂಡಿತು; ಮಾನಧನನಾದ ಅವನ ಸಂತಾಪವು ಮೇರೆದಪ್ಪಿತು.

ಅವಿಚಾರಿಗಳೂ ಅನ್ಯಾಯ ಪರಾಯಣರೂ ಆಗಿದ್ದ ಹಿಂದುಗಳ ಮೇಲಿನ ಸೇಡನ್ನು ತೀರಿಸಿಕೊಳ್ಳಬೇಕೆಂದು ಆ ಸ್ವಾಭಿಮಾನಿಯು ನಿರ್ಧರಿಸಿಕೊಂಡನು. ಕೂಡಲೆ ರಾಜಾಜ್ಞೆಯನ್ನು ಹೊಂದಿ ಓರಿಸಾ ದೇಶವನ್ನು ಪಾದಾಕ್ರಾಂತ ಮಾಡಿಕೊಳ್ಳುವದಕ್ಕಾಗಿ ಅವನು ಒಂದು ಲಕ್ಷ ಸೇನೆಯೊಡನೆ ರಭಸದಿಂದ ಹೊರಟನು. ಅವನು ನದೀತೀರದಲ್ಲಿ ಬೀಡು ಬಿಟ್ಟಾಗ ಬೂಸಾನೊಡನೆ ಮಾತನಾಡುತ್ತ ಕುಳಿತಿದ್ದನು. ಅದೂರದರ್ಶಿಗಳೂ ಡಾಂಭಿಕರೂ ಆದ ಹಿಂದುಗಳು ತಮ್ಮ ಧರ್ಮದ ಹಾಗು ರಾಜ್ಯದ ಮೇಲೆ ವಿಲಕ್ಷಣವಾದ ಗಂಡಾಂತರವನ್ನು ಹೇಗೆ ತಂದುಕೊಂಡರೆಂಬ ಸಂಗತಿಯನ್ನು ಕಾಲಾಪಹಾರದನು ಬೂಸಾನ ಮುಂದೆ ಹೇಳಿದನು. ಅನಂತರದಲ್ಲಿ ಅವನು ಬೂಸಾನನನ್ನು ಕುರಿತು —"ಬೂಸಾ, ನೀನು ತ್ರಿವೇಣಿಯೆಂಬ ಹೆಸರನ್ನು ಕೇಳಿರುವೆಯಾ?"

"ಮಹಾರಾಜರೆ, ತ್ರಿವೇಣಿಯ ಹೆಸರನ್ನು ಕೇಳದಿರಲಿಕ್ಕೆ ಏನಾಗಿದೆ?"

"ಅಲ್ಲಿಂದ ಸಮೀಪದಲ್ಲಿಯೆ ಮುಕ್ತವೇಣಿಯಿರುವದು."

"ಹಾಗಾದರೆ ಒಂದು ವೇಳೆ ನಾವು ಅಲ್ಲಿಗೆ ಹೋಗೋಣ."

"ಹಿಂದುಗಳ ಕ್ಷೇತ್ರಕ್ಕೆ ಹೋಗಲಿಕ್ಕೆ ನಮಗೆ ಅಧಿಕಾರವಿಲ್ಲ."

"ತ್ರಿವೇಣಿಯು ಇಲ್ಲಿಗೆ ಸಮೀಪವಾಗಿರಬಹುದಲ್ಲವೆ?"

"ಎರಡು-ಮೂರು ಕ್ರೋಶಗಳ ಮೇಲಿರುವದು."

"ತ್ರಿವೇಣಿಯ ಬಳಿಯಲ್ಲಿ ಹಿಂದುಸೈನ್ಯವು ತಳವೂರಿರುವದೆಂಬ ವಾರ್ತೆಯಿರುವದು."

"ಹೌದು."

"ತ್ರಿವೇಣೀಸೋಪಾನದ ಬಳಿಯಲ್ಲಿ ದಶಾವತಾರದ ಮೂರ್ತಿಸಹಿತವಾದ ವಿಷ್ಣುಮಂದಿರವಿರುವದಲ್ಲವೆ?"

"ಹೌದು."

"ಹಾಗಾದರೆ ಅಲ್ಲಿಗೆ ಹೋಗಿ ದೇವದರ್ಶನವನ್ನು ತೆಗೆದುಕೊಂಡು ಬರೋಣ."

"ಈಗಲೇ ಬೇಡ. ಯಾವಾಗ ಅವುಗಳ ನಾಶ ಮಾಡುವ ಪ್ರಸಂಗ ಬರುವದೋ ಆಗ ಎಲ್ಲ ದೇವಮೂರ್ತಿಗಳ ದರ್ಶನವು ತಾನಾಗಿಅಗುವದು."

ಕಾಳಾಪಹಾಡನ ಮಾತಿಗೆ ಬೂನಾನು ಉತ್ತರವೀಯದೆ ಸುಮ್ಮನೆ ಕುಳಿತನು. ಅಷ್ಟರಲ್ಲಿ ಯಾರೋ ಒಬ್ಬರು—"ಕಾಲಾಚಾಂದ, ಮೂರ್ತಿಪೂಜಕನಾದ ನೀನು ಮೂರ್ತಿಭಂಜಕನಾಗಿ ನಿನ್ನ ಕೀರ್ತಿಯು ನಾಶಮಾಡಲುದ್ಯುಕ್ತನಾಗಿರುವೆಯಾ?"

ಕಾಳಾಪಹಾಡನು ಆಶ್ಚರ್ಯಚಕಿತನಾಗಿ ತಿರುಗಿ ನೋಡಿದನು. ತನ್ನನ್ನು ಉದ್ದೇಶಿಸಿ ಮಾತನಾಡಿದವನು ಯಾರೆಂಬುದನ್ನು ಅವನು ಕೂಡಲೆ ಗುರತಿಸಿದನು. ಆಗ ಅವನು ಆ ಮನುಷ್ಯನನ್ನು ಕುರಿತು— "ಗದಾಧರ, ನೀನು ಇತ್ತ ಬಂದ ಕಾರಣವೇನು!"

"ನಾನು ನಿನ್ನ ಭೆಟ್ಟಿಗಾಗಿ ಬಂದಿರುವೆನು. ಕಾಲಾಚಾಂದ ರಾಯ, ನೀನು ಈ ಸೇನಾಸಾಗರದೊಡನೆ ಎಲ್ಲಿಗೆ ಹೊರಟಿರುವೆ?"

"ಓರಿಸಾ ಪ್ರಾಂತವನ್ನು ಪಾದಾಕ್ರಾಂತಗೊಳಿಸಲು ಹೊರಟಿರುವೆನು."

"ನೀನು ಇದೇನು ಮಾತನಾಡತೊಡಗಿರುವೆ! ಓರಿಸಾದೇಶವು ಅಂತಹ ಅಪರಾಧವನ್ನೇನು ಮಾಡಿರುವದು? ದೇವಮೂರ್ತಿಗಳನ್ನು ವಿಧ್ವಂಸಗೊಳಿಸಲಿಕ್ಕೆ ನೀನು ಸಜ್ಜಾದದ್ದು ನೋಡಿ ನನಗೆ ಸಖೇದಾಶ್ಚರ್ಯವೆನಿಸುತ್ತದೆ! ನಿನ್ನಿಂದ ತೀರ ವಿಪರೀತ ಕೃತ್ಯಗಳು ಜರುಗಲಾರಂಭಿಸಿದವು. ಕಾಲಾಚಾಂದ, ಹಿಂದುವೆನಿಸಿಕೊಳ್ಳುತ್ತಿದ್ದ ನಿನಗೆ ಈ ವಿಚಾರಣೆಯು ಯೋಗ್ಯವಾದದ್ದಲ್ಲ. ನೀನು ಈಗ ಯವನ ಧರ್ಮವನ್ನು ಸ್ವೀಕರಿಸಿದ್ದರೂ, ನಿನ್ನ ಮೂಲಧರ್ಮದ ಹಾಗು ಜನ್ಮಭೂಮಿಯ ಅಭಿಮಾನವನ್ನು ಮರೆಯತಕ್ಕದ್ದಲ್ಲ. ಓರಿಸಾದ ಸ್ವಾತಂತ್ರ್ಯ ಸಿಂಹಾಸನವು ನಿನ್ನ ಕಣ್ಣಲ್ಲಿ ಒತ್ತತೊಡಗಿರುವದೇನು? ಅಖಿಲ ಭಾರತವನ್ನು ಪಾದಾಕ್ರಾಂತಗೊಳಿಸಿ, ಭಾರತೀಯರಿಗೆ ಪಾರತಂತ್ರ್ಯ ಶೃಂಖಲೆಗಳನ್ನು ತೊಡಿಸಬೇಕೆನ್ನುವ ವಿದೇಶೀಯರ ರಾಕ್ಷಸೀ ಲಾಲಸೆಗೆ ಅನುಕೂಲನಾಗಿ ವರ್ತಿಸಿದರೆ, ನಿನಗೆ ದೊರೆಯುವ ಲಾಭವೇನು? ಸ್ವಜನರ ಹಿಂಸೆ ಮಾಡಿದರೆ ನೀನು

ಯಾವ ಪುರುಷಾರ್ಥವನ್ನು ಸಾಧಿಸಿದಂತಾಗುವದು? ನೀನು ಜಾತಿಭ್ರಷ್ಟನಾಗಿದ್ದರೂ, ನಿನ್ನ ತಾಯಿ-ತಂದೆಗಳೂ, ಬಂಧು-ಬಳಗದವರೂ, ಇಷ್ಟ-ಮಿತ್ರರೂ ಹಿಂದುಗಳೆಂಬದನ್ನು ಮರೆಯಬೇಡ. ನಿನ್ನ ಶರೀರವು ಹಿಂದು ವಿರುವದು. ನಿನ್ನ ದೇಹದೊಳಗಿನ ರಕ್ತಬಿಂದುಗಳೂ ಶರೀರ ಘಟಕಗಳೊಳಗಿನ ಪ್ರತಿಯೊಂದು ಅಣು-ಪರಮಾಣುಗಳೂ ಹಿಂದುವಿರುವವು. ಹೀಗಿದ್ದು, ನೀನು ಇಂತಹ ರಾಕ್ಷಸೀ ಕಾರ್ಯಕ್ಕೆ ಸಿದ್ಧನಾಗಬಹುದೆ?''

''ಗದಾಧರ, ನಾನು ಈಗ ತಾಯಿ-ತಂದೆಗಳನ್ನೂ, ಅಣ್ಣ-ತಮ್ಮಂದಿರನ್ನೂ, ಬಳಗದವನ್ನೂ, ಇಷ್ಟ-ಮಿತ್ರರನ್ನೂ ಲೆಕ್ಕಿಸುವದಿಲ್ಲ; ಜನ್ಮಭೂಮಿಯನ್ನು ನಾನು ಪೂರಾ ಮರೆತಿರುವೆನು. ದೇವಮೂರ್ತಿಗಳೂ ದೇವಮಂದಿರಗಳೂ ನನ್ನ ಸ್ಮರಣೆಯಲ್ಲಿಲ್ಲ. ನಾನು ಈಗ ಸ್ವಕೀಯ ಭಾವನೆಗಳನ್ನು ಮರೆತಿರುವೆನು. ಪ್ರತಿಯೊಬ್ಬ ಹಿಂದುವು ನನ್ನ ಕಣ್ಣಿಗೆ ಅಪರಾಧಿಯಾಗಿ ಕಾಣತೊಡಗಿರುವನು. ನಾನು ಇಷ್ಟು ನೈಘೃಣ್ಯವನ್ನು ಹೊಂದಿದ ಉದ್ದೇಶವು ಯಾರಿಗೂ ಅರಿಯದ್ದಾಗಿರುವದಿಲ್ಲ. ಆಶ್ರಯ ಬೇಕೆಂದು ಸಾಮಾನ್ಯ ಯಾಚಕನಂತೆ ಮನೆ ಮನೆ ತಿರುಗಿದೆನು; ಘನ ವಿದ್ವಾಂಸರೆಂದು ಮೆರೆಯುತ್ತಿದ್ದವರಲ್ಲಿ ವಿನಂತಿ ಮಾಡಿಕೊಂಡೆನು; ಬಂಧು-ಮಿತ್ರರನ್ನು ಬೇಡಿಕೊಂಡೆನು; ಆಗ ನನ್ನನ್ನು ಎಲ್ಲರೂ ಉಪೇಕ್ಷಿಸಿದರು. ನಿರಪರಾಧಿಯೂ, ಪವಿತ್ರ ಸನಾತನ ಧರ್ಮದವನೂ, ಆಸ್ತಿಕ ಭಾವನೆಯುವನೂ ಆದ ನನ್ನನ್ನು ಒಬ್ಬ ಭಿಕ್ಷುಕನಿಗಿಂತ ಕಡೆಯೆಂದು ಎಲ್ಲ ಹಿಂದುಗಳೂ ತಿಳಿದರು. ಪಂಚಮಹಾಪಾತಕಗಳನ್ನು ಮಾಡಿದ ಅಪರಾಧಿಯಂತೆ ನಾನು ಅವರಿಗೆ ಕಂಡೆನು. ಆದ್ದರಿಂದ ಎಲ್ಲ ಜನರೂ ನನ್ನನ್ನು ಸಮಾಜ ಚ್ಯುತನನ್ನು ಮಾಡಿ, ಭಯಂಕರವಾದ ಅಪಮಾನ ಮಾಡಿದರು. ಗದಾಧರ, ನನ್ನ ಬಾಹುಗಳಲ್ಲಿ ಶಕ್ತಿಯಿಲ್ಲವೆ? ಹೃದಯದಲ್ಲಿ ವೀರಾವೇಶ ವಿಲ್ಲವೆ? ಅಂತಃಕರಣವು ಸ್ವಾಭಿಮಾನ ಪೂರ್ಣವಿರುವದಿಲ್ಲವೆ? ಹೀಗಿದ್ದ ಮೇಲೆ ನನಗಾದ ಅಪಮಾನದ ಸೇಡನ್ನು ಅತ್ಯಂತ ಭೀಷಣವಾದ ರೀತಿಯಿಂದ ತೀರಿಸಿಕೊಳ್ಳದೆ ನಾನು ಹೇಗೆ ಸುಮ್ಮನಿರಲಿ? ನಾನು ಈಗ ಎಲ್ಲ ಬಗೆಯ ದಯಾವ್ಯಾಮೋಹಗಳನ್ನು ತೊರೆದಿರುವೆನು. ಅಂತಃಕರಣ

ವನ್ನು ಪಾಷಾಣಕ್ಕಿಂತಲೂ ಕಠಿಣ ಮಾಡಿಕೊಂಡಿರುವೆನು. ಹಿಂದು ಜನರೂ, ಹಿಂದುದೇವತೆಗಳೂ, ಹಿಂದುಗಳ ಸ್ವಾತಂತ್ರ್ಯಸಿಂಹಾಸನವೂ ಇನ್ನು ನನ್ನ ಕೈಯೊಳಗಿಂದ ಪಾರಾಗುವದಿಲ್ಲ. ಇಷ್ಟು ಮಾತಿನಿಂದ ಎಲ್ಲವನ್ನೂ ತಿಳಿದುಕೋ!''

''ತಿಳಿಯಿತು; ನಿನ್ನ ಮನೋಭಿಲಾಷೆಯು ಚನ್ನಾಗಿ ತಿಳಿಯಿತು. ಇಷ್ಟಕ್ಕಿಂತ ಹೆಚ್ಚಾಗಿ ವಿಶದ ಪಡಿಸಬೇಕೆಂದು ನನ್ನ ಆಗ್ರಹವಿಲ್ಲ. ನಿನ್ನ ತಾಯಿಯು ವೈರಿಯಾದಳೆಂದು ಅವಳನ್ನು ಕೊಲ್ಲಲಿಕ್ಕೆ ನೀನು ಸಿದ್ಧನಾದಂತಾಯಿತು. ಯಾವ ದೇವಮೂರ್ತಿಗಳ ರಕ್ಷಣೆಗಾಗಿ ನಿನ್ನ ಪೂರ್ವಜರು ತಮ್ಮ ರಕ್ತವನ್ನು ರಣದೇವತೆಗೆ ಅರ್ಪಿಸಿದರೋ, ಅದೇ ವಂಶದವನಾದ ನೀನು ನಿನ್ನ ಕೈಯಿಂದ ಆ ದೇವಮೂರ್ತಿಗಳ ವಿಧ್ವಂಸಗೊಳಿಸಲಿಕ್ಕೆ ಸಿದ್ಧನಾದೆ. ಯಾವ ಆರ್ಯಸಿಂಹಾಸನದ ರಕ್ಷಣೆಗಾಗಿ ಎಷ್ಟೋ ಹಿಂದುಗಳು ಇದುವರೆಗೆ ತಮ್ಮ ದೇಹಗಳನ್ನು ಧಾರಾತೀರ್ಥದಲ್ಲಿ ಕೆಡಹಿದರೋ, ಆ ಸಿಂಹಾಸನದ ನಾಶಕ್ಕಾಗಿ ಹಿಂದುರಕ್ತದವನಾದ ನೀನು ಸಿದ್ಧನಾಗಿರುವೆ. ತಿಳಿಯಿತು; ನಿನ್ನ ಅಂತರಂಗವೆಲ್ಲವೂ ನನಗೆ ಚನ್ನಾಗಿ ತಿಳಿಯಿತು. ಒಳ್ಳೇದು; ಕಾಲಾಚಾಂಡ, ನಿನ್ನ ತಾಂಡವ ನೃತ್ಯವು ನಡೆಯಲಿ! ಹಿಂದಮಾತೆಯನ್ನು ನೆಲಕ್ಕೆ ಕೆಡಹಿ ಅವಳ ಎದೆಯ ಮೇಲೆ ವಿಕಟ ನೃತ್ಯವನ್ನು ಮಾಡಬೇಕೆನ್ನುವ ನಿನ್ನ ಇಚ್ಛೆಯು ನೆರವೇರಲಿ! ನಿನ್ನ ಮಿತ್ರನೆನಿಸಿಕೊಳ್ಳುತ್ತಿದ್ದ ನನ್ನಿಂದ ಇದಕ್ಕೂ ಹೆಚ್ಚಿನ ಸಹಾನುಭೂತಿಯು ಇನ್ನೇನು ದೊರೆಯಬೇಕು?''

''ಗಧಾಧರ, ನಿನ್ನ ಮಾರ್ಮಿಕ ಮಾತುಗಳನ್ನು ಗುರುತಿಸದಂತಹ ಮೂರ್ಖನು ನಾನಿರುವದಿಲ್ಲ. ಪ್ರತಿಯೊಬ್ಬ ಹಿಂದುವು ನಿನ್ನನ್ನು ತುಚ್ಛೀಕರಿಸತೊಡಗಿದರೆ ನಿನ್ನ ಮನಸ್ಸು ಶಾಂತವಾಗಿ ಉಳಿಯುವದೇನು? ನನ್ನ ಮೇಲೆ ಬಂದಿದ್ದ ಪ್ರಸಂಗವು ನಿನ್ನ ಮೇಲೆಯೂ ಬಂದರೆ, ನೀನು ಆ ಅಪಮಾನವನ್ನು ಸಹಿಸಿಕೊಳ್ಳುವೆಯಾ? ಹಿಂದುಗಳ ಮನೆಗಳಲ್ಲಿಯೂ, ಹಿಂದುಗಳ ಕ್ಷೇತ್ರಗಳಲ್ಲಿಯೂ, ಹಿಂದುಗಳ ದೇವಸ್ಥಾನಗಳಲ್ಲಿಯೂ, ನಾಯಿಗಿಂತ ಕೀಳು ಮಾಡಿ ಹೊಡೆದಟ್ಟಿದರೆ ನಿನಗೆ ಹೇಗಾದೀತು? ನಿನ್ನ

ತಾಯಿಯು ನಿನ್ನನ್ನು ಧಿಃಕರಿಸಿದರೆ ಅವಳನ್ನು ನೀನು ಮನ್ನಿಸುವೆಯಾ? ಧರ್ಮಪತ್ನಿಯು ನಿರ್ಭತ್ಸ್ರನೆ ಮಾಡಿ ಹೊರಟು ಹೋಗಿ ಶತ್ರುಗಳನ್ನು ಕೂಡಿಕೊಂಡು ನಿನ್ನ ಪ್ರಾಣನಾಶ ಮಾಡಲುದ್ಯುಕ್ತಳಾದರೆ, ಅವಳನ್ನು ಗೃಹಲಕ್ಷ್ಮಿಯೆಂದು ಭಾವಿಸುವೆಯಾ? ಆಪ್ತೇಷ್ಟರು ಏಟಂಬನೆ ಮಾಡ ತೊಡಗಿದರೆ ನೀನು ಅವರ ಅಪರಾಧಗಳನ್ನು ಸಹಿಸುವೆಯಾ? ಅನೇಕ ಬಗೆ ಯಿಂದ ಅಪಮಾನ-ಪರಿತಾಪಗಳನ್ನು ಹೊಂದಿಯೂ ಅದರ ಸೇಡು ತೀರಿಸಿ ಕೊಳ್ಳಬಾರದೆಂದು ನಿನ್ನ ಭಾವನೆಯಿದ್ದರೆ, ನಿನ್ನಲ್ಲಿ ಮನುಷ್ಯತ್ವವಿಲ್ಲ ವೆಂದು ಜನರು ತಿಳಿದುಕೊಳ್ಳಬಾರದೇಕೆ? ಹೇಳು; ಗದಾಧರ, ನನ್ನ ಈ ಮಾತಿಗೆ ಉತ್ತರವನ್ನು ನೀನೇ ಹೇಳು.''

''ಕಾಲಾಚಾಂದ, ನೀನು ನನ್ನ ಅಭಿಪ್ರಾಯವನ್ನು ಕೇಳಿ ಮಾಡು ವದೇನು? ನನಗೆ ವಿಪನ್ನಾವಸ್ಥೆಯು ಒದಗಿದ್ದರೆ ನಾನು ಸರ್ವಜ್ಞನೂ ಸರ್ವವ್ಯಾಪಿಯೂ ಆದ ದಯಾಘನ ಪರಮಾತ್ಮನನ್ನು ಆರಾಧಿಸುತ್ತ ಕಾಲ ಕಳೆಯುತ್ತಿದ್ದೆನು. ನಿನ್ನ ಸ್ವಭಾವವು ನನ್ನಂತಿಲ್ಲ. ನೀನು ಮಾನ ಧನನು. ನೀನು ಹಿಂದುಗಳ ಮೇಲಿನ ಸೇಡು ತೀರಿಸಿಕೊಳ್ಳಲು ಸಿದ್ಧ ನಾಗಿರುವೆಯಲ್ಲವೆ? ಬಹಳೇ ಉತ್ತಮವಾಯಿತು. ನಿನ್ನೊಡನೆ ಮಾತಾ ಡುವ ಕಾರಣವೇ ಉಳಿಯಲಿಲ್ಲ. ಒಳ್ಳೇದು, ನಾನು ಬರುತ್ತೇನೆ. ಯೋಗ್ಯ ವೇಳೆಯಲ್ಲಿ ನನ್ನ ನಿನ್ನ ಭೆಟ್ಟಿಯಾಗುವದು.''

''ಎಲ್ಲಿ ಭೆಟ್ಟಿಯಾಗುವೆ?''

''ರಣಭೂಮಿಯಲ್ಲಿ.''

''ಗದಾಧರ, ನಾವು ಪರಸ್ಪರರು ವೈರಿಗಳಲ್ಲ; ಮಿತ್ರರಿರುವೆವು. ನೀನು ಹಿಂದುವಿದ್ದರೂ, ನನ್ನನ್ನು ಅಪಮಾನಗೊಳಿಸಿದ್ದರೂ, ನಿನ್ನ ನಾಶ ಕ್ಕಾಗಿ ನನ್ನ ಮನಸ್ಸು ಒಪ್ಪಲೊಲ್ಲದು. ನೀನು ಶುದ್ಧಾಂತಃಕರಣಿಯು. ಸಮಾಜದ ಅಂಜಿಕೆಯಿಂದ ನೀನು ನನ್ನನ್ನು ಅಪಮಾನಗೊಳಿಸಿರುವೆ. ನಾನು ಈ ಮಾತಿಗೆ ಅಷ್ಟೊಂದು ಮಹತ್ವ ಕೊಡುವದಿಲ್ಲ.''

''ಕಾಲಾಚಾಂದ, ಎಲ್ಲ ಹಿಂದುಗಳು ನಿನಗೆ ಶತ್ರುಗಳಾಗಿ ಕಾಣು ತ್ತಿರುವಾಗ ನನ್ನ ಮಹತ್ವವೇನು? ಸ್ವಜನರಿಗೂ ಸ್ವಧರ್ಮಕ್ಕೂ ಸ್ವದೇಶ

ಕ್ಕೂ ಕಾಲಸ್ವರೂಪಿಯಾಗಿದ್ದ ನೀನು ನನ್ನ ವಿಷಯವಾಗಿ ಸಹಾನುಭೂತಿಯನ್ನು ತಳೆಯುವದು ಅನುಚಿತವು. ಅತ್ಯಂತ ಸಮರ್ಥನಾದ ನಿನಗೆ ಯಾವದು ತಾನೆ ಅಸಾಧ್ಯವು? ಮಾತೃಭೂಮಿಗಾಗಿ-ಹಿಂದುಗಳ ಸ್ವಾತಂತ್ರ್ಯ ಸಿಂಹಾಸನಕ್ಕಾಗಿ-ಈಗ ಗದಾಧರನು ತನ್ನ ಪಂಚಪ್ರಾಣಗಳನ್ನು ಸಮರ್ಪಿಸಲಿಕ್ಕೆ ಸಿದ್ಧನೇ ಇರುವನು."

ಗದಾಧರನು ಹೀಗೆ ನುಡಿದವನೆ ಅಲ್ಲಿಂದ ಹೊರಟು ಹೋದನು. ಮುಂದೆ ಸ್ವಲ್ಪ ವೇಳೆಯಲ್ಲಿ ಒಬ್ಬ ಮನುಷ್ಯನು ಅಲ್ಲಿಗೆ ಬಂದು ಕಾಳಾಪಹಾಡನಿಗೆ ನಮಸ್ಕಾರ ಮಾಡಿ—"ಕಾಳಾಪಹಾಡ ಸೇನಾಪತಿಗಳೇ, ಈ ನಿಮ್ಮ ಚರಣಸೇವಕನ ಮೇಲೆ ಪ್ರೇಮವಿರಲಿ."

ಕಾಳಾಪಹಾಡನು ಅವನ ಮಾತುಗಳನ್ನು ಕೇಳಿ—"ನೀನು ಯಾರು?"

"ನಾನು ಓರಿಸಾ ಪ್ರಾಂತದೊಳಗಿನ ಒಬ್ಬ ಹಿಂದುವಿರುವೆನು. ಜನಾರ್ದನ ಮಹಾಮಂತ್ರಿಗಳು ತಮ್ಮ ಪತ್ರವನ್ನು ತಲುಪಿಸುವದಕ್ಕಾಗಿ ನನ್ನನ್ನು ಕಳಿಸಿರುವರು."

"ನಿಮ್ಮ ಮಂತ್ರಿಗಳು ಎಲ್ಲಿರುವರು?"

"ನದಿಯ ಪೈಲತೀರದಲ್ಲಿರುವರು."

ಕಾಲಾಚಾಂದನು ಆ ಮನುಷ್ಯನಿಂದ ಪತ್ರವನ್ನು ತೆಗೆದುಕೊಂಡು ಓದಿದನು. ಅನಂತರದಲ್ಲಿ ಅವನು ಆ ಮನುಷ್ಯನನ್ನು ಕುರಿತು—"ಒಳ್ಳೇದು. ನಿನ್ನ ಒಡೆಯನನ್ನು ಇಲ್ಲಿಗೆ ಕಳಿಸು. ಹಿಂದುಗಳ ಅಧಃಪಾತವು ಸಮೀಪದಲ್ಲಿ ಬಂದಿರುವದು."

ಸೇವಕನು ಹೋದ ಒಂದೆರಡು ಗಳಿಗೆಯಲ್ಲಿ ಓರಿಸಾ ದೇಶದ ಮಹಾಮಂತ್ರಿಯಾದ ಜನಾರ್ದನನು ಕಾಳಾಪಹಾಡನ ಬಳಿಗೆ ಬಂದನು. ಅವನು ಕಾಳಾಪಹಾಡನಿಗೆ ನಮಿಸಿದನು. ಮಂತ್ರಿಯ ನಮಸ್ಕಾರವನ್ನು ಸ್ವೀಕರಿಸಿ, ಕಾಳಾಪಹಾಡನು ಅವನನ್ನು ತನ್ನ ಬಳಿಯಲ್ಲಿ ಕುಳ್ಳಿರಿಸಿಕೊಂಡು—"ಉತ್ಕಲದೇಶದ ಮಹಾ ಮಂತ್ರಿಗಳು ನೀವೇ ಏನು?"

"ಹೌದು."

"ನೀವು ನನ್ನ ಕಡೆಗೆ ಬಂದ ಉದ್ದೇಶವೇನು?"

"ನನ್ನ ಉದ್ದೇಶವು ಪತ್ರದಿಂದ ನಿಮಗೆ ಗೊತ್ತಾಗಿರಬಹುದು."

"ಅಷ್ಟೊಂದು ಚನ್ನಾಗಿ ಬೋಧವಾಗಲಿಲ್ಲ."

"ಸೇನಾಪತಿಗಳೆ, ನಿಮಗೆ ಸಹಾಯ ಮಾಡಬೇಕೆಂದು ನನ್ನ ಇಚ್ಛೆಯಿರುವದು. ನನ್ನ ವಶದಲ್ಲಿ ಐದು ಸಾವಿರ ಸೈನ್ಯವಿರುವದು. ನನ್ನ ಸೈನ್ಯವು ನಿಮಗೆ ಅನುಕೂಲವಾದರೆ ತ್ರಿವೇಣಿಯ ಸಂಗ್ರಾಮದಲ್ಲಿ ನೀವು ನಿಜವಾಗಿ ವಿಜಯಶಾಲಿಗಳಾಗುವಿರಿ. ಎರಡನೆಯ ಯುದ್ಧವು ಯಜ್ಞಪುರದಲ್ಲಾಗುವ ಸಂಭವವಿರುವದು. ಅಲ್ಲಿ ಯುವರಾಜ ರಾಮಚಂದ್ರದೇವನು ಒಂದು ಲಕ್ಷ ಸೈನ್ಯದೊಡನೆ ತಳವೂರಿರುವನು. ನನ್ನ ಕುಮಾರನಾದ ಹರಿಕೀರ್ತನನಾದರೂ ನಿಮಗೆ ಒಳಿತಾಗಿ ಸಹಾಯ ಮಾಡುವವನು. ಯುಕ್ತಿಪ್ರಯುಕ್ತಿಗಳಿಂದ ಸದ್ಯದ ದಂಡಯಾತ್ರೆಯಲ್ಲಿ ನಿಮಗೆ ಜಯದೊರೆಯುವಂತೆ ಮಾಡುವ ಕಾರ್ಯವು ನನ್ನನ್ನು ಕೂಡಿರುವದು."

"ಮುಕುಂದದೇವನು ಈಗ ಎಲ್ಲಿರುವನು?

"ಕಟಕ ರಾಜಧಾನಿಯಲ್ಲಿ."

"ಅಲ್ಲಿಯ ಕೋಟೆಯು ಬಹಳೇ ಭದ್ರವಿರುವದೆಂದು ಕೇಳುತ್ತೇನೆ; ಈ ಸಂಗತಿಯು ನಿಜವೊ?"

"ಕಟಕ ರಾಜಧಾನಿಯ ಕೋಟೆಯು ದುರ್ಭೇದ್ಯವಾದದ್ದಿರುವದೇನೋ ನಿಜವು. ನನಗೆ ಎಲ್ಲ ಕೋಟೆ-ಕೊತ್ತಳಿಗಳ ಆಯಕಟ್ಟಿನ ಸ್ಥಳಗಳೂ ಗುಪ್ತಮಾರ್ಗಗಳೂ ಗೊತ್ತಿರುವವು. ನೀವು ನನಗೆ ಆಶ್ರಯವಿತ್ತರೆ ವಿಜಯಲಕ್ಷ್ಮಿಯು ನಿಮ್ಮ ವಶಳಾಗುವಳೆಂಬದನ್ನು ನಂಬಿರಿ. ಈಗ ಮುಕುಂದದೇವನು ಒಬ್ಬ ಲಾವಣ್ಯಲತಿಕೆಯ ಆರಾಧನೆಯಲ್ಲಿ ತೊಡಗಿ, ರಾಜಕಾರಣವನ್ನು ದುರ್ಲಕ್ಷಿಸಿರುವನು. ಈ ಸಂಧಿಯ ಲಾಭ ಮಾಡಿಕೊಳ್ಳಬೇಕೆಂದು ನನ್ನ ಆಗ್ರಹದ ವಿನಂತಿಯುಂಟು."

"ನೀವು ನನಗೆ ಸಹಾಯ ಮಾಡಿದ್ದಕ್ಕಾಗಿ ಪ್ರತಿಫಲವನ್ನೇನು ಕೇಳು ವಿರಿ?"

"ಓರಿಸಾದ ಸಿಂಹಾಸನವನ್ನು ನನಗೆ ಕೊಡಿರಿ."

ಮಂತ್ರಿಯಾದ ಜನಾರ್ದನನು ಓರಿಸಾದ ಸಿಂಹಾಸನವನ್ನು ಬೇಡಿದ ಕೂಡಲೆ ಕಾಳಾಪಹಾಡನ ಹೃದಯವು ವಿಲಕ್ಷಣವಾದ ಸ್ಥಿತ್ಯಂತರವನ್ನು ಹೊಂದಿತು. ಓರಿಸಾದ ಅನ್ನದಿಂದ ಪರಿಪೋಷಿಸಲ್ಪಟ್ಟವನಾದ ಮಂತ್ರಿಯು ಆ ದೇಶವನ್ನು ಮುಳುಗಿಸಲು ತತ್ಪರನಾದದ್ದರಿಂದ ಅವನು ಮಂತ್ರಿಯನ್ನು ತುಚ್ಛತೆಯಿಂದ ನೋಡಲಾರಂಭಿಸಿದನು. ಯಾವದೊಂದು ಜಹಾಗೀರಿಯ ಲಾಲಸೆಯಿಂದ ಮಂತ್ರಿಯು ರಾಷ್ಟ್ರದ್ರೋಹ ಮಾಡಲಿಕ್ಕೆ ಸಿದ್ಧನಾಗಿರುವನೆಂದು ಮೊಟ್ಟಮೊದಲು ಕಾಳಾಪಹಾಡನ ಗ್ರಹಿಕೆಯಾಗಿತ್ತು. ಮಂತ್ರಿಯ ಇಚ್ಛೆಯು ಸಾಮಾನ್ಯತರದ್ದಾಗಿರದೆ, ಅವನು 'ಇಂದ್ರಾಯ ತಕ್ಷಕಾಯ ಸ್ವಾಹಾ' ಎನ್ನುವದಕ್ಕೆ ಸಿದ್ಧನಾಗಿರುವನೆಂಬದು ಕಾಳಾಪಹಾಡನಿಗೆ ಸ್ಪಷ್ಟವಾಗಿ ತಿಳಿಯಿತು. ಮಂತ್ರಿಯ ನೀಚತನವನ್ನು ಅವನು ಮನಸ್ಸಿನಲ್ಲಿಯೇ ನಿಂದಿಸತೊಡಗಿದನು. ಅವನು ಎಷ್ಟೋ ವೇಳೆಯ ವರೆಗೆ ವಿಚಾರಿಸಿ, ಅನಂತರದಲ್ಲಿ—ಮಂತ್ರಿಗಳೆ, ಜಯಾಪಜಯಗಳು ದೈವಾಧೀನವಾದವುಗಳು. ಭಾವೀಸಂಗ್ರಾಮದಲ್ಲಿ ನಾನು ಅಪಜಯ ಹೊಂದಿದರೆ ನಿಮ್ಮ ಅವಸ್ಥೆಯು ಏನಾಗುವದೆಂಬದನ್ನು ವಿಚಾರಿಸಿ ನೋಡಿರಿ. ಧರ್ಮಾಧರ್ಮಗಳ ಮಾತು ಬದಿಗಿಟ್ಟರೂ ಹಿತಾಹಿತಗಳ ದೃಷ್ಟಿಯಿಂದ ನಿಮ್ಮ ಈ ಕೃತಿಯು ಘಾತುಕವಿರುವದೆಂಬದನ್ನು ಮರೆಯಬೇಡಿರಿ. ಯುದ್ಧದಲ್ಲಿ ಮುಕುಂದದೇವನು ಮರಣ ಹೊಂದದಿದ್ದರೆ 'ಅತೋಭ್ರಷ್ಟ-ತತೋಭ್ರಷ್ಟ'ಎಂಬಂತೆ ನಿಮ್ಮ ಗತಿಯಾಗಬಹುದು."

"ಭಾವೀಸಂಗ್ರಾಮದಲ್ಲಿ ಮುಕುಂದದೇವನ ನಾಶಗೊಳಿಸಬೇಕೆಂದು ನಾನು ದೃಢಸಂಕಲ್ಪ ಮಾಡಿಕೊಂಡಿರುವೆನು."

"ಯುದ್ಧದಲ್ಲಿ ಮುಕುಂದದೇವನು ಮರಣ ಹೊಂದದಿದ್ದರೆ?"

"ಯಾವದೊಂದು ಯುಕ್ತಿಯಿಂದ ಅವನನ್ನು ವಧಿಸಿ, ಉತ್ಕಲದ ರಾಜಸಿಂಹಾಸನವು ನನ್ನ ಸ್ವಾಧೀನಕ್ಕೆ ಬರುವಂತೆ ಮಾಡುವ ಕಾರ್ಯವು

ನಿಮ್ಮನ್ನೇ ಕೂಡಿರುವದು. ನಾನಂತು ಮಾತೃಭೂಮಿಯ ಎದೆಯ ಮೇಲೆ ವಿಕಟನರ್ತನ ಮಾಡಲಿಕ್ಕೆ ಸಿದ್ಧನಿರುವೆನು.''

"ಅಂತು ನೀವು ಹಿಂದಮಾತೆಯನ್ನು-ನಿಮಗೆ ಜನ್ಮವಿತ್ತ ರಾಷ್ಟ್ರ ದೇವತೆಯನ್ನು-ಅನ್ಯರ ವಶಕ್ಕೆ ಕೊಡಲು ಸಿದ್ಧರಾಗಿರುವಿರೆಂದಂತಾಯಿತು. ಮಂತ್ರಿಗಳೆ, ನಿಮ್ಮ ವಿಚಾರಗಳು ಸ್ತುತ್ಯವಾದವುಗಳಿರುವವು! ನಿಮ್ಮಂತಹ ಉದಾತ್ತ ವಿಚಾರದ ಜನರ ಅಸ್ತಿತ್ವದಿಂದಲೆ ಸ್ವಾತಂತ್ರ್ಯ ಭಾರತದ ಸ್ಥಿತಿಯು ಹೀಗಾಗಿದೆ. ಕಾಲಾಯ ತಸ್ಮೈ ನಮಃ!''

'ಸೇನಾಪತಿಗಳೆ, ಮುಕುಂದದೇವನು ಓರಿಸಾದ ಸಿಂಹಾಸನವನ್ನು ಹೇಗೆ ದೊರಕಿಸಿದನೆಂಬದನ್ನು ನೀವು ಅರಿತಿಲ್ಲವೆಂಬಂತೆ ಕಾಣುತ್ತದೆ. ತನ್ನ ಒಡೆಯನಾದ ನರಸಿಂಹರಾಜನನ್ನು ಕೊಂದು ಅವನ ರಕ್ತದಿಂದ ಮಲಿನವಾದ ಕೈಯಲ್ಲಿ ಮುಕುಂದದೇವನು ರಾಜದಂಡವನ್ನು ಧರಿಸಿರುವನು. ಆ ನರಸಿಂಹರಾಜನಾದರೂ ಗೋವಿಂದ ವಿದ್ಯಾಧರನನ್ನು ಪಟ್ಟದಿಂದ ತಳ್ಳಿ ರಾಜ್ಯಾಧಿಕಾರಿಯಾಗಿದ್ದನು. ಗೋವಿಂದ ವಿದ್ಯಾಧರನು ಉತ್ಕಲದ ಮಹಾರಾಜಾ ಪ್ರತಾಪರುದ್ರದೇವನ ಮೂವತ್ತೆರಡು ಮಕ್ಕಳ ಕೊಲೆ ಮಾಡಿ ಸಿಂಹಾಸನಾರೂಢನಾಗಿದ್ದನು. ಬಾಹುಬಲವಿದ್ದವನೇ ರಾಜನೆಂಬಂತೆ ಉತ್ಕಲದ ಸ್ಥಿತಿಯು ಆಗಿರುವದು. ರಾಜನೀತಿ-ಧರ್ಮನೀತಿಗಳು ಬೇರೆ ಬೇರೆಯಾಗಿರುವವು. ರಾಜನೀತಿಯಲ್ಲಿ ಪಾಪ-ಪುಣ್ಯಗಳಿಗೆ ಮಹತ್ವ ಕೊಡುವ ಕಾರಣವಿಲ್ಲ. ಈಗ ಮುಕುಂದದೇವನನ್ನು ನಾಮಶೇಷಗೊಳಿಸಿ, ಅವನ ಸಿಂಹಾಸನವನ್ನು ಸ್ವಾಧೀನಕ್ಕೆ ತೆಗೆದುಕೊಂಡರೆ ಯಾವ ವಿಧದ ಪಾತಕವೂ ಒದಗಲಾರದು.''

"ಬಹಳೇ ಶ್ರೇಷ್ಠವಾದ ರಾಜನೀತಿಯಿದು! ಓರಿಸಾದ ಮಂತ್ರಿಗಳಿಂದ ನಾನು ಇಂದು ಹೊಸ ತತ್ವವನ್ನು ಕಲಿತಂತಾಯಿತು!"

"ನೀವು ಹೀಗೆ ವಿನೋದವಾಡಬೇಡಿರಿ. ರಾಜನೀತಿಯು ನಿಮಗೆ ತಿಳಿಯಬೇಕಾದರೆ ಇನ್ನೂ ಅವಕಾಶವಿರುವದು. ಇದೀಗ ನೀವು ಸವಾಬನ ಸಂಸಾರದಲ್ಲಿ ಸೇರಿಕೊಂಡಿರುವದರಿಂದ ರಾಜಕಾರಣದ ಅನುಭವವು ಹೇಗಾಗಬೇಕು? ನಿಮಗೆ ರಾಜನೀತಿಯು ಗೊತ್ತಿದ್ದರೆ ಪ್ರತಿಫಲವನ್ನ

ಪೇಕ್ಷಿಸದೆ, ಶತ್ರುಗಳಿಗೆ ಸಹಾಯ ಮಾಡಲಿಕ್ಕೆ ಸಿದ್ಧನಾಗಿರುವೆನೆಂದು ನಿಮಗೆ ತಿಳಿಯುತ್ತಿದ್ದಿಲ್ಲ.''

ಜನಾರ್ದನ ಮಂತ್ರಿಯ ಮಾತುಗಳನ್ನು ಕೇಳಿ ಕಾಲಾಚಾಂದನ ಮುಖವು ಆರಕ್ತವಾಯಿತು. ಆಗ ಅವನು ಸಂತಪ್ತವಾಣಿಯಿಂದ— ''ನನಗೆ ರಾಜನೀತಿಯು ತಿಳಿದಿರಲಿ, ತಿಳಿಯದಿರಲಿ; ಕೇವಲ ಪರೋಪಕಾರಕ್ಕಾಗಿ ಇಷ್ಟು ಸೈನ್ಯವನ್ನು ತೆಗೆದುಕೊಂಡು ಇಲ್ಲಿಗೆ ಬಂದಿರುವದಿಲ್ಲ.''

''ಓರಿಸಾದೇಶದಲ್ಲಿ ದೊರೆತ ಸುಲಿಗೆಯಿಂದ ಸಂತುಷ್ಟರಾಗಬೇಕೆಂದು ನಿಮ್ಮ ಇಚ್ಛೆಯಿರುವದೆ?''

''ವಿಕ್ರಮಾರ್ಜಿತ ಸ್ವತ್ತನ್ನು ತೆಗೆದುಕೊಳ್ಳದೆ ಯಾವನು ಬಿಡುವನು? ಓರಿಸಾ ದೇಶದ ಸ್ವಾತಂತ್ರ್ಯ ಸಿಂಹಾಸನವನ್ನು ಕೈವಶಮಾಡಿಕೊಳ್ಳಬೇಕೆಂಬ ಕುತೂಹಲದಿಂದಲೆ ನಾನು ದಂಡೆತ್ತಿ ಬಂದಿರುವೆನು.''

''ಓರಿಸಾ ದೇಶವೆಂದರೆ ಬಂಗಾಲವೆಂದು ತಿಳಿದುಕೊಂಡಿರುವಿರೇನು? ಉತ್ಕಲದ ಸ್ವಾತಂತ್ರ್ಯ ಸಿಂಹಾಸದ ಮೇಲೆ ಇದುವರೆಗೆ ವಿಧರ್ಮೀಯ ಮನುಷ್ಯನು ಕುಳಿತಿರುವದಿಲ್ಲ.''

''ನಿಮ್ಮ ಮಾತು ನಿಜವಿರಬಹುದು. ಹಿಂದಿನ ಪರಿಸ್ಥಿತಿಯು ಬೇರೆ; ಈಗಿನ ಪರಿಸ್ಥಿತಿಯು ಬೇರೆ. ಓರಿಸಾದಲ್ಲಿ ಎಷ್ಟೇ ಒಳಜಗಳಗಳಿದ್ದರೂ ಹೊರಗಿನವರ ದಾಳಿ ಒಂದಾಗ ಎಲ್ಲರೂ ಐಕ್ಯದಿಂದ ನಡೆಯುತ್ತಿದ್ದರು. ನಿಮ್ಮಂತಹ ರಾಕ್ಷಸೀ ರಾಜ್ಯಲಾಲಸೆಯ ಜನರು ಆಗ ಇದ್ದಿಲ್ಲ. ಇದ್ದರೂ ಪರಕೀಯರ ಸಹಾಯದಿಂದ ಏತದ್ದೇಶೀಯರನ್ನು ಬಗ್ಗುಬಡಿಯಬೇಕೆಂದು ಯೋಚಿಸುತ್ತಿರಲಿಲ್ಲ ಉತ್ಕಲದ ಅಧಃಪಾತವು ಸಮೀಪಿಸಿರುವದರಿಂದ ನಿಮ್ಮಂತಹ ದೇಶದ್ರೋಹಿಗಳು ತಲೆದೋರ ತೊಡಗಿರುವಿರಿ. ನಿಮ್ಮಂತಹ ರಾಷ್ಟ್ರಘಾತಕಿಗಳೊಡನೆ ಮಾತನಾಡಲಿಕ್ಕೆ ನನ್ನ ಮನಸ್ಸು ಹೇಸಿಕೊಳ್ಳುತ್ತದೆ. ನಿಮಗೆ ಏನಾದರೂ ಹೇಳುವದಿದ್ದರೆ, ಉಪಸೇನಾಪತಿಗಳಾದ ಕಾತಲೂಖಾನರನ್ನು ಭೆಟ್ಟಿಯಾಗಿರಿ. ಅವರು ನವಾಬರ ಪ್ರತಿನಿಧಿಗಳಾಗಿರುವರು. ಅವರು ನಿಮ್ಮ ಮಾತಿಗೆ ಉತ್ತರ ಕೊಡುವರು.''

ಕಾಳಾಪಹಾಡನು ಹೀಗೆ ಹೇಳಿದ ಕೂಡಲೆ ಜನಾರ್ದನ ಮಂತ್ರಿಯು ಕಾತಲೂಖಾನನ ರಾಹುಟಿಗೆ ಹೋದನು. ಖಾನನು ಮಂತ್ರಿಯನ್ನು ಸನ್ಮಾನಿಸಿ ಕುಳ್ಳಿರಿಸಿಕೊಂಡು ಬಂದ ಕಾರಣವನ್ನು ವಿಚಾರಿಸಿದನು. ಆಗ ಜನಾರ್ದನನು ತನ್ನ ಮನೋದಯವನ್ನು ಖಾನನಿಗೆ ತಿಳಿಸಿದನು. ಕುಟಿಲ ರಾಜಕಾರಣದಲ್ಲಿ ನಿಷ್ಣಾತನಾದ ಖಾನನು ಅವನ ಇಚ್ಛೆಯಂತೆ ನಡೆಯಲೊಪ್ಪಿದನು. ಆಗ ಖಾನನು ಮಂತ್ರಿಯನ್ನು ಕುರಿತು:"ನಾವು ಪುರಿಯ ಮೇಲೆ ದಂಡೆತ್ತಿ ಹೋಗುವೆವು. ದಂಡಯಾತ್ರೆಯಲ್ಲಿ ನೀವು ನಮಗೆ ಯೋಗ್ಯ ರೀತಿಯಿಂದ ನೆರವಾದರೆ, ನಿಮಗೆ ಸಿಂಹಾಸನವು ದೊರೆಯುವದು. ನೀವು ಉತ್ಕಲದ ರಾಜರಾದ ಮೇಲೆ ಬಂಗಾಲದ ಸಾರ್ವಭೌಮತ್ವಕ್ಕೆ ಒಪ್ಪಿಕೊಂಡು ಕಪ್ಪ-ಕಾಣಿಕೆಗಳನ್ನು ಕೊಡಬೇಕಾಗುವದು. ನಾವು ಓರಿಸಾದ ಸ್ವಾತಂತ್ರ್ಯಸಿಂಹಾಸನವನ್ನು ನಷ್ಟಗೊಳಿಸಿ, ಮಾಂಡಲಿಕ ಸಿಂಹಾಸನವನ್ನು ಪ್ರಸ್ಥಾಪಿಸುವೆವು. ಈ ಮಾತಿಗೆ ನೀವು ಒಪ್ಪುತ್ತಿದ್ದರೆ ನಮಗೆ ನೆರವಾಗಿರಿ."

"ವಂಗದೇಶದ ಮಾಂಡಲಿಕನಾಗಿರಲಿಕ್ಕೆ ನನ್ನ ಒಪ್ಪಿಗೆಯಿರುವದು. ಕಾತಲೂಖಾನರೆ, ನೀವು ನಿಮ್ಮ ವಚನವನ್ನು ಮಾತ್ರ ತಪ್ಪದೆ ನಡಿಸುವಿರೆಂದು ನಾನು ಆತ್ಮವಿಶ್ವಾಸವುಳ್ಳವನಾಗಿರುವೆನು."

"ನೀವು ಯಾವ ವಿಧದ ಯೋಚನೆಯನ್ನೂ ಮಾಡಬೇಡಿರಿ."

ಕಾತಲೂಖಾನನಿಂದ ಅಭಯವು ದೊರೆತ ಕೂಡಲೆ ಮಂತ್ರಿಯು ಅಲ್ಲಿಂದ ಹೊರಟನು. ಯವನರ ಸಹಾಯದಿಂದ ಮುಕುಂದದೇವನಿಗೆ ಸ್ವರ್ಗದ ದಾರಿಯನ್ನು ತೋರಿಸಿದ ಮೇಲೆ ಓರಿಸಾದ ಸಿಂಹಾಸನವು ದೊರೆಯುವದೆಂದು ಅವನು ಸಂಭ್ರಮಗೊಂಡನು. ಉತ್ಕಲದಂತಹ ಬಲಾಢ್ಯ ದೇಶದ ಅರಸನಾದ ತಾನು ಯವನರ ಪಾರತಂತ್ರ್ಯ ಶೃಂಖಲೆಗಳನ್ನು ಕಡಿದುಕೊಳ್ಳಲಿಕ್ಕೆ ಸಮರ್ಥನಾಗುವೆನೆಂದು ಅವನು ಮನೋರಾಜ್ಯವನ್ನು ಕಲ್ಪಿಸಿಕೊಳ್ಳಲಾರಂಭಿಸಿದ್ದನು. ರಾಜಕಾರಣದಲ್ಲಿ ಕುಟೀಲನೀತಿಯನ್ನು ಉಪಯೋಗಿಸದಿದ್ದರೆ ಪ್ರಾಪ್ತಿಯು ದೊರೆಯದೆಂದು ಅವನ ಭಾವನೆಯಾಗಿತ್ತು. ಮುಕುಂದದೇವನನ್ನು ಹಣ್ಣು ಮಾಡಲಿಕ್ಕೂ, ಅವನನ್ನು

ಗಂಡಾಂತರದಲ್ಲಿ ಕೆಡಹಲಿಕ್ಕೂ ಏನೇನು ಉಪಾಯ ಮಾಡಬೇಕೆಂಬ ದನ್ನು ಅವನು ಯೋಚಿಸುತ್ತ ಸಾಗಿದ್ದನು. ತಾನು ಈಗ ನಡೆಯಿಸಿರು ವದು ಅದ್ಭುತವಾದ ರಾಜಕಾರಣವೆಂದು ಅವನ ತಿಳುವಳಿಕೆಯಾಗಿತ್ತು. ತನ್ನಿಂದ ಉತ್ಕಲ ರಾಜಸಿಂಹಾಸನದ ಸ್ವಾತಂತ್ರ್ಯವು ನಾಶವಾಗಿ, ಅದು ಅಧೋಗತಿಯನ್ನು ಹೊಂದುವದೆಂಬ ವಿಚಾರವು ಆ ಜಡಸ್ವಾರ್ಥಿಗೆ ಹೇಗೆ ಗೊತ್ತಾಗಬೇಕು? ತಾನು ಉತ್ಕಲದ ಭಾವೀರಾಜನೆಂದು ಅವನು ತಿಳಿದು ಕೊಂಡನು. ಆ ಜಡಸ್ವಾರ್ಥಿಗೆ ಆಕಾಶವು ನಾಲ್ಕೇ ಬೆರಳು ಉಳಿದಿತ್ತು!

---

## ಶಸ್ತ್ರದಾನ.

ಮಹಾನದಿ ಮತ್ತು ಕಾಠಜುಡಿ ಇವೆರಡು ನದಿಗಳ ಮಧ್ಯದಲ್ಲಿ ಪ್ರಶಸ್ತವಾದ ಪ್ರದೇಶದಲ್ಲಿ ಕಟಕ ವಾರಣಾಶಿ ರಾಜಧಾನಿಯೂ ಬಾರಾತಟ ದುರ್ಗವೂ ಇದ್ದವು. ರಾಜಧಾನಿಯು ಕಾಠಜುಡೀ ತೀರದಲ್ಲಿದ್ದು, ದುರ್ಗವು ಮಹಾನದಿಗೆ ಸಮೀಪವಾಗಿತ್ತು. ರಾಜಧಾನಿಗೂ ದುರ್ಗಕ್ಕೂ ಎರಡು ಹರದಾರಿಗಳ ಅಂತರವಿತ್ತು. ದುರ್ಗದಲ್ಲಿ ಪ್ರಶಸ್ತವಾದ ರಾಜ ಮಂದಿರವಿತ್ತು. ಬಾರಾತಟ ದುರ್ಗವು ಈಗ ನಾಶವಾಗಿರುವದು. ಅದರ ಅವಶಿಷ್ಟ ಸ್ಥಳವನ್ನು ನೋಡಿದರೆ, ಆ ದುರ್ಗವು ಎಷ್ಟು ದೊಡ್ಡದಿತ್ತೆಂಬ ದರ ಕಲ್ಪನೆಯಾಗುತ್ತದೆ. ಮುಕುಂದದೇವನು ವಿಲಾಸಪ್ರಿಯನಿದ್ದುದರಿಂದ ದುರ್ಗದ ಹಾಗು ನಗರದ ಸೌಂದರ್ಯವನ್ನು ಬೆಳೆಯಿಸಿದ್ದನು. ಅವನ ರಾಜಪ್ರಾಸಾದವು ಜಗತ್ತಿನಲ್ಲಿ ಅವರ್ಣನೀಯವಾಗಿತ್ತು. ಈ ರಾಜಪ್ರಾ ಸಾದದ ವಿಸ್ತಾರ ಮತ್ತು ವೈಭವಗಳ ಬಗ್ಗೆ ಅಕಬರ ಬಾದಶಹನ 'ಐನೆ-ಈ-ಅಕಬರಿ' ಗ್ರಂಥದಲ್ಲಿ ಸಹ ಉಲ್ಲೇಖವಿರುವದು. ರಾಜಮಂದಿರದಲ್ಲಿ ನಾಮಾಂಕಿತರಾದ ಕೈಗಾರಿಕೆಯವರಿಂದ ಉತ್ತಮೋತ್ತಮ ಕಲಾಕೌಶ ಲ್ಯದ ಕೆಲಸಗಳು ಮಾಡಿಸಲ್ಪಟ್ಟಿದ್ದವು. ಗೋಡೆಗಳಲ್ಲಿ ನಾನಾ ಪ್ರಕಾ ರದ ರತ್ನಗಳು ಕೆಚ್ಚಲ್ಪಟ್ಟಿದ್ದವು. ಕಟಕ ರಾಜಧಾನಿಯ ಹಾಗು ಬಾರಾ

ತಟ ದುರ್ಗದ ಎಲ್ಲ ವೈಭವವು ಸರ್ವಭಕ್ಷಕನಾದ ಕಾಲನ ಉದರದಲ್ಲಿ ಪಚನವಾಗಿ, ಈಗ ಆ ಸ್ಥಳಗಳಲ್ಲಿ ಕಲ್ಲು-ಮಣ್ಣುಗಳ ರಾಶಿಯು ಮಾತ್ರ ಬಿದ್ದಿರುವದು!

ದುರ್ಗದ ಸುತ್ತುಮುತ್ತು ದೊಡ್ಡ ಕಂದಕವಿತ್ತು. ಆ ಕಂದಕ ದಲ್ಲಿ ಆನೆಗಳು ಈಸುವಷ್ಟು ನೀರು ಯಾವಾಗಲೂ ಇರುತ್ತಿತ್ತು. ದುರ್ಗ ಪ್ರವೇಶ ಮಾಡಲಿಕ್ಕೆ ಒಂದು ಕಟ್ಟಿಗೆಯ ಸೇತುವೆಯು ಮಾಡಿಸಲ್ಪಟ್ಟಿ ತ್ತು. ರಾತ್ರಿಯಲ್ಲಿ ಆ ಸೇತುವೆಯನ್ನು ದುರ್ಗದ ಕಡೆಗೆ ಎಳೆದುಕೊಳ್ಳು ತ್ತಿದ್ದರು. ಕೋಟೆಯಲ್ಲಿ ಪ್ರವೇಶ ಮಾಡಲಿಕ್ಕೆ ಈ ಮಾರ್ಗವಲ್ಲದೆ ಇನ್ನೊಂದು ಅತ್ಯಂತ ಗುಪ್ತವಾದ ನೆಲಮಾರ್ಗವಿತ್ತು. ದುರ್ಗದಲ್ಲಿ ಅಶ್ವಶಾಲೆ, ಗಜಶಾಲೆ, ಉಷ್ಟ್ರಶಾಲೆ, ಶಸ್ತ್ರಾಗಾರ, ಸೈನಿಕರ ಮನೆಗಳು ಮೊದಲಾದ ಕಟ್ಟಡಗಳಿದ್ದವು. ರಾಜಪ್ರಾಸಾದದ ಬಳಿಯಲ್ಲಿ ರಾಜಸಭೆ ಯೂ, ಗುಪ್ತ ಮಂತ್ರಣಾಗಾರವೂ, ಮಂತ್ರಿಸೇನಾನಾಯಕರ ಮಂದಿರ ಗಳೂ ಇದ್ದವು. ರಾಜೋಪಯೋಗವುಳ್ಳ ಪ್ರತಿಯೊಂದು ಕಟ್ಟಡಗಳು ಬಹಳೇ ಅಂದವಾಗಿ ಕಟ್ಟಲ್ಪಟ್ಟಿದ್ದವು. ರಾಜಪ್ರಾಸಾದ-ರಾಜಸಭೆಗಳು ಭಾರತದ ಶಿಲ್ಪಕಲೆಯ ಪರಾಕಾಷ್ಠೆಯನ್ನು ವ್ಯಕ್ತಪಡಿಸುತ್ತಿದ್ದವು. ಭರತ ಖಂಡದೊಳಗಿನ ಪ್ರಾಚೀನ ಶಿಲ್ಪಕಲೆಯನ್ನು ಅವಲೋಕಿಸಿದರೆ ಅಂತಹ ಶಿಲ್ಪಶಾಸ್ತ್ರವು ಈಗ ಸಹ ಎಲ್ಲಿಯೂ ದೃಷ್ಟಿಗೋಚರವಾಗುವದಿಲ್ಲ. ಸದ್ಯ ದಲ್ಲಿ ದುರ್ದೈವಿಯಾದ ಭಾರತಕ್ಕೆ ಮುಖಬಾಗಿಸಿ ಕುಳಿತುಕೊಳ್ಳುವ ಪ್ರಸಂಗವೊದಗಿದ್ದರೂ, ಅದರ ಪೂರ್ವೇತಿಹಾಸವು ಅತ್ಯಂತ ಉಜ್ವಲ ವಿರುವದು. ಭುವನೇಶ್ವರನ ಮಂದಿರದ ಮೇಲಿನ ಓರಿಸಾ ದೇಶದ ಇತಿ ಹಾಸವೂ, ತಾಜಮಹಾಲಿನ ಮೇಲಿನ ಕುರಾಣವೂ, ಇನ್ನೂ ಅನೇಕ ಕುಶ ಲತೆಯ ಕೆಲಸಗಳೂ ಇತರ ದೇಶಗಳಲ್ಲಿ ದೊರೆಯುವದಿಲ್ಲವೆಂಬ ಮಾತು ನಿರ್ವಿವಾದವಿರುವದು. ಓರಿಸಾ ದೇಶದಲ್ಲಿ ಶಿಲ್ಪಶಾಸ್ತ್ರವಿತ್ತು; ಧರ್ಮ ವಿತ್ತು; ಶಕ್ತಿಯಿತ್ತು; ಆದರೆ ಸಾಹಿತ್ಯವು ಮಾತ್ರ ಇದ್ದಿಲ್ಲ. ಭರತ ಖಂಡದ ಅವನತಿಯು ಪ್ರತಿಯೊಂದು ವಿಷಯದಲ್ಲಿ ಆಗಿರುವದೆಂಬದು ಸೂರ್ಯಪ್ರಕಾಶದಷ್ಟು ಸ್ಪಷ್ಟವಾಗಿರುವದು. ಮೊದಲು ನಮ್ಮ ವೈಭ

ವವು ಹೇಗೆ ಇತ್ತು? ನಮ್ಮ ಪೂರ್ವಜರು ಯಾವ ಯಾವ ಪರಾಕ್ರಮದ ಕಾರ್ಯಗಳನ್ನು ಮಾಡಿದರು? ನಾವು ಹೀನ ಸ್ಥಿತಿಯನ್ನು ಹೊಂದಲಿಕ್ಕೆ ಯಾವ ಯಾವ ಕಾರಣಗಳು ಘಟಿಸಿದವು? ಮೊದಲಾದ ಸಂಗತಿಗಳು ವೈಭವಶಿಖರದಿಂದ ಚ್ಯುತರಾದವರಿಗೆ ತಿಳಿಯುವದು ಯೋಗ್ಯವಾಗಿರುವದು ಓರಿಸಾ ದೇಶದ ಉಜ್ವಲವಾದ ಇತಿಹಾಸವು ಅಜ್ಞಾತ ಸ್ಥಿತಿಯಲ್ಲಿದ್ದದ್ದು ಶೋಚನೀಯ ಸಂಗತಿಯಲ್ಲದೆ ಮತ್ತೇನು?

ಜನಾರ್ದನ ಮಂತ್ರಿಯು ರಾಷ್ಟ್ರದ್ರೋಹಿಯಾಗಿ ನೀಚತನದ ಪರಾಕಾಷ್ಠೆಯನ್ನು ತೋರಿಸಿದ್ದರಿಂದ ತ್ರಿವೇಣಿಯ ಸಂಗ್ರಾಮದಲ್ಲಿ ಹಿಂದು ಸೈನ್ಯವು ಪರಾಭವ ಹೊಂದಿತು. ವಿಜಯಿವೀರರಾದ ಕಾಳಾಪಹಾಡ-ಕಾತಲೂಖಾನ ಸೇನಾಪತಿಗಳು ತಮ್ಮ ಅಪಾರವಾದ ಸೇನೆಯೊಡನೆ ಓರಿಸಾ ದೇಶವನ್ನು ಒಳನುಗ್ಗತೊಡಗಿದ್ದರು. ಕಾಳಾಪಹಾಡನು ಮಯೂರಭಂಜಕದ ಕಡೆಗೂ, ಕಾತಲೂಖಾನನು ಯಜ್ಞಪುರದ ಕಡೆಗೂ ಸಾಗಿದ್ದರು. ಯಜ್ಞಪುರದ ರಕ್ಷಣೆಗಾಗಿ ಯುವರಾಜ ರಾಮಚಂದ್ರದೇವನು ಹೋಗಿದ್ದನಷ್ಟೆ? ಅವನು ತನ್ನ ಸಹಾಯಕ್ಕಾಗಿ ಹೊಸ ಸೈನ್ಯವನ್ನು ಕಳಿಸಬೇಕೆಂದು ಮುಕುಂದದೇವನಿಗೆ ತಿಳಿಸಿದ್ದನು. ಕಾಳಾಪಹಾಡನಂತಹ ವೀರಾಗ್ರಣಿಯ ಸಂಗಡ ಕಾದಬೇಕಾದರೆ ಮಯೂರಭಂಜದಲ್ಲಿ ಹೆಚ್ಚಿನ ಸೈನ್ಯದ ಆವಶ್ಯಕತೆಯಿತ್ತು. ಮಂತ್ರಿಯಾದ ಜನಾರ್ದನನೂ, ಅವನ ಮಗನಾದ ಹರಿಕೀರ್ತನನೂ ಅಲ್ಲಲ್ಲಿ ಬಂಡಾಯವೆಬ್ಬಿಸಿದ್ದರು. ಒಮ್ಮೆಲೆ ಎರಡು-ಮೂರು ಕಡೆಗೆ ಕೈಕೊಡುವ ಪ್ರಸಂಗವೊದಗಿದ್ದರಿಂದ ಮುಕುಂದದೇವನು ವಿಚಾರಕ್ಕೊಳಗಾದನು. ಈ ವಿಷಯದಲ್ಲಿ ಮಂತ್ರಿಸೇನಾನಾಯಕರ ಅಭಿಪ್ರಾಯವನ್ನು ತಿಳಿದುಕೊಳ್ಳಬೇಕೆಂದು ಅವನು ಓಲಗವನ್ನು ನೆರೆಯಿಸಿದನು.

ಮಹಾರಾಜಾ ಮುಕುಂದದೇವನು ರತ್ನಖಚಿತ ಸಿಂಹಾಸನದದಲ್ಲಿ ವಿರಾಜಮಾನನಾಗಿದ್ದನು. ಮಂತ್ರಿಯಾದ ಭೃಗುರಾಮನೂ, ಸೇನಾಪತಿಗಳಾದ ದೀನಕೃಷ್ಣ-ಕುಂಜಗಾಧಿಪತಿಗಳೂ ತಮ್ಮ ರೌಪ್ಯಾಸನಗಳಲ್ಲಿ ಕುಳಿತಿದ್ದರು. ಉಳಿದ ಸರದಾರ ಸಾಮಂತರು ತಮ್ಮ ತಮ್ಮ ಅಸನ

ಗಳನ್ನು ಅಲಂಕರಿಸಿದ್ದರು. ಆಗ ಮುಕುಂದದೇವನು ಸಭಿಕರನ್ನುದ್ದೇಶಿಸಿ—"ಪರಮಪ್ರಿಯ ಮಂತ್ರಿ-ಸೇನಾನಾಯಕರೆ, ಪ್ರಜಾಜನ-ಪ್ರಮುಖರೆ, ಸದ್ಯಕ್ಕೆ ಓರಿಸಾ ದೇಶದ ಮೇಲೆ ಎಂತಹ ಗಂಡಾಂತರವೊದಗಿರುವದೆಂಬದು ಸರ್ವಶ್ರುತವಾದ ಸಂಗತಿಯಾಗಿರುವದು. ಕಾಳಾಪಹಾಡನು ಅದ್ವಿತೀಯ ಸಂಗ್ರಾಮಕುಶಲನಿರುವನೆಂಬದು ನಿಮಗೆ ಗೊತ್ತೇ ಇದೆ. ಕಾತಲೂಖಾನನಾದರೂ ಸಾಮಾನ್ಯನಿಲ್ಲ. ವಂಗಸೈನ್ಯವು ಒಂದು ಲಕ್ಷಕ್ಕೆ ಮಿಕ್ಕಿರುವದು. ಶತ್ರುಗಳು ಈಗಾಗಲೆ ಉತ್ಕಲದೇಶವನ್ನು ನುಗ್ಗಿರುವರು. ಕಾಳಾಪಹಾಡನು ಮಯೂರಭಂಜದ ಕಡೆಗೂ, ಕಾತಲೂಖಾನನು ಯಜ್ಞಪುರದ ಕಡೆಗೂ ಹೊರಟಿರುವರು. ಹಿಂದುಧರ್ಮದ ಮೇಲಿನ ಸೇಡನ್ನು ತೀರಿಸಿಕೊಳ್ಳಬೇಕೆಂಬ ಮಹತ್ವಾಕಾಂಕ್ಷೆಯನ್ನು ತಾಳಿದ ಕಾಳಾಪಹಾಡನು ದಯಾಮಾಯೆಗಳಿಲ್ಲದವನಾಗಿರುವನು. ಅವನು ಹಿಂದುಗಳ ದೇವಮಂದಿರಗಳನ್ನು ವಿಧ್ವಂಸಗೊಳಿಸುತ್ತಲೂ ಮೂರ್ತಿಗಳನ್ನು ಒಡೆಯುತ್ತಲೂ ಹೊರಟಿರುವನು. ಓರಿಸಾ ದೇಶವನ್ನು ಪಾದಾಕ್ರಾಂತಗೊಳಿಸಿ, ಹಿಂದುಗಳ ಪವಿತ್ರ ಕ್ಷೇತ್ರವಾದ ಜಗನ್ನಾಥಪುರಿಯನ್ನು ಉಧ್ವಸ್ತ ಮಾಡಬೇಕೆಂದು ಅವನ ಸಾಹಸವಿರುವದು. ಅವನು ಜಗನ್ನಾಥನ ಮೂರ್ತಿಯನ್ನು ಮಂದಿರ ಸಹಿತವಾಗಿ ನಾಶಮಾಡುವನು. ಹಾಯ! ಹಾಯ! ಹಿಂದಮಾತೆಯ ಉದರದಲ್ಲಿ ಹುಟ್ಟಿ ಹಿಂದಮಾತೆಯ ಅನ್ನದಿಂದ ಪರಿಪುಷ್ಟನಾಗಿ ಹಿಂದೂಧರ್ಮದವನೆಂದು ಹೇಳಿಸಿಕೊಳ್ಳುತ್ತಿದ್ದ ಕಾಳಾಪಹಾಡನು ಎಂತಹ ಕುಲಾಂಗಾರನಾದನು ನೋಡಿದಿರಾ? ರಾಜನಿಷ್ಠರಾದ ಅಧಿಕಾರಿಗಳೆ, ಪ್ರಜಾಜನರೆ, ನಾವು ಪರಕೀಯರನ್ನು ನಿಂದಿಸುವದಕ್ಕಿಂತ ನಮ್ಮ ದೈವವನ್ನು ನಾವು ಹಳಿದುಕೊಳ್ಳುವದೇ ಒಳಿತು. ಕಾಳಾಪಹಾಡನು ಎಂತಹ ಮಹತ್ವಾಕಾಂಕ್ಷೆಯನ್ನು ತಾಳಿದವನಾಗಿದ್ದರೂ, ಅವನು ಎಷ್ಟೇ ಶೂರನಿದ್ದರೂ, ಅವನ ಸೈನಿಕರು ಎಂತಹ ಕಟ್ಟಾಳುಗಳಾಗಿದ್ದರೂ ಉತ್ಕಲದೇಶವು ವಂಗದೇಶಕ್ಕೆ ಸೊಪ್ಪುಹಾಕುವಂತಹದಿರುವದಿಲ್ಲ. ಉತ್ಕಲದ ಪರಾಕ್ರಮ ಪ್ರತಿಭೆಯು ಈಗಲೂ ಅರಿಜನರ ಕಣ್ಣುಗಳನ್ನು ಕುಕ್ಕುಸುತ್ತಲಿರುವದು. ಇಂತಹ ಪ್ರತಾಪಶಾಲಿ

ಯಾದ ಉತ್ಕಲವು ಈಗ ಒಡಕಿನ ಸಲುವಾಗಿ ಅಳಿಯ್ಯಡೆಯುವ ಪ್ರಸಂಗ ಪ್ರೊದಗಿರುವದು. ಮಂತ್ರಿಯಾದ ಜನಾರ್ದನನೂ ಅವನ ಮಗನಾದ ಹರಿಕೀರ್ತನನೂ ಬಂಡುಗಾರರಾಗಿ ಶತ್ರುಗಳನ್ನು ಕೂಡಿಕೊಂಡಿರುವ ರಂತೆ! ಹೊಟ್ಟೆಯ ಮಗನಾದ ರಾಮಚಂದ್ರನು ಸಹ ಅವಿಧೇಯನಾಗಿ ವರ್ತಿಸತೊಡಗಿರುವನು. ಇದಕ್ಕೆ ದೈವಪರೀಕ್ಷೆಯ ಕಾಲವೆನ್ನದೆ ಮತ್ತೇನು ಹೆಸರಿಡಬೇಕು? ತ್ರಿವೇಣಿಯ ಸಂಗರದಲ್ಲಿ ನಮ್ಮ ಸೈನ್ಯಕ್ಕೆ ಅಪಯಶವು ದೊರೆಯಲಿಕ್ಕೆ ಜನಾರ್ದನನೇ ಕಾರಣೀಭೂತನಾದನು. ಅವನಿಂದ ಇನ್ನೂ ಎಷ್ಟು ಬಗೆಯ ಅನರ್ಥಗಳು ಘಟಿಸುವವೋ ಏನೋ! ಈ ಸಂಧಿಯಲ್ಲಿ ನಾವು ಒಳ್ಳೆಯ ಜಾಗ್ರತೆಯಿಂದ ನಡೆಯಬೇಕಾಗಿರುವದು. ದೇಹದಲ್ಲಿ ಪ್ರಾಣವಿರುವವರೆಗೆ ಯುದ್ಧಮಾಡತಕ್ಕದ್ದೆಂದು ಎಲ್ಲರೂ ದೃಢಪ್ರತಿಜ್ಞೆ ಮಾಡಲಿಕ್ಕೆ ಬೇಕು. ಈಗ ನಮ್ಮ ಕಡೆಗಿದ್ದ ಸೇನಾಪತಿಗಳೂ ಸೈನಿಕರೂ ಏಕನಿಷ್ಠೆಯಿಂದ ನಡೆದರೆ ವಿಜಯಲಕ್ಷ್ಮಿಯ ಅನುಗ್ರಹಕ್ಕೆ ಪಾತ್ರರಾಗುವೆವೆಂದು ನಾನು ಸಾರಿ ಹೇಳುವೆನು. ನಾನು ಮಯೂರಭಂಜಕ್ಕೆ ಹೋಗಬೇಕೆಂದು ನಿರ್ಧರಿಸಿರುವೆನು. ಕಾಳಾಪಹಾಡನ ಹಾಗು ಬಂಡುಗಾರನಾದ ಜನಾರ್ದನನ ಸಮಾಚಾರವನ್ನು ತಕ್ಕೊಂಡೇ ತಿರುಗಿ ಬರುವೆನು. ನಾನು ಬರುವವರೆಗೆ ದೀನಕೃಷ್ಣ ಸೇನಾಪತಿಗಳು ದುರ್ಗರಕ್ಷಣೆ ಮಾಡತಕ್ಕದ್ದು. ಆವಶ್ಯಕತೆಯು ಕಂಡು ಬಂದರೆ ಕುಂಜಗಾಧಿಪತಿಗಳು ಸೈನ್ಯಸಹಿತವಾಗಿ ಸಹಾಯಕ್ಕೆ ಬರಬಹುದು. ಸದ್ಯದ ಯುದ್ಧದಲ್ಲಿ ಯಾರು ವಿಶ್ವಾಸಘಾತಕಿಗಳಾಗುವರೋ, ಯಾರು ಜೀವಗಳ್ಳರಾಗಿ ರಣಭೂಮಿಯಿಂದ ನುಸುಳುವರೋ ಅವರಿಗೆ ಭಯಂಕರ ದಂಡನೆಯು ವಿಧಿಸಲ್ಪಡುವದು''

ಮುಕುಂದದೇವನು ಹೀಗೆ ನುಡಿದ ಕೂಡಲೆ ಕುಂಜಗಾಧಿಪತಿಯು ತನ್ನ ಆಸನವನ್ನು ಬಿಟ್ಟು ಎದ್ದು ನಿಂತು—''ಮಹಾರಾಜರೆ, ನಮ್ಮಂತಹ ಸೇವಕರಿರಲು ತಾವು ರಾಜಧಾನಿಯನ್ನು ಬಿಟ್ಟು ರಣಕ್ಷೇತ್ರಕ್ಕೆ ತೆರಳಬೇಕೆ? ನಾನು ಮಯೂರಭಂಜಕ್ಕೆ ತೆರಳುವೆನು; ರಾಜಧಾನಿಯ ಹಾಗು ದುರ್ಗದ ರಕ್ಷಣೆಗಾಗಿ ತಾವು ಇಲ್ಲಿಯೇ ಇರಬೇಕೆಂದು ಈ ಸೇವಕನ

ನಮ್ರವಿನಂತಿಯುಂಟು.

ಕುಂಜಗಾಧಿಪತಿಯು ಹೀಗೆ ಹೇಳುವಷ್ಟರಲ್ಲಿ ಒಬ್ಬ ಮನುಷ್ಯನು ಓಲಗವನ್ನು ಪ್ರವೇಶಿಸಿ, ಅರಸನಿಗೆ ನಮಸ್ಕಾರ ಮಾಡಿದನು. ಆ ಮನುಷ್ಯನು ಯುದ್ಧಕ್ಷೇತ್ರದಿಂದ ಬಂದವನಾದ್ದರಿಂದ ಮೈಮೇಲಿನ ವಸ್ತ್ರಗಳೆಲ್ಲ ರಕ್ತಮಯವಾಗಿದ್ದವು ಅವನ ದೇಹದಲ್ಲಿಯ ಗಾಯಗಳಿಂದ ಇನ್ನೂ ರಕ್ತವು ಸಣ್ಣಾಗಿ ಹರಿಯುತ್ತಲಿತ್ತು. ಅವನು ಒಳ್ಳೇ ಪ್ರತಿಭಾಶಾಲಿಯಿರುವನೆಂಬದು ಅವನ ಗಂಭೀರ ಮುಖಮುದ್ರೆಯಿಂದ ವ್ಯಕ್ತವಾಗುತ್ತಿತ್ತು. ಮುಕುಂದದೇವನು ಆ ಮನುಷ್ಯನನ್ನು ಕುರಿತು—

"ನೀವು ಯಾರು?"

"ಮಹಾರಾಜರೆ, ನಾನೊಬ್ಬ ವಂಗವಾಸಿಯು. ನಾನು ಬ್ರಾಹ್ಮಣ ವರ್ಣದವನಿರುವೆನು. ನಾನು ಜಾತಿಯಿಂದ ಬ್ರಾಹ್ಮಣನಿದ್ದರೂ ಕ್ಷಾತ್ರ ಮನೋವೃತ್ತಿಯವನಿರುವೆನು. ವಂಗಸೇನಾಪತಿಯಾದ ಕಾಳಾಪಹಾಡನು ಅಪಾರವಾದ ಸೇನೆಯೊಡನೆ ಉತ್ಕಲದ ಸ್ವಾತಂತ್ರ್ಯ ಸಿಂಹಾಸನವನ್ನೂ, ಅದರೊಡನೆ ಜಗನ್ನಾಥನ ಮೂರ್ತಿಯನ್ನೂ ನಾಶಗೊಳಿಸಬೇಕೆಂಬ ಮಹತ್ವಾಕಾಂಕ್ಷೆಯಿಂದ ಬಂದಿರುವನು. ಜಗನ್ನಾಥಪುರಿಯ ಓಲಗದಲ್ಲಿ ತನಗಾದ ಅಪಮಾನದ ಸೇಡನ್ನು ಭಯಂಕರವಾದ ರೀತಿಯಿಂದ ತೀರಿಸಿಕೊಳ್ಳಬೇಕೆಂದು ಅವನು ದೃಢಸಂಕಲ್ಪ ಮಾಡಿಕೊಂಡಿರುವನು. ಮಹಾ ಪ್ರಭುಗಳೆ, ಸದ್ಯದ ಕಾಳಗವು ಅತ್ಯಂತ ಮಹತ್ವದ್ದಿರುವದು. ಈ ಗಂಡಾಂತರದಿಂದ ಪಾರಾದರೆ, ಉತ್ಕಲವು ಪುನರ್ಜನ್ಮ ಹೊಂದಿದಂತಾಗುವದು. ಓರಿಸಾದ ಸ್ವಾತಂತ್ರ್ಯ ಸಿಂಹಾಸನವನ್ನೂ ಪವಿತ್ರತಮಕ್ಷೇತ್ರದ ಅಧಿದೇವತೆಯಾದ ಜಗನ್ನಾಥನ ಮೂರ್ತಿಯನ್ನೂ ಯವನರ ಕೈಯೊಳಗಿಂದ ಪಾರುಮಾಡುವದು ಹಿಂದುಗಳೆನಿಸಿಕೊಳ್ಳುವ ಪ್ರತಿಯೊಬ್ಬನ ಕರ್ತವ್ಯವಾಗಿರುವದು. ಅದಕ್ಕಾಗಿ ನಾನು ನನ್ನ ಐದು ನೂರುಜನ ಅನುಚರರೊಡನೆ ತ್ರಿವೇಣಿಯ ಸಂಗ್ರಾಮಕ್ಕೆ ಒದಗಿದೆನು. ಮಂತ್ರಿಯಾದ ಜನಾರ್ದನನು ಜಡಸ್ವಾರ್ಥಿಯಾಗಿ ರಾಷ್ಟ್ರಘಾತುಕ ಕೃತಿಯನ್ನು ಮಾಡಿದನು. ಅವನ ನೀಚತನದಿಂದ ತ್ರಿವೇಣಿಯ ಸಂಗ್ರಾಮ

ದಲ್ಲಿ ಹಿಂದುಗಳು ಪರಾಜಿತರಾದರು. ಮಹಾರಾಜರೆ, ನೀವು ಸದ್ಯದ ಯುದ್ಧದಲ್ಲಿ ತೀರ ಅಲಿಪ್ತರಾಗಿದ್ದಂತೆ ತೋರುವಿರಿ. ಹೀಗೆ ಅಸಾವಧ ಸ್ಥಿತಿಯಲ್ಲಿರುವದು ನಿಮ್ಮ ಧರ್ಮವಲ್ಲ. ಲೀಲಾವಿಲಾಸಗಳಲ್ಲಿ ಕಾಲ ಕಳೆಯುವ ದಿನಗಳು ಉಳಿದಿಲ್ಲ. ಸದ್ಯದ ಆಪತ್ತು ತೊಲಗಿತೆಂದರೆ ಸುಖೋಪಭೋಗವನ್ನು ಹೊಂದಲಿಕ್ಕೆ ಯಾವ ಅಡ್ಡಿಯಿರುವದು? ನಾನು ನಿಷ್ಠುರವಾದ ಮಾತುಗಳನ್ನಾಡಿದ ಬಗ್ಗೆ ಸಿಟ್ಟಾಗಬೇಡಿರಿ. ನಿಮ್ಮ ಕೈಯಲ್ಲಿ ಓರಿಸಾದೇಶದ ಜೀವವಿರುವದು; ಹಿಂದು ಪ್ರಜಾಜನರ ಮಾನದ ನಿಕ್ಷೇಪವಿರುವದು. ನೀವು ರಾಜಕಾರಣದಲ್ಲಿ ಎಷ್ಟು ಸಾವಧರಾಗಿ ನಡೆದರೂ ಕಡಿಮೆಯೇ ಇರುವದು. ನಾನೂ ನನ್ನ ಜನರೂ ಓರಿಸಾದ ಸ್ವಾತಂತ್ರ್ಯಸಿಂಹಾಸನಕ್ಕಾಗಿ ಪಂಚಪ್ರಾಣಗಳನ್ನರ್ಪಿಸಲಿಕ್ಕೆ ಸಿದ್ಧರಾಗಿಯೇ ಬಂದಿರುವೆವು. ನೀವು ಅಗ್ನಿಯಲ್ಲಿ ಧುಮುಕ ಹೇಳಿದರೂ ಆ ಮಾತಿಗೆ ನಮ್ಮ ಸಮ್ಮತಿಯಿರುವದು.''

ಗದಾಧರನ ಮಾತುಗಳನ್ನು ಕೇಳಿದ ಮುಕುಂದದೇವನ ತಲೆಯಲ್ಲಿ ಪ್ರಕಾಶವು ಬಿದ್ದಿತು. ರಾಜಕಾರಣದಲ್ಲಿ ತನ್ನಿಂದ ಸಾಕಷ್ಟು ಕಾರ್ಯವು ಘಟಿಸಿಲ್ಲವೆಂಬದು ಅವನಿಗೆ ಗೊತ್ತಾಯಿತು. ಗದಾಧರನ ನಿಷ್ಠುರ ಮಾತಿನಿಂದ ಅವನು ಸಿಟ್ಟಾಗಲಿಲ್ಲ. ಅವನು ಶೂರನೂ, ರಾಜಕಾರಣ ಧುರಂಧರನೂ, ಸ್ವಧರ್ಮಾಭಿಮಾನಿಯೂ, ಸ್ವಾತಂತ್ರ್ಯಪ್ರೇಮಿಯೂ ಇರುವನೆಂಬದು ಮುಕುಂದದೇವನಿಗೆ ಗೊತ್ತಾಯಿತು. ಆಗ ಅವನು ಆನಂದದಿಂದ—''ಗಧಾಧರರೆ, ನಿಮ್ಮ ಸೂಚನೆಯು ಯೋಗ್ಯವಾದದ್ದಿರುವದು. ನಾನು ಬಂಡುಗಾರರ ನಿರ್ಮೂಲ ಮಾಡುವದಕ್ಕಾಗಿ ಬೇಗನೆ ಹೊರಡುವವನಿರುವೆನು.''

''ಮಹಾರಾಜರೆ, ನೀವೇ ಹೊರಡಬೇಕೆಂದು ನನ್ನ ಅಭಿಪ್ರಾಯವಿಲ್ಲ. ಎಲ್ಲ ಸ್ಥಳಗಳಲ್ಲಿಯೂ ಲಕ್ಷ್ಯಗೊಡುತ್ತ ಸಂಗ್ರಾಮ ಕಾರ್ಯವನ್ನು ಜರುಗಿಸುವದು ನಿಮ್ಮ ಕರ್ತವ್ಯವಿರುವದೆಂಬದನ್ನಿಷ್ಟು ತಿಳಿಸಬೇಕೆಂಬ ಉದ್ದೇಶದಿಂದ ನಾನು ಮಾತಾಡಿದೆನು.''

''ಪ್ರತಿಭಾಶಾಲಿಗಳಾದ ನೀವು ಈ ಪ್ರಸಂಗದಲ್ಲಿ ಇಲ್ಲಿಗೆ ಬಂದ

ದ್ದರಿಂದ ನನಗೆ ಮಹದಾನಂದವಾಗಿದೆ. ನಿಮ್ಮ ಕೈಯೊಳಗೆ ಐದು ಸಾವಿರ ಸೈನ್ಯವನ್ನು ಕೊಡುತ್ತೇನೆ. ಪ್ರಸಂಗ ಬಂದ ಹಾಗೆ ಅದರ ಉಪಯೋಗ ಮಾಡಿರಿ."

"ತಮ್ಮ ಕೃಪೆಯಿಂದ ನಾನು ಧನ್ಯನಾದೆನು. ತಮ್ಮ ಆಜ್ಞೆಯಂತೆ ನಡೆಯಲಿಕ್ಕೆ ನನ್ನ ಸಿದ್ಧತೆಯಿರುವದು. ರಾಷ್ಟ್ರದ್ರೋಹಿಯಾದ ಜನಾರ್ದನನನ್ನು ಹಿಡಿದು ತರಲಿಕ್ಕೆ ಆಜ್ಞೆಯಾದರೆ ಈಗಲೆ ಹೊರಡುವೆನು."

ಗದಾಧರನು ಹೀಗೆ ನುಡಿಯುವಷ್ಟರಲ್ಲಿ ಒಬ್ಬ ಯವನ ಯುವಕನು ಓಲಗವನ್ನು ಪ್ರವೇಶಿಸಿ, ತನ್ನ ಖಡ್ಗವನ್ನು ಸಿಂಹಾಸನದ ಮುಂದಿಟ್ಟು ಮುಕುಂದದೇವನಿಗೆ ಮುಜುರೆ ಮಾಡಿ—"ಮಹಾರಾಜರೆ, ಈ ದೀನ ಸೇವಕನ ಸೇವೆಯನ್ನು ಕೈಕೊಳ್ಳಬೇಕೆಂದು ಪ್ರಾರ್ಥಿಸುವೆನು."

"ನೀವು ಯಾರು?"

"ಮಹಾರಾಜರೆ, ನಾನು ಸಮ್ರಾಟ ಇಬ್ರಾಹಿಮಶಹರ ಹತಭಾಗಿ ಪುತ್ರನಾದ ಕರೀಮಶಹನು."

"ನೀವು ಕರಿಮಶಹರೆ?"

"ಹೌದು."ಎಂದು ಕರೀಮಶಹನು ಹೇಳಿ—"ಸಮ್ರಾಟರೆ, ಯುವನರು ಈಗ ಬಹಳೇ ಮದಾಂಧರಾಗಿರುವರು. ಎಷ್ಟು ರಾಜ್ಯಸಂಪಾದನೆ ಮಾಡಿದರೂ ಅವರ ರಾಕ್ಷಸೀ ರಾಜ್ಯಲಾಲಸೆಯು ತೀರುವಂತಿಲ್ಲ. ವಂಗ ಸುಲತಾನನಾದ ಸಲಿಮನನು ಓರಿಸಾದೇಶವನ್ನು ಪಾದಾಕ್ರಾಂತಗೊಳಿಸಬೇಕೆಂದು ತನ್ನ ಜಾಮಾತನಾದ ಕಾಳಾಪಹಾಡನನ್ನು ಕಳುಹಿಸಿರುವನಷ್ಟೇ? ಇದರಿಂದ ಓರಿಸಾದ ಮೇಲೆ ದೊಡ್ಡ ವಿಪತ್ತು ಪ್ರಾಪ್ತವಾದಂತಾಗಿರುವದು. ನಾವು ಶತಕಾನು ಶತಕಗಳ ವರೆಗೆ ಭರತಭೂಮಿಯಲ್ಲಿ ವಾಸವಾಗಿದ್ದು, ಭಾರತದ ಅನ್ನದಿಂದ ಪರಿಪೋಷಿತರಾಗಿ, ಭಾರತೀಯರ ಮೇಲೆ ನಿಷ್ಕಾರಣವಾಗಿ ಕೈಮಾಡುವದು ಎಲ್ಲಿಯ ನ್ಯಾಯವು? ಹಿಂದುಗಳಿಗೆ ಭಾರತವು ಹೇಗೆ ಮಾತೃಭೂಮಿಯಾಗಿರುವದೋ, ಅದರಂತೆ ಶತಕಾನು ಶತಕಗಳ ವರೆಗೆ ವಾಸಮಾಡಿದ ಮುಹಮ್ಮದೀಯರಿಗಾದರೂ ಅದು

ಮಾತೃಭೂಮಿಯೇ ಆಗಿರುವದು. ಹಿಂದುಗಳು ನಮಗೆ ಬಂಧುಸಮಾನ ರಿರುವರು. ಹೀಗಿದ್ದು ಸ್ವಕೀಯ ಭಾವನಾ ವಿಸ್ಮೃತಿಯನ್ನು ಹೊಂದಿ, ಹಿಂದು ರಾಜ್ಯದ ಮೇಲೆ-ಹಿಂದುಭಾಂಧವರ ಮೇಲೆ-ಕೈಮಾಡುವ ಯವ ನನು ಇಡೀ ಭರತಖಂಡದ ಶತ್ರುವೆಂದು ಏಕೆ ತಿಳಿಯಬಾರದು? ನಾನು ಯವನನಿದ್ದರೂ, ಹಿಂದುರಾಷ್ಟ್ರದ ಮೇಲೆ,-ಹಿಂದು ಧರ್ಮದ ಮೇಲೆ-ದಂಡೆತ್ತಿ ಬಂದ ಕಾಳಾಪಹಾಡ-ಕಾತಲೂಖಾನರನ್ನು ವೈರಿಗಳೆಂದು ಭಾವಿ ಸಿರುವೆನು. ನ್ಯಾಯನೀತಿಗಳನ್ನು ಪಾಲಿಸದ ಮನುಷ್ಯನು ಪಶುಕೋಟಿ ಯೊಳಗಿನವನೇ ಸರಿ. ಕಾಳಾಪಹಾಡನು ತನಗಾದ ಅಪಮಾನದ ಸೇಡನ್ನು ತೀರಿಸಿಕೊಳ್ಳಲಿಕ್ಕೆ ಬಂದಿರುವನು. ಓರಿಸಾದೇಶವನ್ನು ಪಾದಾಕ್ರಾಂತ ಗೊಳಿಸಿ, ಜಗನ್ನಾಥನ ಮೂರ್ತಿಯನ್ನು ವಿಧ್ವಂಸಗೊಳಿಸಬೇಕೆಂದು ಅವನ ಮಹತ್ವಾಕಾಂಕ್ಷೆಯಿರುವದು. ನಾವೆಲ್ಲರೂ ಹಿಂದುಗಳಿರುವದ ರಿಂದಲೂ, ಓರಿಸಾದ ಸ್ವಾತಂತ್ರ್ಯಸಿಂಹಾಸನ ರಕ್ಷಣೆಯು ಹಿಂದು ಗಳಾದ ನಮ್ಮ ಕರ್ತವ್ಯವಾಗಿರುವದರಿಂದಲೂ, ಎಲ್ಲರೂ ಐಕ್ಯದಿಂದ ಕಾದಿ, ಶತ್ರುಗಳನ್ನು ಪರಾಭವಗೊಳಿಸಲಿಕ್ಕೆ ಈ ಸೇವಕನು ತಮ್ಮ ಸ್ವಾ-ತಂತ್ರ್ಯಸಿಂಹಾಸನದ ಸಾಕ್ಷಿಯಾಗಿ ಏಕನಿಷ್ಠೆಯಿಂದ ಕಾರ್ಯರತನಾಗ ಲಿಕ್ಕೆ ಸಿದ್ಧನಿರುವನು.''

"ಕರಿಮುಶಹರೆ, ನಿಮ್ಮಂತಹ ವಿಧರ್ಮಿಯರು-ಹಿಂದುಗಳ ಅಸ್ಥಿ ವೈರಿಗಳೆಂದೆನಿಸಿಕೊಳ್ಳುವವರು-ನಿಜವಾದ ರಾಷ್ಟ್ರಧರ್ಮ ಪ್ರೇರಿತರಾಗಿ ಹಿಂದುಗಳ ಸ್ವಾತಂತ್ರ್ಯಸಿಂಹಾಸನದ ರಕ್ಷಣೆಗಾಗಿ ಧಾವಿಸಿ ಬಂದಿರಿ. ನ್ಯಾಯ ನೀತಿಗಳ ಕೊಲೆಯಾಗಬಾರದೆಂಬ ಮಾನವೀ ಧರ್ಮವು ನಿಮಗೆ ಚನ್ನಾಗಿ ಗೊತ್ತಿರುವದು; ಆದರೆ ಓರಿಸಾ ದೇಶದ ಮಂತ್ರಿಯೆಂದೆನಿಸಿ ಕೊಳ್ಳುವಜನಾರ್ದನನು ಶತ್ರುಗಳನ್ನು ಕೂಡಿರುವನು. ಇಂತಹ ಅಧಃ ಪಾತವು ಮತ್ತೆಲ್ಲಿಯಾದರೂ ಕಾಣಬಹುದೆ? ಕ್ಷುದ್ರಮನೋವೃತ್ತಿಯ ಜನರು ಜಡಸ್ವಾರ್ಥಕ್ಕಾಗಿ ಎಂತಹ ನೀಚತನ ಮಾಡುವರೆಂಬದಕ್ಕೆ ಜನಾ ರ್ದನ ಮಂತ್ರಿಯು ಉತ್ತಮ ದೃಷ್ಟಾಂತವಾಗಿರುವನು.''

"ಮಹಾರಾಜರೆ, ನಾನು ಆ ದೇಶದ್ರೋಹಿಯ ಕೊಬ್ಬನ್ನು

ಹಿಂಗಿಸಿ ಅವನನ್ನು ಕೈ ಸೆರೆ ಹಿಡಿದು ತರುವೆನು. ಈಗಲೆ ನನಗೆ ಆಜ್ಞೆ ಕೊಡಿರಿ.''

''ಕರೀಮುಶಹರೆ, ನಾನು ನಿಮ್ಮ ಶೂರತನದ ಕೃತಿಗಳನ್ನು ಕೇಳಿದ್ದೆನು. ನೀವು ಶೂರರಿದ್ದಂತೆ ನ್ಯಾಯ-ನೀತಿ-ನಿಷ್ಣಾತರಿರುವಿರಿ. ಜನಾರ್ದನನ ಬಂಡು ಅಡಗಿಸಲಿಕ್ಕೆ ನಾನೇ ಹೋಗಬೇಕೆಂದು ಮಾಡಿದ್ದೆನು. ನೀವು ಉತ್ಸಾಹದಿಂದ ಈ ಕಾರ್ಯಕ್ಕೆ ಮುಂದುವರಿದದ್ದರಿಂದ ನಾನು ಸಂತೋಷಭರಿತನಾದೆನು. ನಿಮ್ಮ ಕಡೆಗೆ ಐದು ಸಾವಿರ ಸೈನ್ಯವನ್ನು ಕೊಡುತ್ತೇನೆ. ನೀವು ನಾಳೆಗೇ ಇಲ್ಲಿಂದ ಪ್ರಯಾಣ ಮಾಡಿರಿ.''

ಗೋವಳಕೊಂಡದ ಸುಲತಾನನಾದ ಇಬ್ರಾಹಿಮುಶಹನ ಪುತ್ರನೇ ಈ ಕರೀಮುಶಹನು. ಮುಕುಂದದೇವನು ಇಬ್ರಾಹಿಮುಶಹನ ಮೇಲೆ ದಾಳಿ ಮಾಡಿ ಅವನನ್ನು ಸೋಲಿಸಿದ್ದರೂ, ಅವನ ರಾಜ್ಯವನ್ನು ತೆಗೆದುಕೊಳ್ಳಲಿಲ್ಲ; ಕಪ್ಪವನ್ನು ಮಾತ್ರ ತೆಗೆದುಕೊಂಡು ಬಂದನು; ಆದರೆ ಸಲಿಮನ ಸುಲತಾನನು ಅವನ ರಾಜ್ಯವನ್ನು ಕೈವಶಮಾಡಿಕೊಂಡಿದ್ದನು. ರಾಜ್ಯಪಿಪಾಸೆಯುಳ್ಳವನಾದ ಸಲಿಮನು ಜಾತಿಸೂತ್ರಗಳನ್ನು ನೋಡದೆ, ರಾಜ್ಯಾಪಹಾರ ಮಾಡಿದ್ದರಿಂದ ಕರೀಮುಶಹನ ತಲೆಯು ತಿರುಗಿತ್ತು. ಅವನು ಸ್ವಭಾವದಿಂದ ಅತ್ಯಂತ ಸುಜನನಾಗಿದ್ದನು. ಬಂಗಾಲದ ನವಾಬನಾದ ಸಲಿಮನು ಸ್ವಜಾತಿಯವನಿದ್ದರೂ ಅನೀತಿಯವನಾದ್ದರಿಂದ, ಅವನ ಮೇಲಿನ ಸೇಡು ತೀರಿಸಿಕೊಳ್ಳಬೇಕೆಂದು ಕರೀಮುಶಹನು ಹೊಂಚುಹಾಕಿದ್ದನು. ಅವನ ಈ ಮಹತ್ವಾಕಾಂಕ್ಷೆಯು ಈಡೇರಲಿಕ್ಕೆ ಮಾರ್ಗವಿದ್ದಿಲ್ಲ. ಸಲಿಮನಂತಹ ಬಲಾಢ್ಯನೊಡನೆ ಹತಭಾಗಿಯಾದ ಕರೀಮುಶಹನು ಕಾದುವ ಬಗೆ ಹೇಗೆ? ಒರಸಾದ ಸಂಗ್ರಾಮದಲ್ಲಿಯಾದರೂ ಸೇರಿಕೊಂಡು ಕೈಲಾದಷ್ಟು ಸಾಹಸ ಮಾಡಬೇಕೆಂದು ಅವನು ಮುಕುಂದದೇವನ ಬಳಿಗೆ ಬಂದನು.

ಕರೀಮುಶಹನು ದುಲಾರಿಯನ್ನು ಪ್ರೀತಿಸುತ್ತಿದ್ದನು. ಅವಳಾದರೂ ತನ್ನನ್ನು ಪ್ರೀತಿಸುತ್ತಿರುವಳೆಂದು ಅವನ ಭಾವನೆಯಾಗಿತ್ತು. ಸುಲತಾನನ ಕನ್ಯೆಯು ತನ್ನನ್ನು ವರಿಸಿದರೆ ಗತವೈಭವವು ದೊರೆಯುವ

ದೆಂದು ಅವನ ಭಾವನೆಯಾಗಿತ್ತು. ಅಂತೆಯೆ ಅವನು ಹಿಂದಿನ ಒಂದು ಪ್ರಕರಣದಲ್ಲಿ ಹೇಳಿದಂತೆ ಶಹಾಜಾದಿಯ ಉದ್ಯಾನದಲ್ಲಿ ಬಂದನು. ಅಲ್ಲಿ ಅವನು ಸೆರೆಯಾಳಾಗಿ ಕಾರಾಗೃಹವನ್ನು ಸೇರಬೇಕಾಯಿತು; ಹಾಗು ನವಾಬ ಕನ್ಯೆಯು ತನ್ನನ್ನು ಪ್ರೀತಿಸುವದಿಲ್ಲವೆಂಬದು ಆಗ ಅವನ ನಿದರ್ಶನಕ್ಕೆ ಬಂತು. ಬಳಿಕ ಕಾಲಾಚಾಂದ-ನಗರಪಾಲನಿಂದ ದೋಷಮುಕ್ತನಾದ ಯವನ ಯುವಕನೇ ಈ ಕರೀಮುಶಹನು!

ಯವನನಾದ ಕರೀಮುಶಹನನ್ನು ಬಂಡಾಯವನ್ನು ಶಾಂತಮಾಡುವದಕ್ಕೆ ಕಳಿಸಿದರೆ ಅವನಿಂದ ಕಾರ್ಯಸಾಧನೆಯಾಗಲಾರದೆಂದು ಗದಾಧರನು ತಿಳಿದನು. ಮಂತ್ರಿಯು ದುರ್ಬೋಧದಿಂದ ತಲೆ ತಿರುಗಿದ ಹಿಂದುಗಳ ಮೇಲೆ ಯವನ ಸೇನಾಪತಿಯು ಸಾಗಿ ಹೋದರೆ, ಆ ಬಂಡಾಯಕ್ಕೆ ಮತ್ತಿಷ್ಟು ತೀಕ್ಷ್ಣ ಸ್ವರೂಪವು ಪ್ರಾಪ್ತವಾಗುವದೆಂದು ಅವನ ಮನವರಿಕೆಯಾಗಿತ್ತು. ಆಗ ಅವನು ಮುಕುಂದದೇವನನ್ನು ಕುರಿತು—

"ಮಹಾರಾಜರೆ, ಜನಾರ್ದನನನ್ನು ಕೈ ಸೆರೆ ಹಿಡಿದುಕೊಂಡು ಬರುವ ಕಾರ್ಯವನ್ನು ನಾನು ವಹಿಸುವೆನು. ಕರೀಮುಶಹರಿಗೆ ಮತ್ತೊಂದು ಕಾರ್ಯವನ್ನು ಹೇಳಿರಿ."

"ನಿಮಗೇ ಬೇರೆ ಕೆಲಸ ಕೊಡುವೆನು. ಕರೀಮುಶಹರನ್ನು ಜನಾರ್ದನನ ಮೇಲೆ ಕಳಿಸಬೇಕಾಗಿದೆ. ವಿಧರ್ಮಿಯರು ಸಹ ಹಿಂದುಗಳ ಹಾಗು ಹಿಂದು ಸಿಂಹಾಸನದ ವಿಷಯದಲ್ಲಿ ಎಷ್ಟು ನಿಷ್ಠೆಯುಳ್ಳವರಿರುವರೆಂಬದನ್ನಾದರೂ ತಿಳಿದು, ಅವನೂ ಅವನ ಅನುಯಾಯಿಗಳೂ ನಾಚಲಿ!"

ಹೊಸದಾಗಿ ಅಧಿಕಾರವನ್ನು ದೊರಕಿಸಿದ ಗದಾಧರನು ಹೆಚ್ಚು ಮಾತನಾಡಿ, ಅರಸನ ಮನಸ್ಸಿನಲ್ಲಿ ವಿಕಲ್ಪ ಭಾವನೆಯನ್ನು ಹುಟ್ಟಿಸಲಿಕ್ಕೆ ಸಿದ್ಧನಿದ್ದಿಲ್ಲ. ಮೇಲಾಗಿ ಕರೀಮುಶಹನೂ ಜನಾರ್ದನನ ಮೇಲೆ ದಂಡೆತ್ತಿ ಹೋಗಲಿಕ್ಕೆ ಬಳ್ಳೇ ಆತುರಗೊಂಡಿದ್ದನು. ಅವನ ಮನಸ್ಸನ್ನು ಮುರಿದು, ತಾನು ಯುದ್ಧಯಾತ್ರೆಗೆ ಹೊರಡುವದೂ ಯೋಗ್ಯವಲ್ಲವೆಂದು ಗದಾಧರನ ತಿಳುವಳಿಕೆಯಾಯಿತು. ಮುಕುಂದದೇವನು ತನ್ನ ಮಾತಿನ ನಿಜವಾದ ಮರ್ಮವನ್ನು ತಿಳಿದಿದ್ದರೆ ಒಳಿತಾಗುತ್ತಿತ್ತೆಂದು

ಅವನು ಅಂದುಕೊಂಡನು. ಆಗ ಮುಕುಂದದೇವನು ಹೊಸ ಸೇನಾನಾಯಕರಾದ ಗದಾಧರ-ಕರೀಮಶಹರನ್ನುದ್ದೇಶಿಸಿ — "ಗದಾಧರರೆ, ಕರೀಮಶಹರೆ, ನೀವು ಪತ್ರಕ್ಷಪಾತಿಗಳಾಗಿ ನಮ್ಮ ಕಡೆಗೆ ಬಂದದ್ದರಿಂದ ಪರಮಾನಂದವಾಗಿದೆ. ಸದ್ಯದ ಯುದ್ಧದ ಪ್ರಸಂಗದಲ್ಲಿ ವಸ್ತ್ರದಾನಕ್ಕಿಂತಲೂ ಶಸ್ತ್ರದಾನವು ಅವಶ್ಯವಾಗಿರುವದು. ಅಂತೆಯೆ ನಿಮಗೆ ಸೇನಾಪತಿ ಪದದ ವಸ್ತ್ರಗಳನ್ನೀಯದೆ ಶಸ್ತ್ರಗಳನ್ನೇ ಕೊಡುವೆನು. ಇಂದಿನಿಂದ ನೀವು ಓರಿಸಾದ ಸೇನಾಪತಿಗಳಾದಿರಿ. ಓರಿಸಾದ ಸ್ವಾತಂತ್ರ್ಯಶ್ರೀ ಸಿಂಹಾಸನವನ್ನು ಪಾಲಿಸುವಿರೆಂದು ನನ್ನ ದೃಢವಿಶ್ವಾಸವಿರುವದು."

ಮುಕುಂದದೇವನು ಹೀಗೆ ನುಡಿದು, ಗದಾಧರ,-ಕರೀಮಶಹರಿಗೆ ಸುವರ್ಣಖಚಿತವಾದ ಹಿಡಿಕೆಯ ಖಡ್ಗಗಳನ್ನು ಸ್ವಹಸ್ತದಿಂದ ಕೊಟ್ಟನು. ಹೊಸ ಸೇನಾನಾಯಕರಿಬ್ಬರೂ ಶಸ್ತ್ರಗ್ರಹಣ ಮಾಡಿ, ಅರಸನಿಗೆ ನಮಸ್ಕಾರಗಳನ್ನರ್ಪಿಸಿ ತಮ್ಮ ಸ್ಥಾನಗಳಲ್ಲಿ ಕುಳಿತರು. ಅನಂತರದಲ್ಲಿ ಯುದ್ಧದ ಸಲುವಾಗಿ ಮಾತುಕಥೆಗಳು ನಡೆದವು. ಶತ್ರುಗಳ ಪ್ರತೀಕಾರಕ್ಕಾಗಿ ಯಾವ ಯಾವ ಉಪಾಯಗಳನ್ನು ಯೋಜಿಸಬೇಕೆಂಬದು ನಿರ್ಧರಿಸಲ್ಪಟ್ಟ ಮೇಲೆ ಅಂದಿನ ಸಭೆಯು ವಿಸರ್ಜಿಸಲ್ಪಟ್ಟಿತು.

---

# ಬುದ್ಧಿಬಲವೇ ಬಲ.

ವ್ರಜಬಾಲೆಯೂ ಉಷಾಸುಂದರಿಯೂ ಮುಕುಂದದೇವನೊಡನೆ ಜಗನ್ನಾಥಪುರಿಯಿಂದ ಹೊರಟು ಕಟಕವಾರಣಾಶಿಗೆ ಬಂದರು. ವ್ರಜಬಾಲೆಯು ತನ್ನ ಅರಮನೆಯಲ್ಲಿಯೆ ಇರಬೇಕೆಂದು ಮುಕುಂದದೇವನ ಇಚ್ಛೆಯಿತ್ತು; ಆದರೆ ಅವಳು ಈ ಮಾತಿಗೆ ಒಪ್ಪಲಿಲ್ಲ. ಅವಳು ಕಾಠಜುಡೀತೀರದಲ್ಲಿ ರಾಜೋದ್ಯಾನದೊಳಗಿನ ಪ್ರಾಸಾದದಲ್ಲಿ ಉಷಾಸುಂದರಿಯೊಡನೆ ಇರತೊಡಗಿದಳು. ವ್ರಜಬಾಲೆಯು ಈ ಪ್ರಾಸಾದಕ್ಕೆ ಚಿತ್ರಪ್ರಾಸಾದವೆಂಬ ಹೆಸರಿಟ್ಟಿದ್ದಳು. ಈ ಚಿತ್ರಪ್ರಾಸಾದವು ಕಟಕ ರಾಜಧಾನಿಯ

ಸ್ವರೂಪದಲ್ಲಿತ್ತು. ಮುಕುಂದದೇವನು ವ್ರಜಬಾಲೆಯ ಆರಾಧನೆಯಲ್ಲಿ ತೊಡಗಿದ್ದರಿಂದ ಅವನು ಯಾವಾಗಲೂ ಈ ಪ್ರಾಸಾದಕ್ಕೆ ಬಂದು ಹೋಗುತ್ತಿದ್ದನು. ಅವನು ವ್ರಜಬಾಲೆಯ ಬಳಿಯಲ್ಲಿ ಎಷ್ಟೋ ದಾಸದಾಸಿಯರನ್ನಿರಿಸಿದ್ದನು. ಪ್ರಾಸಾದದ ರಕ್ಷಣೆಗಾಗಿ ತಕ್ಕಷ್ಟು ಕಾವಲುಗಾರರಾದರೂ ಇದ್ದರು. ಮುಕುಂದದೇವನ ಈ ವ್ಯವಸ್ಥೆಯನ್ನು ನೋಡಿ ಜನರ ಭಾವನೆಯು ವಿಪರೀತವಾಗಿತ್ತು. ವ್ರಜಬಾಲೆಯು ತಮ್ಮ ಅರಸನ ಪ್ರೀತಿಯ ರಾಣಿಯೆಂದು ಅವರು ತಿಳಿದಿದ್ದರು. ಪ್ರತಿಯೊಬ್ಬ ಸೇವಕನು ಅವಳಿಗೆ 'ರಾಣೀಸರಕಾರ' ಎಂದೆನ್ನುತ್ತಿದ್ದರು. ಜನರ ಮನಸ್ಸಿನಲ್ಲಿ ವಿಪರೀತವಾದ ಭಾವನೆಯಾದದ್ದು ವ್ರಜಬಾಲೆಗೂ ಉಷಾಸುಂದರಿಗೂ ತಿಳಿದಿದ್ದಿಲ್ಲ. ತನಗೆ ಗೌರವವನ್ನು ಕೊಡುವದಕ್ಕಾಗಿ ಹೀಗೆ ಸಂಬೋಧಿಸುವರೆಂದು ವ್ರಜಬಾಲೆಯು ತಿಳಿದಿದ್ದಳು. ಅವರ ಈ ಸಂಬೋಧನೆಯಿಂದ ಅವಳಿಗೆ ಪರಮಾನಂದವಾಗುತ್ತಿತ್ತು. ಒರಿಸಾದ ರಾಣಿಯಾಗುವ ಭಾಗ್ಯವು ತನಗೆ ಲಭಿಸಿದರೆ ಬೇಕಾದಂತಹ ರಾಜಕಾರಣಗಳನ್ನು ನೀಗಿಸುವೆನೆಂದು ಅವಳು ಅನ್ನುತ್ತಿದ್ದಳು. ರಾಣಿಯಾಗುವದೆಂದರೆ, ಮುಕುಂದದೇವನ ಪತ್ನಿಯಾಗುವದೆಂದು ಅವಳು ಭಾವಿಸಿರಲಿಲ್ಲ; ಒರಿಸಾದ ರಾಜ್ಯಾಧಿಕಾರಗಳು ಅರಸನಿಗಿರುವಂತೆ ತನಗೂ ಲಭಿಸಿದರೆ ರಾಣಿಯೆಂಬ ಹೆಸರಿನ ಸಾರ್ಥಕತೆಯಾಗುವದೆಂದು ಅವಳು ತಿಳಿದಿದ್ದಳು. ರಾಜಕಾರಣದಲ್ಲಿ ಕೈಹಾಕಿ ಸದ್ಯದ ಯುದ್ಧದ ಗೊಂದಲದಲ್ಲಿ ತನ್ನಿಂದಾದಷ್ಟು ಕರ್ತವ್ಯ ಪ್ರಭಾವವನ್ನು ತೋರಿಸಬೇಕೆಂದೂ, ಕಾಳಾಪಹಾಡನ ಮೇಲಿನ ಸೇಡನ್ನು ತೀರಿಸಿಕೊಳ್ಳಬೇಕೆಂದೂ ಅವಳು ಮಹತ್ವಾಕಾಂಕ್ಷೆ ತಳೆದಿದ್ದಳು. ಮುಕುಂದದೇವನು ತನ್ನ ಪ್ರಾಪ್ತಿಗಾಗಿ ದಿವರಾತ್ರಿಯಲ್ಲಿ ಯತ್ನಿಸುತ್ತಿರುವನೆಂಬದು ಅವಳಿಗೆ ಗೊತ್ತಾಗಿತ್ತು; ಆದರೆ ಆ ಸಾಧ್ವಿಯು ಅವನನ್ನು ಉಪಾಯದಿಂದ ಸಮಾಧಾನ ಪಡಿಸುತ್ತಿದ್ದಳು. ವಿಲಾಸಿಯಾದ ರಾಜನು ರಾಜಕಾರಣವನ್ನು ದುರ್ಲಕ್ಷಿಸುತ್ತಿರುವದು ಅವಳಿಗೆ ಸಹನವಾಗುತ್ತಿದ್ದಿಲ್ಲ. ಯುಕ್ತಿಪ್ರಯುಕ್ತಿಗಳಿಂದ ಅವನನ್ನು ಕರ್ತವ್ಯತತ್ಪರನನ್ನಾಗಿ ಮಾಡಬೇಕೆಂದು ಅವಳು ಸಾಹಸಪಡುತ್ತಿದ್ದಳು. ಒರಿಸಾದ ಸ್ವಾತಂತ್ರ್ಯ

ಸಿಂಹಾಸನದ ಅಧಿಪತಿಯು ಕರ್ತವ್ಯವಿಮುಖನಾದರೆ ಹಿಂದುಗಳ ಪಾಡು ಬಳಿತಾಗದೆಂಬದನ್ನು ಅವಳು ಅರಿತಿದ್ದಳು. ರಾಷ್ಟ್ರಪ್ರೇಮಿಯೂ ಸ್ವಧರ್ಮಾಭಿಮಾನಿಯೂ ಆದ ವ್ರಜಬಾಲೆಯು ಮುಕುಂದದೇವನನ್ನು ಕರ್ತವ್ಯದಲ್ಲಿ ತೊಡಗಿಸುವದಕ್ಕಾಗಿ ಅವನ ಬಳಿಯಲ್ಲಿದ್ದಳು. ಈ ಮಹತ್ತ್ವರವಾದ ಕಾರ್ಯಸಿದ್ಧಿಗಾಗಿಯೇ ಅವಳು ಕಾಮುಕನಾದ ಅರಸನ ಕಾಮುಕತನದ ಚೇಷ್ಟೆಗಳನ್ನು ಸಹಿಸಿಕೊಳ್ಳುತ್ತಿದ್ದಳು. ಓರಿಸಾದ ರಾಜಕಾರಣದಲ್ಲಿ ತೊಡಗುವದರಿಂದ ಓರಿಸಾದ ಕಲ್ಯಾಣವಾಗುವದಲ್ಲದೆ, ತನ್ನ ವೈರಿಯಾದ ಕಾಳಾಪಹಾಡನ ಮೇಲಿನ ಸೇಡು ತೀರಿಸಿಕೊಳ್ಳುವ ಹವಣಿಕೆಯೂ ಈಡೇರುವದೆಂದು ಅವಳು ಕಲ್ಪಿಸಿಕೊಂಡಿದ್ದಳು.

ತನ್ನ ಸಹಚರಿಯಾದ ವ್ರಜಬಾಲೆಯು ಮುಕುಂದದೇವನಲ್ಲಿ ಅನುರಕ್ತಳಾಗತೊಡಗಿರುವಳೆಂದು ಇತ್ತೀಚೆಗೆ ಉಷಾಸುಂದರಿಯು ಭಾವನೆಯಾಗತೊಡಗಿತ್ತು. ಚಿತ್ರಪ್ರಾಸಾದಕ್ಕೆ ಬಂದಾಗಿನಿಂದ ಅವಳ ವರ್ತನದಲ್ಲಿ ಸ್ಥಿತ್ಯಂತರವಾಗತೊಡಗಿರುವದೆಂದು ಉಷಾಸುಂದರಿಯು ತಿಳಿದಿದ್ದಳು. ಮೊದಲೇ ಸ್ವಚ್ಛಂದವೃತ್ತಿಯುವಳಾದ ವ್ರಜಬಾಲೆಯು ರಾಣಿಯೆಂಬ ಹೆಸರಿಗೆ ಸರಿಯಾದ ವಸ್ತ್ರಪ್ರಾವರಣಗಳನ್ನೂ ಅಲಂಕಾರಗಳನ್ನೂ ಧರಿಸಲಾರಂಭಿಸಿದ್ದಳು. ಅರಸನೊಡನೆ ಏಕಾಂತದಲ್ಲಿ ಎಷ್ಟೋ ವೇಳೆಯವರೆಗೆ ಮಾತನಾಡುತ್ತ ಕುಳಿತುಕೊಳ್ಳುತ್ತಿದ್ದಳು. ಅವಳ ಈ ವರ್ತನವು ಉಷಾಸುಂದರಿಯ ಮನಸ್ಸನ್ನು ಸಾಶಂಕಗೊಳಿಸಿತ್ತು. ತರುಣನೂ ತೇಜಸ್ವಿಯೂ ವಿವಾಹಿತಪತಿಯೂ ಆದ ಕಾಲಾಚಾಂದನನ್ನು ತಿರಸ್ಕರಿಸಿದ ವ್ರಜಬಾಲೆಯು, ವೃದ್ಧನಾದ ಮುಕಂದದೇವನಲ್ಲಿ ಅನುರಕ್ತಳಾಗಿರುವಳೆಂದು ಹೊಳೆಯುತೊಡಗಿದೊಡನೆಯೇ ಅವಳು ತನ್ನ ಮಿತ್ರೆಯ ವಿಷಯವಾಗಿ ತಿರಸ್ಕಾರಭಾವನೆಯನ್ನು ತಳೆದಳು. ಐಶ್ವರ್ಯ-ಸತ್ತೆಗಳು ಎಂತಹ ದೃಢನಿಶ್ಚಯಿಯ ಮನಸ್ಸನ್ನಾದರೂ ಚಂಚಲಗೊಳಿಸುವವೆಂದು ಅವಳು ಅಂದುಕೊಂಡಳು. ಈ ವಿಷಯದಲ್ಲಿ ವ್ರಜಬಾಲೆಯನ್ನು ವಿಚಾರಿಸಬೇಕೆಂದು ಅವಳು ನಿಶ್ಚಯಿಸಿಕೊಂಡಳು.

ಚಿತ್ರಪ್ರಾಸಾದದ ರಾಜೋದ್ಯಾನವು ಕಾಠಜುದಿ ನದಿಗೆ ಹೊಂದಿ

ಯೇ ಇತ್ತು. ಆ ಉದ್ಯಾನದಲ್ಲಿ ನದಿಯ ಸೋಪಾನಗಳಿದ್ದವು. ವ್ರಜಬಾಲೆ-ಉಷಾಸುಂದರಿಯರು ಸೋಪಾನದ ಮೇಲೆ ಕುಳಿತುಕೊಂಡು ನದೀಶೋಭೆಯನ್ನು ನಿರೀಕ್ಷಿಸುತ್ತ ಮಾತನಾಡತೊಡಗಿದ್ದರು. ಆಗ ಉಷಾಸುಂದರಿಯು ವ್ರಜಬಾಲೆಯನ್ನು ಕುರಿತು—"ವ್ರಜಬಾಲೆ, ಜನರು ನಿನಗೆ 'ರಾಣಿ ಸರಕಾರ' ಎಂದು ಸಂಬೋಧಿಸುವದು ಯಥಾಯೋಗ್ಯವಿರುವದು. ರತ್ನಖಚಿತವಾದ ಅಲಂಕಾರಗಳನ್ನೂ ಉತ್ತಮೋತ್ತಮವಾದ ವಸ್ತ್ರಪ್ರಾವರಣಗಳನ್ನೂ ಧರಿಸಿದ ನೀನು ಖರಿಸಾದ ಮಹಾ ರಾಜ್ಞಿಯಂತೆ ಶೋಭಿಸತೊಡಗಿರುವೆ. ಕಾಲಾಚಾಂದ ಗದಾಧರರು ಪ್ರೇಮವಿಟ್ಟಾಗ ನೀನು ಅಷ್ಟೊಂದು ಪ್ರೌಢಳಿದ್ದಿಲ್ಲ. ಈಗ ನಿನ್ನ ಅವಯವಗಳು ಪೂರ್ಣ ವಿಕಾಸ ಹೊಂದಿ, ನಿನ್ನ ಸ್ವರ್ಗೀಯ ಸೌಂದರ್ಯವನ್ನು ದ್ವಿಗುಣಿತ ಮಾಡಿರುವವು. ಉಚ್ಚತರದ ವಸ್ತ್ರಾಲಂಕಾರಗಳಿಂದಂತೂ ನೀನು ನಿರ್ಜರೆಯರಂತೆ ಕಾಣತೊಡಗಿರುವೆ. ಪೂರ್ಣವಿಕಸಿತಳಾದ ಕಮಲಿನಿಯಲ್ಲಿ ಎಂತಹ ಸಮ್ರಾಟನಾದರೂ ಅನುರಾಗವುಳ್ಳವನಾಗುವನು.''

"ಉಷಾಸುಂದರಿ, ನಾನು ಅಷ್ಟು ಚಲುವೆಯೆ?"

"ಈ ಮಾತಿನಲ್ಲಿ ಸಂಶಯವಿಲ್ಲ."

ವ್ರಜಬಾಲೆಯು ನಿಟ್ಟುಸಿರು ಬಿಟ್ಟಳು. ಕಣ್ಣುಗಳಲ್ಲಿ ನೀರು ತಂದಳು. ಆಗ ಅವಳು ಗದ್ಗದ ಕಂಠದಿಂದ—"ಸಖಿ, ನನ್ನ ಆಶೆಗಳೆಲ್ಲವೂ ಮಣ್ಣುಪಾಲಾಗಿ ಹೋಗಿರುವವು. ನಾನು ಒಂದೇ ಒಂದು ಕಾರ್ಯದ ಸಲುವಾಗಿ ಬಾಳಿರುವೆನು. ನನ್ನ ಆಯುಷ್ಯವನ್ನು ದುಃಖಮಯಮಾಡಿದ ಕಾಳಾಪಹಾಡನ ಮೇಲಿನ ಸೇಡು ತೀರಿಸಿಕೊಳ್ಳುವ ನನ್ನ ಹವಣಿಕೆಯು ಈಡೇರಿತೆಂದರೆ ನಾನು ಕೃತಕೃತ್ಯಳಾದೆನು. ಈ ಕಾರ್ಯಕ್ಕಾಗಿಯೆ ನಾನು ಖರಿಸಾದ ರಾಣಿಯಾಗಬೇಕಂದಿರುವೆನು. ನನ್ನ ಕೈಯಲ್ಲಿ ಕೆಲವು ಅಧಿಕಾರ-ಸೂತ್ರಗಳು ಒಂದರೆ ಖರಿಸಾದ ಹಿತವನ್ನೂ ಸೇಡು ತೀರಿಸಿಕೊಳ್ಳುವ ಕಾರ್ಯವನ್ನೂ ಸಾಧಿಸಬೇಕೆಂದಿರುವೆನು. ಮುಕುಂದದೇವನನ್ನು ಕರ್ತವ್ಯರತನನ್ನು ಮಾಡುವದು ನನ್ನ ಆದ್ಯಕರ್ತವ್ಯವಾಗಿರುವದು. ಅವನ ಕೈಯಲ್ಲಿ ಖರಿಸಾದ ಅಭಿಮಾನ ಧನವೂ,

ಸ್ವಾತಂತ್ರ್ಯವೂ ಇರುವದರಿಂದ ಅವನನ್ನು ಜಾಗ್ರತೆಗೊಳಿಸಲಿಕ್ಕೆ ಬೇಕು. ಉಷಾಸುಂದರಿ, ನಾನು ಖರೆಸಾದ ರಾಣಿಯಾಗಲಿಕ್ಕಿಲ್ಲವೇನು? ಕೇವಲ ರಾಣಿಯೆಂಬ ಸಂಬೋಧನದಿಂದ ನನಗೆ ಆನಂದವಾಗುವಂತಿಲ್ಲ. ರಾಜ್ಯಾಧಿಕಾರಗಳು ದೊರೆತರೆ ರಾಣಿಯೆಂಬ ಹೆಸರಿನ ಸಾರ್ಥಕತೆಯಾಗುವದು.''

''ವ್ರಜಬಾಲೆ, ಈ ಮಾತಿಗಾಗಿ ನೀನು ಇಷ್ಟೇಕೆ ಯೋಚಿಸುವೆ? ನಿನ್ನ ಮನೋಭಿಲಾಷೆಯು ಒಂದೇಒಂದು ಕ್ಷಣದಲ್ಲಿ ಈಡೇರುವಂತಿದೆ. ನೀನಾದರೂ ಈಗ ರಾಣಿಯಾಗುವ ಯತ್ನದಲ್ಲೇ ಇರುವೆ. ಮುಕುಂದದೇವನು ಅಹೋರಾತ್ರಿಯಲ್ಲಿ ನಿನ್ನ ಆರಾಧನೆ ಮಾಡುತ್ತಿರುವನು. ಹೀಗಿದ್ದ ಮೇಲೆ ಅವನ ರಾಣಿಯಾಗಬೇಕೆನ್ನುವ ನಿನ್ನ ಇಚ್ಛೆಯು ಈಡೇರಲಿಕ್ಕೆ ಅವಕಾಶವಾಗುವದೇನು?''

''ಉಷಾಸುಂದರಿ, ನೀನು ಹೀಗೇಕೆ ಮಾತನಾಡುವೆ? ನಾನು ಮುಕುಂದದೇವನ ರಾಣಿಯಾಗಲಿಕ್ಕೆ ಹೇಗೆ ಬರುವದು? ರಾಜನ ಉಪಪತ್ನಿಯಾಗಬೇಕೆಂದು ನೀನು ನನಗೆ ಹೇಳುವೆಯೇನು?''

''ವಿವಾಹವಾದರೆ ವಿವಾಹಿತ ಪತ್ನಿಯಾಗುವೆ.''

''ವಿವಾಹವೆ? ಇನ್ನೆಲ್ಲಿಯ ವಿವಾಹವು? ಮಾನಸ ಪತಿಗಳಾದ ಗದಾಧರರನ್ನು ಬಿಟ್ಟು ಮಿಕ್ಕವರು ನನ್ನ ಬಂಧುಸಮಾನರೆಂದೂ, ಪಿತೃಸಮಾನರೆಂದೂ ತಿಳಿದು, ಬಲಾತ್ಕಾರದಿಂದ ವರಿಸಿದ ಕಾಲಾಚಾಂದನನ್ನು ತಿರಸ್ಕರಿಸಿ ಬಂದ ನನಗೆ, ರಾಜನನ್ನು ವಿವಾಹವಾಗಲಿಕ್ಕೆ ಹೇಳುವೆಯಾ? ನಾನು ಒಂದೇ ಒಂದು ಆಶೆಯಿಂದ ರಾಜನ ಬಳಿಯಲ್ಲಿರತೊಡಗಿರುವೆನು. ನನ್ನನ್ನು ದುಃಖಪಂಕದಲ್ಲಿ ಕೆಡಹಿದ ಕಾಳಾಪಹಾಡನ ಸೇಡು ತೀರಿಸಿಕೊಳ್ಳಬೇಕೆಂಬದೇ ನನ್ನ ಆಯುಷ್ಯದ ಗುರಿಯು. ಅದರೊಡನೆ ಸಾಧ್ಯವಾದಷ್ಟು ರಾಷ್ಟ್ರಕಾರ್ಯವನ್ನೂ ಮಾಡಬೇಕೆಂದು ನನ್ನ ಅಭಿಲಾಷೆಯುಂಟು. ನನ್ನ ಮಹತ್ವಾಕಾಂಕ್ಷೆಯನ್ನು ಈಡೇರಿಸಿಕೊಳ್ಳಲಿಕ್ಕೆ ಮುಕುಂದದೇವನ ಆಶ್ರಯವನ್ನು ಬಯಸಿದೆನು. ನನ್ನ ಈ ಮನೋಭಿಲಾಷೆಯು ಈಡೇರಬೇಕೆಂಬ ಉದ್ದೇಶದಿಂದ ಭ್ರಮಿಷ್ಟನಾದ ಅರಸನ ಕಾಮುಕ ಚೇಷ್ಟೆಗಳನ್ನು ಸಹ ಸಹನ ಮಾಡಿಕೊಳ್ಳುತ್ತಿರುವೆನು. ಉಷಾ

ಸುಂದರಿ, ರಾಜನ ರಾಣಿಯಾಗಬೇಕೆಂದು ನನ್ನ ಇಚ್ಛೆಯಿಲ್ಲ. ಓರಿಸಾದ ರಾಣಿಯಾಗಬೇಕೆಂದಿರುವೆನು. ಉತ್ಕಲದ ಅಧಿಕಾರ ಸೂತ್ರಗಳು ನನ್ನ ಕೈಯಲ್ಲಿ ದೊರೆತರೆ ನನ್ನ ರಾಣಕಾರಣಪಟುತ್ವವನ್ನು ಜಗತ್ತಿನ ನಿದರ್ಶನಕ್ಕೆ ತಂದು ಕೊಡಬೇಕೆಂದು ಹಾರೈಸಿಕೊಂಡಿರುವೆನು. ವಿಲಾಸಿಯಾದ ಮುಕುಂದದೇವನನ್ನು ಜಾಗ್ರತೆಗೊಳಿಸಿ ಅವನನ್ನು ಕರ್ತವ್ಯದಲ್ಲಿ ತೊಡಗಿಸುವದೂ ತದ್ವಾರಾ ಕಾಳಾಪಹಾಡನ ಸೇಡನ್ನು ತೀರಿಸಿಕೊಳ್ಳುವದೂ ನನ್ನ ಕರ್ತವ್ಯಗಳಾಗಿರುವವು. ಕಾಳಾಪಹಾಡನ ಮೇಲಿನ ಸೇಡು ತೀರಿಸಿಕೊಳ್ಳುವವರೆಗೆ ನನ್ನ ಮನಸ್ಸು ಸಮಾಧಾನ ಹೊಂದುವಂತಿಲ್ಲ.''

ವ್ರಜಬಾಲೆಯು ತ್ವೇಷದಿಂದ ನುಡಿದು ಸುಮ್ಮನೆ ಕುಳಿತಳು. ಉಷಾಸುಂದರಿಯು ಅವಳ ಕೆಂಪಡರಿದ ಮುಖವನ್ನು ನಿರೀಕ್ಷಿಸುತ್ತ ಎಷ್ಟೋ ವೇಳೆಯ ವರೆಗೆ ಕುಳಿತಿದ್ದಳು. ಅನಂತರದಲ್ಲಿ ಅವಳ ದೃಷ್ಟಿಯು ಸ್ವಾಭಾವಿಕವಾಗಿ ನದೀಪ್ರವಾಹದ ಕಡೆಗೆ ಹೊರಳಿತು. ಕೂಡಲೆ ಅವಳು —''ವ್ರಜಬಾಲೆ, ಪ್ರವಾಹದಲ್ಲಿ ಒಂದು ಶವವು ತೇಲಿ ಹೋಗುತ್ತಿರುವದು ನೋಡು.''

ವ್ರಜಬಾಲೆಯು ಪ್ರವಾಹದ ಕಡೆಗೆ ದೃಷ್ಟಿಯನ್ನು ಹೊರಳಿಸಿದಳು. ಕೆಲವು ಹೊತ್ತಿನ ವರೆಗೆ ದಿಟ್ಟಿಸಿ ನೋಡಿ ಅವಳು — ''ಉಷಾಸುಂದರಿ, ಅದು ಪ್ರೇತವಲ್ಲ; ಯಾವನೋ ಒಬ್ಬ ಜೀವಂತ ಮನುಷ್ಯನು ನೀರಲ್ಲಿ ಶವದಂತೆ ಬಿದ್ದಿರುವನು. ಬಹಳ ಮಾಡಿ ಅವನು ಶತ್ರುಪಕ್ಷದ ಗುಪ್ತಚರನಿರಬಹುದು.'

''ಚನ್ನಾಗಿ ಈಸುವ ಮನುಷ್ಯನಿಗೆ ಈ ಕಲೆಯು ಬರುತ್ತದೆ. ಅವನು ಗುಪ್ತಚರನಿರುವದರಿಂದ ನೀರಲ್ಲಿ ಹೋಗಿ ತನ್ನ ಕಾರ್ಯಮಾಡಿಕೊಳ್ಳಬೇಕೆಂದು ಯತ್ನಿಸಿರುವನು. ಅವನು ಬಹಳ ಕೆಳಗಿನ ಸೋಪಾನಕ್ಕೆ ಹೋಗಿ, ಅಲ್ಲಿಂದ ದುರ್ಗಕ್ಕಾಗಲಿ ರಾಜಧಾನಿಗಾಗಲಿ ಹೋಗಬಹುದು. ನಾವೂ ಕೆಳಗಿನ ಸೋಪಾನದ ವರೆಗೆ ಹೋದರೆ ಆ ಮನುಷ್ಯನು ಎಲ್ಲಿಗೆ ಹೋಗುವನೆಂಬದು ತಿಳಿಯುವದು. ಅವನು ನಿಶ್ಚಯವಾಗಿ ಗುಪ್ತಚರನಿರುವನು. ಅವನನ್ನು ಹಾಗೇ ಬಿಟ್ಟು ಉಪಯೋಗ

ವಿಲ್ಲ. ಸೇವಕರಿಂದ ಅವನನ್ನು ತರಿಸಿಕೊಳ್ಳಲಿಕ್ಕೇ ಬೇಕು.''

''ವ್ರಜಬಾಲೆ, ಹೀಗೇಕೆ ಹುಚ್ಚಳಂತೆ ಮಾತನಾಡುವೆ? ನೀನು ಅವನನ್ನು ತರಿಸುವ ಬಗೆ ಹೇಗೆ?''

''ನಾವೂ ಕೆಳಗಿನ ಸೋಪಾನಕ್ಕೆ ಹೋಗೋಣ.''

''ಅಲ್ಲಿಗೆ ಹೋಗಲಿಕ್ಕೆ ಇಲ್ಲಿಂದ ಮಾರ್ಗವೆಲ್ಲಿರುವದು?''

''ನದಿಯಲ್ಲಿ.'' ಎಂದು ನುಡಿದವಳೇ ವ್ರಜಬಾಲೆಯು ನೀರಲ್ಲಿ ಬಿದ್ದಳು. ಉಷಾಸುಂದರಿಯಾದರೂ ನಿರ್ವಾಹವಿಲ್ಲದೆ ಅವಳ ಹಿಂದೆಯೆ ಸಾಗಿದಳು. ವ್ರಜಬಾಲೆಯು ಶವದಂತೆ ತೇಲಿ ಹೋಗುವ ಕಲೆಯನ್ನು ಉಷಾಸುಂದರಿಗೆ ತೋರಿಸಿದಳು. ಇಬ್ಬರೂ ವೇಗದಿಂದ ಈಸುತ್ತ ಕಾಠಜುಡಿಯ ಕೆಳಗಿನ ಸೋಪಾನದ ಬಳಿಗೆ ಹೋದರು. ಇಬ್ಬರೂ ಸೋಪಾನಗಳನ್ನೇರಿ ಮುಂದೆ ಸಾಗಿದರು. ಅಲ್ಲಿಯ ರೇವೆಯಲ್ಲಿ ಒಬ್ಬ ಮನುಷ್ಯನ ಹೆಜ್ಜೆಗಳು ಮೂಡಿದ್ದವು. ಅಲ್ಲಲ್ಲಿ ನೀರಿನ ಹನಿಗಳಾದರೂ ಬಿದ್ದಿದ್ದವು ಒಂದು ಕಡೆಯಲ್ಲಿ ಹಗ್ಗವನ್ನಿಟ್ಟಂತೆ ಗುರತು ಇತ್ತು. ವ್ರಜಬಾಲೆಯು ಈ ಎಲ್ಲ ಚಿಹ್ನಗಳನ್ನು ನೋಡಿ, ಉಷಾಸುಂದರಿಯನ್ನು ಕುರಿತು—''ಅವನು ನಿಜವಾಗಿ ಗುಪ್ತಚರನು. ಅವನು ಇದೇ ಮಾರ್ಗದಿಂದ ಹೋಗಿರುವನು. ಕೋಟೆಯನ್ನೇರುವದಕ್ಕಾಗಿ ಅವನು ತನ್ನ ಬಳಿಯಲ್ಲಿ ಹಗ್ಗವನ್ನಾದರೂ ಒಯ್ದಿರುವನು.''

ವ್ರಜಬಾಲೆ ಉಷಾಸುಂದರಿಯರಿಬ್ಬರೂ ತಮ್ಮ ಚಿತ್ರಪ್ರಾಸಾದಕ್ಕೆ ಬಂದರು. ಅನಂತರದಲ್ಲಿ ವ್ರಜಬಾಲೆಯು ಅರಸನನ್ನು ಕರೆತರುವದಕ್ಕಾಗಿ ಸೇವಕನನ್ನು ಕಳುಹಿಸಿದಳು. ಗುಪ್ತಚರನನ್ನು ಹುಡುಕಿಸುವದು ಮುಖ್ಯ ಕರ್ತವ್ಯವಾದ್ದರಿಂದ ಅವಳು ತನ್ನಲ್ಲಿದ್ದ ಸೇವಕರಲ್ಲಿ ಕೆಲವರನ್ನು ಅಲ್ಲಲ್ಲಿ ಕಳುಹಿಸಿದಳು. ತರುವಾಯ ಅವಳು ಗುಪ್ತಚರನ ಶೋಧ ಮಾಡುವದಕ್ಕಾಗಿ ದುರ್ಗಪಾಲನಿಗೆ ನಿರೋಪ ಕಳುಹಿಸಿದಳು. ಅಷ್ಟರಲ್ಲಿ ಒಬ್ಬ ಸೇವಕನು ಅವಳ ಬಳಿಗೆ ಬಂದು, ಮಹಾರಾಜರವರು ಮಂತ್ರಣಾಗಾರದಲ್ಲಿ ನಿಮ್ಮ ಮಾರ್ಗ ಪ್ರತೀಕ್ಷೆ ಮಾಡುತ್ತಿರುವರೆಂದು ತಿಳಿಸಿದನು. ಕೂಡಲೆ ವ್ರಜಬಾಲೆಯು ಅರಸನ ಭೆಟ್ಟಿಗಾಗಿ ತೆರಳಿದಳು.

ವ್ರಜಬಾಲೆಯು ಗಜಗತಿಯಿಂದ ಮಂತ್ರಣಾಗಾರವನ್ನು ಪ್ರವೇಶಿಸಿದ ಕೂಡಲೆ, ಅರಸನು ಆನಂದದಿಂದ ನಸುನಗುತ್ತ—"ಇಂದು ನೀನು ನನ್ನನ್ನು ಭೆಟ್ಟಿಗಾಗಿ ಕರೆಯಿಸಿದ್ದಕ್ಕಾಗಿ ನಾನು ಧನ್ಯನಾದೆನು. ಈ ಪ್ರೇಮವು ಸ್ಥಿರವಾಗಿರಬೇಕೆಂದು ಬೇಡಿಕೊಳ್ಳುವೆನು."

ಪ್ರಣಯಭ್ರಾಂತನಾದ ಅರಸನ ಮಾತಿಗೆ ವ್ರಜಬಾಲೆಯು ಉತ್ತರ ಕೊಡದೆ ಸುಮ್ಮನೆ ಕುಳಿತಳು. ಆಗ ಅರಸನು ಅವಳನ್ನು ಕುರಿತು—"ರಾಣೀ ಸರಕಾರ!"

"ರಾಣಿಯು ಯಾರು? ನಾನು ನಿಮ್ಮ ಏಕನಿಷ್ಠ ಪ್ರಜಾಜನರೊಳಗಿನವಳೊಬ್ಬಳಿರುವೆನು. ಹೀಗಿದ್ದು ನೀವು ನನ್ನನ್ನು ರಾಣಿಯೆಂದು ಸಂಬೋಧಿಸುವದುಚಿತವೆ?"

"ನೀನು ಪ್ರಜಾಜನರೊಳಗಿನವಳಲ್ಲ. ಅರಸಾದ ಅರಸಾದ ನಾನೇ ನಿನ್ನ ದಾಸಾನುದಾಸನಿರುವೆನು. ಈ ಸೇವಕನ ಸೇವೆಯನ್ನು ಕೈಕೊಂಡರೆ ನಾನು ಕೃತಕೃತ್ಯ—"

"ಛೀ! ನೀವು ಹೀಗೆ ಅನುಚಿತ ಭಾಷಣಗಳನ್ನಾಡಬೇಡಿರಿ."

"ವ್ರಜಬಾಲೆ, ನೀನು ನನ್ನನ್ನು ಉಪೇಕ್ಷಿಸಬೇಡ. ನೀನು ನನ್ನ ರಾಣಿಯಾಗಲಿಕ್ಕೆ ಇಷ್ಟೇಕೆ ಅನುಮಾನಿಸುವೆ?"

"ನಿಮಗೆ ಅನಂತ ರಾಣಿಯರಿರುವರಲ್ಲವೆ?"

"ಅದನ್ನು ತೆಗೆದುಕೊಂಡು ನೀನು ಮಾಡುವದೇನು?"

"ಏನೂ ಇಲ್ಲ."

"ನೀನು ನನ್ನವಳಾದೆಯೋ ಇಲ್ಲವೋ? ಪ್ರಿಯ ವ್ರಜ, ನೀನು ನನ್ನನ್ನು ವರಿಸದಿದ್ದರೆ ನಾನು ರಾಜ್ಯತ್ಯಾಗ ಮಾಡುವೆನು."

"ಮಹಾರಾಜರೆ, ನಾನು ನಿಮ್ಮ ಸನ್ನಿಧಿಯಲ್ಲಿ ಬಂದದ್ದು ಒಳಿತಾಗಲಿಲ್ಲವೆಂದಂತಾಯಿತು."

"ಅದೇಕೆ?"

"ಸದ್ಯದ ಭಯಂಕರವಾದ ಗಂಡಾಂತರದ ಪ್ರಸಂಗದಲ್ಲಿ ನೀವು ಕರ್ತವ್ಯವಿಸ್ಮೃತಿಯನ್ನು ಹೊಂದಿ ಪ್ರಣಯಮೂಢರಾದರೆ, ರಾಷ್ಟ್ರಕ್ಕೆ

ಕೇಡಾಗದೆ ಇರುವದೆ? ರಾಜ್ಯಕ್ಕೆ ಏನಾದರೂ ಅನಿಷ್ಟವೊದಗಿದರೆ ಆ ಅಪಯಶವು ನನ್ನ ಮೇಲೆಯೇ ಬರುವದು. ಸಾಧ್ಯವಾದಷ್ಟು ದೇಶ ಕಾರ್ಯವಮಾಡಬೇಕೆಂಬ ಉತ್ಕಟೇಚ್ಛೆಯಿಂದ ನಾನು ಇಲ್ಲಿಗೆ ಬಂದಿರುವೆನು. ನೀವು ನನ್ನನ್ನು ಪ್ರೀತಿಸುತ್ತಿರುವಿರಿ. ಆ ಪ್ರೇಮವನ್ನು ಪರಿಶುದ್ಧಗೊಳಿಸಿರಿ. ಅದಕ್ಕೆ ಯಾವ ಪ್ರಕಾರದ ಕಲಂಕವನ್ನೂ ಹಚ್ಚಬೇಡಿರಿ. ಆಯುಷ್ಯವೂ ವೈಷಯಿಕ ಸೌಖ್ಯವೂ ಕ್ಷಣಭಂಗುರವಾದವುಗಳಿರುವವು. ನೀವು ವಿಕಾರವಶರಾಗಿ ನಡೆಯತೊಡಗಿದರೆ ನಿಜವಾಗಿ ರಾಷ್ಟ್ರದ ಹಾನಿಯಾಗುವದು. ಹೇಗಾದರೂ ಮಾಡಿ ಮನಸ್ಸಿನ ಮೇಲೆ ವಿವೇಕವನ್ನು ಪ್ರಸ್ಥಾಪಿಸಿರಿ. ನಿಮ್ಮ ಮೇಲೆ ಓರಿಸಾದೇಶದ ಸುಖ-ಸ್ವಾತಂತ್ರ್ಯಗಳು ಅವಲಂಬಿಸಿರುವವು. ಶತ್ರುಗಳು ಪ್ರಬಲರಿರುವದರಿಂದಲೂ, ಅಂತರರಾಷ್ಟ್ರದಲ್ಲಿ ಒಡಕು ಹುಟ್ಟಿರುವದರಿಂದಲೂ, ನೀವು ಎಷ್ಟು ಎಚ್ಚರದಿಂದ ನಡೆದರೂ ಕಡಿಮೆಯಿರುವದು. ದೇಶದಲ್ಲಿ ಸಂಗ್ರಾಮದ ಭಯಂಕರವಾದ ಬೇಗೆಯೆದ್ದಿರುವಾಗ, ನೀವು ಥಳಥಳಿಸುವ ಸೌಂದರ್ಯಕ್ಕೆ ಮನಸೋಲುವದು ಹಿತಕರವಲ್ಲ. ನೀವು ಹೀಗೆಯೇ ಪ್ರಣಯಮೂಢರಾಗಿ ಕರ್ತವ್ಯವಿಸ್ಮೃತಿ ಹೊಂದಿದರೆ, ನಾನಂತು ಇಲ್ಲಿ ಅರೆಕ್ಷಣವಾದರೂ ನಿಲ್ಲದೆ ಹೊರಟು ಹೋಗುವೆನು.''

ವ್ರಜಬಾಲೆಯ ಮಾತುಗಳನ್ನು ಕೇಳಿ ಅರಸನ ಆನಂದವು ಮಾಯವಾಯಿತು! ಅವನ ಮುಖವು ಉದ್ವಿಗ್ನತೆಯ ಚಿಹ್ನವನು ಧರಿಸಿತು. ಆಗ ಅವನು ನಿರಾಶೆಯಿಂದ ''ಈ ಜನ್ಮದಲ್ಲಿ ನಿನ್ನ ಲಾಭವಾಗುವದಿಲ್ಲವೆಂದಂತಾಯಿತು.''

ಅರಸನು ದೈನ್ಯದಿಂದ ಹೀಗೆ ನುಡಿದ ಕೂಡಲೆ ವ್ರಜಬಾಲೆಯ ಹೃದಯವು ಕರಗಿತು. ಪ್ರಣಯಭ್ರಾಂತನಾದ ಅರಸನನ್ನು ಈ ರೀತಿಯಾಗಿ ನಿರಾಶೆಗೊಳಿಸುವದಕ್ಕಿಂತಲೂ, ಯುಕ್ತಿಯಿಂದ ಅವನ ಮನಸ್ಸನ್ನು ಸಂತುಷ್ಟಗೊಳಿಸುವದು ಒಳಿತೆಂದು ವ್ರಜಬಾಲೆಯು ತಿಳಿದಳು. ಆಗ ಅವಳು ಹಸನ್ಮುಖಿಯಾಗಿ—''ಮಹಾರಾಜರೆ, ಹೀಗೆ ಉದಾಸೀನತೆ ಹೊಂದಬೇಡಿರಿ. ನಿಮ್ಮ ಸಾದ ಮಹಾರಾಜ್ಞಿಯಾಗುವ ಅಮೃತೋಪಮ

ವಾದ ಸಂಧಿಯು ಪರಮ ಭಾಗ್ಯಶಾಲಿನಿಯಾದ ತರುಣಿಗೆ ದೊರೆಯ ತಕ್ಕಂತಹದಿರುವದು."

"ನೀನು ಅಂತಹ ಭಾಗ್ಯಶಾಲಿನಿಯೇ ಇರುವೆ. ನಿನ್ನಂಥ ಸ್ವರ್ಗೀಯ ಸೌಂದರ್ಯ ಮಂಡಿತಳಿಗೆ ಒಬಿನಾದ ರಾಣಿಯಾಗುವ ಸಂಧಿಯು ದೊರೆ ಯದೆ ಮತ್ತ್ಯಾರಿಗೆ ದೊರೆಯಬೇಕು?"

"ಮಹಾರಾಜರೆ, ಸದ್ಯಕ್ಕೆ ಈ ಮಾತಿನ ಪ್ರಸ್ತಾಪವನ್ನು ತೆಗೆಯ ಬೇಡಿರಿ. ಯುದ್ಧದ ಗೊಂದಲವು ಶಾಂತವಾದ ಮೇಲೆ ಈ ವಿಷಯವಾಗಿ ಮಾತಾಡೋಣ. ನಾನು ಈಗ ವ್ರತಸ್ಥಳಾಗಿರುವೆನು. ಯುದ್ಧದ ಫಲಿ ತಾರ್ಥದ ಮೇಲೆ ನನ್ನ ವ್ರತದ ಉದ್ಯಾಪನೆಯು ಅವಲಂಬಿಸಿರುವದು. ನಾನು ಪುರದಲ್ಲಿಯೂ, ವನದಲ್ಲಿಯೂ, ರಣದಲ್ಲಿಯೂ ನಿಮ್ಮ ಸೇವಕಳ ಲಾಗಿರುವೆನು. ನಿಮ್ಮ ಹಾಗು ನಿಮ್ಮ ರಾಜ್ಯದ ಹಿತಚಿಂತನೆಗಾಗಿ ನಾನು ವ್ಯಾಹತಿಯಿಲ್ಲದೆ ಪ್ರಯತ್ನಿಸುತ್ತಿರುವೆನು. ನಿಮ್ಮ ಆಜ್ಞೆಯಂತೆ ನಡೆಯ ಲಿಕ್ಕೆ ನನ್ನ ಪೂರ್ಣಸಿದ್ಧತೆಯಿರುವದು. ಸದ್ಯದ ಗಂಡಾಂತರದ ಪ್ರಸಂಗ ದಲ್ಲಿ ನಾವು ಕರ್ತವ್ಯವನ್ನು ಮರೆತು ವಿಲಾಸಮಗ್ನರಾಗುವದು ಘಾತುಕ ವಿರುವದರಿಂದ, ದೇಶದಲ್ಲಿ ಸುಖಶಾಂತಿಗಳು ನೆಲೆಗೊಳ್ಳುವವರೆಗೆ ಆತ್ಮ ಸಂಯಮನ ಮಾಡಿಕೊಳ್ಳಬೇಕೆಂದು ಸೆರಗೊಡ್ಡಿ ಬೇಡಿಕೊಳ್ಳುತ್ತೇನೆ."

"ಪ್ರಿಯೆ, ವ್ರಜಬಾಲೆ, ಯುದ್ಧದ ಪರಿಸಮಾಪ್ತಿಯಾದ ಮೇಲಾ ದರೂ ನೀನು ನಿಜವಾಗಿ ನನ್ನವಳಾಗುವೆಯಾ?"

"ಮಹಾರಾಜರೆ, ಈಗಲಾದರೂ ನಾನು ನಿಮಗೆ ಹೊರತಿಲ್ಲ; ನಾನು ನಿಮ್ಮವಳೇ!"

ವ್ರಜಬಾಲೆಯ ಅಮೃತೋಪಮ ವಾಣಿಯಿಂದ ಅರಸನಿಗೆ ಆನಂದ ವಾಯಿತು. ಆಗ ಅವನು ವ್ರಜಬಾಲೆಯನ್ನು ಕುರಿತು: "ನೀನು ನನ್ನನ್ನು ಇಲ್ಲಿಗೆ ಕರೆಸಿದ ಕಾರಣವೇನು?"

"ಓಹೋ! ಮಾತಿನ ಭರದಲ್ಲಿ ಮರೆತೇ ಬಿಟ್ಟಿದ್ದೆನು. ಶತ್ರುಗಳ ಕಡೆಯ ಗುಪ್ತಚರನೊಬ್ಬನು ದುರ್ಗವನ್ನು ಪ್ರವೇಶಿಸುವದಕ್ಕಾಗಿ ಬಂದಿರು ವನು. ಅವನನ್ನು ಹಿಡಿದುತರಲಿಕ್ಕೆ ಸೇವಕರನ್ನು ಕಳುಹಿಸಿರುವೆನು."

"ನಿನಗೆ ಈ ಸಂಗತಿಯು ಹೇಗೆ ಗೊತ್ತಾಯಿತು?"

ವ್ರಜಬಾಲೆಯು ಅರಸನಿಗೆ ಗುಪ್ತಚರನ ವಿಷಯವಾಗಿ ತನಗೆ ಗೊತ್ತಾದ ಸಂಗತಿಗಳನ್ನು ತಿಳಿಸಿದಳು. ವ್ರಜಬಾಲೆಯ ತೀಕ್ಷ್ಣವಾದ ಬುದ್ಧಿ-ಕುಶಲತೆಗಳನ್ನು ನೋಡಿ ಅರಸನಿಗೆ ಆಶ್ಚರ್ಯವಾಯಿತು. ಆಗ ಅವನು ವ್ರಜಬಾಲೆಯನ್ನು ಕುರಿತು:'ಗುಪ್ತಚರನು ಜನಾರ್ದನಮಂತ್ರಿಯ ಕಡೆಯಿಂದ ಬಂದಿರಬಹುದು. ದುರ್ಗದಲ್ಲಿಯೂ ಒಡಕಿನ ಗಾಳಿಯು ಸುಳಿಯಲಾರಂಭಿಸಿರುವದೆಂದಂತಾಯಿತು."

"ಈ ಮಾತಿನಲ್ಲಿ ಸಂಶಯವಿಲ್ಲ."

"ಬಂಡುಗಾರನೂ ದೇಶದ್ರೋಹಿಯೂ ಆದ ಮಂತ್ರಿಯನ್ನು ಹಿಡಿದು ತರುವದಕ್ಕಾಗಿ ನಾನು ಕರೀಮುಶಹನನ್ನು ಕಳುಹಿರುವೆನು."

"ನೀವು ದೊಡ್ಡ ತಪ್ಪು ಮಾಡಿದಂತಾಯಿತು."

"ಅದೇಕೆ?"

"ಹಿಂದುಗಳ ಬಂಡಾಯವು ಮುಸಲ್ಮಾನನಿಂದ ಮುರಿಯಲಾರದು. ನಿಮ್ಮ ಕೃತಿಯಿಂದ ಬಂಡುಗಾರರು ಈರ್ಷೆಗೆ ಬೀಳುವರು."

"ಈಗ ನೀನು ಏನು ಮಾಡಬೇಕೆಂದು ಹೇಳುವೆ?"

"ನೀವೇ ದಂಡೆತ್ತಿ ಹೋದರೆ ಬಂಡಾಯವು ಶಾಂತವಾಗುವದು. ನಿಮ್ಮ ಮೇಲೆ ಶಸ್ತ್ರವೆತ್ತುವದು ಬಂಡುಗಾರರಾದ ಹಿಂದುಗಳ ಕಡೆಯಿಂದಾಗುವದಿಲ್ಲ. ನೀವು ರಾಜಧಾನಿಯ ಹಾಗು ದುರ್ಗದ ಭದ್ರತೆ ಮಾಡಿ ದಂಡೆತ್ತಿ ಹೋಗಿರಿ. ಸಂಗ್ರಾಮದ ಆವೇಶದ ಭರದಲ್ಲಿ ರಾಜಧಾನಿಯಿಂದ ದೂರ ಹೋಗಕೂಡದು; ಶತ್ರುಗಳು ನಿಮ್ಮನ್ನು ಬೇರೆ ಕಡೆಗೆ ಒಯ್ದು, ರಾಜಧಾನಿಯ ಮೇಲೆ ಮುತ್ತಿಗೆ ತರುವ ಸಂಭವವುಂಟು."

"ವ್ರಜಬಾಲೆ, ನೀನು ಕೇವಲ ಸೌಂದರ್ಯದ ನಿಧಿಯೆಂದು ಇಷ್ಟು ದಿನ ನನ್ನ ಭಾವನೆಯಿತ್ತು; ನೀನು ಅತುಲನೀಯವಾದ ರಾಜಕಾರಣ ಧುರಂಧರಳೂ ಆಗಿರುವೆಯೆಂಬದು ಇಂದು ನನ್ನ ಮನವರಿಕೆಯಾಯಿತು. ನಾನು ದಂಡೆತ್ತಿ ಹೋದರೆ ಬಂಡಾಯವು ಶಾಂತವಾಗುವದೆಂಬದರಲ್ಲಿ ಸಂದೇಹವಿಲ್ಲ. ಈಗ ಕಾತಲೂಖಾನನು ಯಜ್ಞಪುರಕ್ಕೆ ಬಂದಿರುವನು

ಕಾಳಾಪಹಾಡನು ಮಯೂರಭಂಜದಲ್ಲಿ ತಳವೂರಿರುವನು. ರಾಜಧಾನಿಯ ಮೇಲೆ ಯಾವ ಹೊತ್ತಿಗೆ ದಾಳಿ ಬರುವದೆಂಬದನ್ನು ಹೇಳಲಿಕ್ಕೆ ಬರುವಂತಿಲ್ಲ. ಇಂತಹ ಸಂಧಿಯಲ್ಲಿ ನಾನು ಇಲ್ಲಿಂದ ಹೇಗೆ ಹೊರಡಲಿ?''

''ರಾಜಧಾನಿಯ ಭಾರವನ್ನು ಎರಡನೆಯವರ ಮೇಲೆ ಹಾಕಿ ಹೋಗುವದು ಸಾಧ್ಯವಿಲ್ಲವೇನು?''

''ದೇಶದ್ರೋಹಿಗಳು ಎಲ್ಲ ಕಡೆಯಲ್ಲಿ ವ್ಯಾಪಿಸಕೊಂಡಿರುವರು. ಹೊಟ್ಟೆಯ ಮಗನನ್ನು ಸಹ ನಂಬುವಂತಿಲ್ಲ. ಇಂತಹ ಸ್ಥಿತಿಯಲ್ಲಿ ಯಾರನ್ನು ರಾಜಧಾನಿಯ ವ್ಯವಸ್ಥೆಗಾಗಿ ನಿಯಮಿಸಬೇಕು?''

''ನೀವು ನನ್ನಲ್ಲಿ ವಿಶ್ವಾಸವುಳ್ಳವರಾಗುವಿರಷ್ಟೆ?''

''ಪ್ರಜಪಾಲ, ನೀನು ಬೇರೆ,-ನಾನು ಬೇರೆ; ಹೀಗೇನಾದರೂ ಇರುವದೇನು? ನಾವು ಎರಡು ದೇಹದವರಾದರೂ ಒಂದೇ ಜೀವದವರಿರುವೆವು.''

''ಹೀಗಿದ್ದರೆ ರಾಜಧಾನಿಯ ರಕ್ಷಣೆಯ ಕಾರ್ಯವನ್ನು ನನ್ನ ಮೇಲೆ ವಹಿಸಿರಿ.''

''ನೀನೊಬ್ಬ ಸಾಮಾನ್ಯ ಸ್ತ್ರೀಯಿರುವೆ. ರಾಜಕಾರಣದಲ್ಲಿ ನಿನಗೆ ಅಷ್ಟೊಂದು ತಿಳುವಳಿಕೆಯಿರಲಾರದು.''

''ನೀವು ನನ್ನನ್ನು ಪರೀಕ್ಷಿಸುವಿರೇನು?''

''ನೀನು ನಿನ್ನ ಶಸ್ತ್ರವಿದ್ಯೆಯನ್ನು ತೋರಿಸುವೆಯಾ?''

''ಶಸ್ತ್ರಕುಶಲತೆಗಿಂತಲೂ ಬುದ್ಧಿಕುಶಲತೆಗೆ ಅಗ್ರಸ್ಥಾನವಿರುವದು. ಖಡ್ಗಧಾರಿಯು ರಾಣಕಾರಣಪಟುವಿರುವನೆಂದು ಹೇಳಲಾಗುವದಿಲ್ಲ. ಧೂರ್ತನಾದ ಮಂತ್ರಿಯ ಬುದ್ಧಿಬಲದಿಂದ ರಾಜ್ಯವು ಸುಯಂತ್ರಿತವಾಗಿ ಸಾಗುತ್ತದೆ. ನೀವು ಬುದ್ಧಿಕುಶಲತೆಯುಳ್ಳವರಾಗಿದ್ದರೆ ಮಂತ್ರಿಯನ್ನು ರಾಜಧಾನಿಯಿಂದ ಕಳಿಸುತ್ತಿದ್ದಿಲ್ಲ; ಹಾಗು ಅವನ ಬಂಡಾಯವನ್ನಡಗಿಸಲಿಕ್ಕೆ ಕರೀಮುಶಹನನ್ನಾದರೂ ಕಳಿಸುತ್ತಿದ್ದಿಲ್ಲ. ಬುದ್ಧಿಬಲದಿಂದ ಆಗುವಂತಹ ಕೆಲಸಗಳು ಶಸ್ತ್ರದಿಂದಾಗುವದಿಲ್ಲ. ಬುದ್ಧಿಬಲದಿಂದ ನೆರ

ವೇರುವ ಕಾರ್ಯಗಳನ್ನು ಖಡ್ಗಬಲದಿಂದ ನೆರವೇರಿಸುವದು ತೀರ ಅನುಚಿತವಿರುವದು. ಶಸ್ತ್ರಬಲವು ಸ್ಥಿರವಾದ ವರ್ಚಸ್ಸನ್ನು ಪ್ರಸ್ಥಾಪಿಸುವಂತಹದಲ್ಲ; ಶಾಂತತೆಯನ್ನು ನೆಲೆಗೊಳಿಸುವದೂ ಅಲ್ಲ. ಪ್ರಜೆಗಳನ್ನು ಪುತ್ರವತ್ಪರಿಪಾಲನೆ ಮಾಡುವ ರಾಜನು ಹಗಲು ಸಹ ನಿಶ್ಚಿಂತೆಯಿಂದ ನಿದ್ರಿಸುವನು. ಶಸ್ತ್ರಬಲದಿಂದ ರಾಜ್ಯವಾಳುವ ರಾಜನಿಗೆ ರಾತ್ರಿಯಲ್ಲಿಯೂ ನಿದ್ದೆ ಬರುತ್ತಿರುವದಿಲ್ಲ. ಮಹಾರಾಜರೆ, ಲೋಕದಲ್ಲಿ ಬುದ್ಧಿಬಲವೇ ಬಲವು.''

'ವ್ರಜಬಾಲೆ, ನೀನು ಮಂತ್ರಿಯಾಗಲಿಕ್ಕೆ ಯೋಗ್ಯಳಿರುವೆ'' ಎಂದು ಅರಸನು ನಗುತ್ತ ನುಡಿದ ಕೂಡಲೆ, ವ್ರಜಬಾಲೆಯು—''ಮಹಾರಾಜರೆ, ವಿನೋದವಾಡಬೇಡಿರಿ. ನೀವೂ ನಿಮ್ಮ ರಾಜಪರಿವಾರವೂ ರಾಜಕಾರಣವನ್ನು ದುರ್ಲಕ್ಷಿಸತೊಡಗಿರುವಿರಿ. ಹಾಗಿಲ್ಲವಿದ್ದರೆ ನಿಮ್ಮಲ್ಲಿ ಬುದ್ಧಿಬಲದ ಜನರು ಇಲ್ಲವೆನ್ನಬೇಕಾಗುವದು. ಗುಪ್ತಚರನು ದುರ್ಗದವರೆಗ ಬಂದರೂ ಅದರ ಸುದ್ದಿಯೇ ರಾಜಪರಿವಾರಕ್ಕಿಲ್ಲವೆಂಬದು ಯಾತರ ದ್ಯೋತಕವು? ನಿಷ್ಣಾತ ಮಂತ್ರಿಯಿದ್ದರೆ ಎಲ್ಲ ಕಡೆಯಲ್ಲಿಯೂ ಗುಪ್ತಚರರ ಜಾಲವನ್ನು ಹರಡಿ, ಇಂತಹ ಘಟನೆಗಳೊದಗದಂತೆ ವ್ಯವಸ್ಥೆ ಮಾಡುತ್ತಿದ್ದನು. ದೊಡ್ಡ ದೊಡ್ಡ ಶೂರರಿಂದ ಆಗದಂತಹ ಕಾರ್ಯವನ್ನು ಒಬ್ಬ ಸಾಮಾನ್ಯ ಸ್ತ್ರೀಯು ನೆರವೇರಿಸಿದಳೋ ಇಲ್ಲವೋ ಹೇಳಿರಿ. ನಾನು ಈಗಲೆ ಆ ಗುಪ್ತಚರನನ್ನು ಶೋಧ ಮಾಡಿಸುವೆನು. ಆಗಲಾದರೂ ಬುದ್ಧಿಬಲವೇ ಬಲವೆಂಬ ನನ್ನ ಮಾತಿನ ಪ್ರತ್ಯಯವಾಗುವದೆ?''

''ಒಳ್ಳೇದು, ಆ ಗುಪ್ತಚರನನ್ನು ಶೋಧಿಸಿ ತರಿಸು.''

''ಈಗಾಗಲೆ ಕೆಲವು ಸೇವಕರನ್ನು ಕಳುಹಿಸಿರುವೆನು. ಇನ್ನೂ ಕೆಲವು ಜನರನ್ನು ಕಳುಹಿಸಿ, ಅವನು ಪಾತಾಳದಲ್ಲಿದ್ದರೂ ಹಿಡಿಸಿ ತರಿಸುವೆನು'' ಎಂದು ವ್ರಜಬಾಲೆಯು ನುಡಿದು, ಮಂತ್ರಣಾಗಾರದಿಂದ ಹೊರಬಿದ್ದಳು.

---

# ಜೀವನವೊಂದು ಪ್ರಯೋಗಶಾಲೆ.

## "ಶಾಂತ!"

ಪ್ರಜಬಾಲೆಯು ಮಂತ್ರಣಾಗಾರದಿಂದ ಹೊರಗೆ ಬಂದು ತನ್ನ ನಂಬಿಗೆಯ ಸೇವಕನಾದ ಶಾಂತನನ್ನು ಕೂಗಿದಳ. ಕೂಡಲೆ ಶಾಂತನು ಅವಳ ಬಳಿಗೆ ಬಂದು ವಿನಯದಿಂದ ನಮಸ್ಕಾರ ಮಾಡಿ "ರಾಣೀಸರ ಕಾರ, ಆಜ್ಞೆಯಾಗಬೇಕು."

'ಶಾಂತ, ನಿನಗೆ ಕುದುರೆಯೇರುವದು ಬರುತ್ತದೇನು?"

"ಬಾರದೇನು ಮಾಡೀತು ರಾಣಿಯವರೆ?"

"ಒಳ್ಳೇದು. ಇಂತಹ ಕತ್ತಲೆಯಲ್ಲಿ ಬೇಕಾದತ್ತ ಹೋಗ ಬಲ್ಲೆಯಾ?"

"ವನ್ಯಜನರಾದ ನಮಗೆ ಕತ್ತಲೇನು-ಬೆಳಕೇನು? ನಮಗೆ ಹಗಲಿ ಗಿಂತ ರಾತ್ರಿಯಲ್ಲಿಯೇ ಚನ್ನಾಗಿ ಕಾಣುತ್ತದೆ.

"ಬಹಳೇ ನೆಟ್ಟಗಾಯಿತು. ನೀನು ಈಸಬಲ್ಲೆಯಾ?"

"ಮೀನಗಳಿಗೆ ಈಸು ಕಲಿಸುವಷ್ಟು ನಾನು ನಿಷ್ಣಾತನಿರುವೆನು."

"ಎಲ್ಲ ರೀತಿಯಿಂದಲೂ ಅನುಕೂಲವಾದಂತಾಯಿತು. ನೀನು ಈಗ ಒಂದು ಕುದುರೆಯನ್ನು ತೆಗೆದುಕೊಂಡು ಬೇಗನೆ ದುರ್ಗಕ್ಕೆ ಹೋಗು. ಅಲ್ಲಿ ಒಬ್ಬ ಮನುಷ್ಯನು ಕೋಟೆಯನ್ನೇರಲಿಕ್ಕೆ ಯತ್ನಿಸು ತ್ತಿರುವನು. ಅವನು ಅಲ್ಲಿರದಿದ್ದರೆ ನದಿಯಲ್ಲಿ ಈಸಿ ಹೋಗಿ, ಆಚೆಯ ದಂಡೆಯಲ್ಲಾದರೂ ಶೋಧಿಸು. ಬಹಳ ಮಾಡಿ ಅವನು ಕೋಟೆಯ ಬಳಿ ಯಲ್ಲಿಯೇ ನಿನಗೆ ದೊರೆಯಬಹುದು. ಅವನು ಬಹಳೇ ತಂತ್ರಗಾರ ನಿರಬಹುದು. ನೀನು ಅವನನ್ನು ಬಿಟ್ಟು ಬರಬೇಡ. ನೆರವಿಗೆ ನಾಲ್ಕಾರು ಜನ ಸೇವಕರನ್ನು ತೆಗೆದುಕೊಂಡು ಹೋದರೂ ಅಡ್ಡಿಯಿಲ್ಲ."

"ಒಬ್ಬನನ್ನು ಹಿಡಿದು ತರಲಿಕ್ಕೆ ಸೇವಕರನ್ನೇಕೆ ಕರೆದೊಯ್ಯ ಬೇಕು? ನಾನೊಬ್ಬನೇ ಅವನನ್ನು ತರುವೆನು" ಎಂದು ಶಾಂತನು ನುಡಿದು, ಅಲ್ಲಿಂದ ಹೊರಟು ಹೋದನು. ಅನಂತರದಲ್ಲಿ ಪ್ರಜಬಾಲೆಯು ಅರ

ಸರ ಬಳಿಗೆ ಬಂದು:—' ಮಹಾರಾಜರೆ, ಗುಪ್ತಚರನನ್ನು ಹಿಡಿದು ತರ ಲಿಕ್ಕೆ ಶಾಂತನನ್ನು ಕಳುಹಿಸಿರುವೆನು. ಕೆಲವು ಗಳಿಗೆಗಳೊಳಗಾಗಿಯೆ ಅವನು ತನ್ನ ಕೆಲಸವನ್ನು ನೆರವೇರಿಸಿಕೊಂಡು ಬರುವನು.''

"ಶಾಂತನೊಬ್ಬನನ್ನೇ ಕಳುಹಿಸಿರುವೆಯಾ?''

"ಅವನ ನೆರವಿಗೆ ನಾಲ್ಕು ಜನ ಗಟ್ಟಿಗರಾದ ಸೇವಕರನ್ನೂ ಗುಪ್ತ ವಾಗಿ ಕಳುಹಿಸಿರುವೆನು. ಗುಪ್ತಚರನು ಶಾಂತನಿಗೆ ಮಣಿಯದೆ ನುಸುಳಿ ಹೋಗುವ ಲಕ್ಷಣವು ಕಂಡರೆ, ಸೇವಕರ ಉಪಯೋಗವಾಗಲೆಂದು ಈ ಬಗೆಯಾಗಿ ವ್ಯವಸ್ಥೆ ಮಾಡಿದೆನು.''

"ವ್ರಜಬಾಲೆ, ಸ್ತ್ರೀಯರೆಂದರೆ ಕೇವಲ ವಿಲಾಸದ ವಸ್ತುಗಳೆಂದು ನಾನು ಭಾವಿಸಿದ್ದೆನು. ವಿಧಾತನು ತನ್ನ ಬುದ್ಧಿ-ಕೌಶಲ್ಯಗಳನ್ನೆಲ್ಲ ವೆಚ್ಚ ಮಾಡಿ ಸೃಷ್ಟಿಸಿದ ನೀನಾದರೂ ಕೇವಲ ವಿಲಾಸದ ಒಡವೆಯಾಗಿರುವೆ ಯೆಂದು ನನ್ನ ತಿಳುವಳಿಕೆಯಿತ್ತು.''

"ಮಹಾರಾಜರೆ ಈ ವ್ರಜಬಾಲೆಯು ಸುವರ್ಣಪಂಜರದೊಳಗಿನ ಶುಕವಲ್ಲ. ಮನೆಯಲ್ಲಿ ಗೋಷೆಯೊಳಗಿದ್ದು ಕಾಲ ಕಳೆಯಬೇಕೆಂದು ವಿಧಾತನು ನನ್ನನ್ನು ಸೃಷ್ಟಿಸಿಲ್ಲ. ಲಾವಣ್ಯವಿದ್ದರೆ ವಿಲಾಸದಲ್ಲಿಯೇ ಕಾಲಕಳೆಯಬೇಕೆಂಬ ಶಾಸ್ತ್ರಾಧಾರವಿರುವದೇನು? '

"ಈ ಅನುಪಮವಾದ ಲಾವಣ್ಯ, ವಿರಿಕೆಯ ತಾರುಣ್ಯ ಮೊದಲಾದ ವುಗಳು ಸಾರ್ಥಕತೆಯನ್ನು ಹೊಂದಬಾರದೇನು?''

"ಲಾವಣ್ಯ-ತಾರುಣ್ಯಗಳಿಗಾಗಿ ಜೀವನವಿರುವದೆ?''

"ಜೀವನವು ಯಾತಕ್ಕಾಗಿ ಇರುವದು?''

"ಮಾನವೀ ಧರ್ಮವನ್ನು ಪಾಲಿಸುವದಕ್ಕಾಗಿ. ಕೇವಲ ವಿಲಾ ಸೋಪಭೋಗವೇ ಮಾನವೀಧರ್ಮವಲ್ಲ.''

"ವ್ರಜಬಾಲೆ!''

"ಮತ್ತೇನು ಮಹಾರಾಜರೆ?''

"ನಿನ್ನ ಈ ಹಾಳು ರಗಳೆಯು ಸಾಕು.''

"ಬಿಟ್ಟೆನು; ಈಗ ಮತ್ತೇನು ಮಾಡಬೇಕೆನ್ನುವಿರಿ?''

"ಈ ಸೌಂದರ್ಯದ ಮೇಲೆ ನನ್ನ ಅಧಿಕಾರವಿಲ್ಲವೆ?"

"ಇಲ್ಲವೇಕೆ? ಪ್ರತಿಯೊಬ್ಬ ಪ್ರಜೆಯ ಮೇಲೆ ರಾಜಾಧಿಕಾರ ವುಂಟು."

"ಆ ಮಾತು ನನಗೆ ಬೇಡ. ನೀನು ನನ್ನವಳಾಗು."

"ನಾನು ರಾಜನಿಷ್ಠಳಿರುವೆನು. ಮಹಾರಾಜರೆ, ನಾನು ನಿಮ್ಮ ಚರಣಕಿಂಕರಳಿರುವೆನೆಂದು ತಿಳಿಯಿರಿ."

"ನಿನಗೆ ಹೃದಯವಿಲ್ಲ. ಸ್ತ್ರೀಯರ ಹೃದಯವು ಕೋಮಲವಿರುತ್ತ ದೆಂದು ನಾನು ಕೇಳಿದ್ದೆನು; ಆದರೆ ನೀನು ಕಲ್ಲಿಗಿಂತಲೂ ಕಲ್ಲಾಗಿರುವೆ. ವ್ರಜಬಾಲೆ, ನೀನು ಹೀಗೆ ಹೊರದಾರಿಯಿಂದ ಮಾತಾಡಬೇಡ. ನೀನು ನನ್ನ ಪಟ್ಟದ ರಾಣಿಯಾಗಲು ಸಮ್ಮತಿಸು. ರಾಜ್ಯಾಧಿಕಾರವನ್ನೂ, ಅತುಲ ವೈಭವವನ್ನೂ ದೊರಕಿಸಿಕೊಳ್ಳುವ ಸಂಧಿಯನ್ನು ಕಳೆದುಕೊಳ್ಳ ಬೇಡ."

"ಮಹಾರಾಜರೆ, ಆರ್ಯಸ್ತ್ರೀಯರು ರಾಜ್ಯಾಧಿಕಾರಕ್ಕಾಗಲಿ, ವೈಭವಕ್ಕಾಗಲಿ ತಮ್ಮ ಪಾತಿವ್ರತ್ಯವನ್ನು ಮಾರಿಕೊಳ್ಳುವದಿಲ್ಲ."

"ವ್ರಜಬಾಲೆ, ನೀನು ನನ್ನ ಹೃದಯದೇವತೆಯು; ಜೀವಿತ ಸರ್ವ ಸ್ವಳು. ನಿನ್ನ ಪ್ರಾಪ್ತಿಯಾಗದಿದ್ದರೆ ನನಗೆ ಈ ರಾಜ್ಯವೂ ವೈಭವೂ ಶೂನ್ಯ ವತ್ತಾಗಿ ಕಾಣುವವು. ನಿನ್ನ ಸಾನ್ನಿಧ್ಯದಲ್ಲಿ ನಾನು ಒಂದು ಗುಡಿಸಲಿ ನಲ್ಲಿ ಸಹ ಸ್ವರ್ಗೀಯ ಸೌಖ್ಯವನ್ನು ಭೋಗಿಸುವೆನು. ಸಂಗ್ರಾಮದ ಪರಿಸಮಾಪ್ತಿಯಾದ ಮೇಲೆ ನೀನು ನನ್ನನ್ನು ವರಿಸುವೆನೆಂದು ವಚನ ಕೊಟ್ಟಿದ್ದೆ; ಈಗಾಗಲೆ ಪಾತಿವ್ರತ್ಯದ ಆಡಂಬರವನ್ನಿಳಿಸಿದೆ. ಇದು ನಿನ್ನ ಶೀಲಕ್ಕುಚಿತವೆ?"

"ಮಹಾರಾಜರೆ, ರಣಯಜ್ಞವು ಪೂರ್ತಿಯಾದ ಮೇಲೆ ವಿವಾಹದ ವಿಷಯವಾಗಿ ಮಾತಾಡೋಣ."

"ನೀನು ನನ್ನನ್ನು ಮೃಗಜಲದ ಬೆನ್ನು ಹತ್ತುವಂತೆ ಮಾಡುವೆ ಯಾಗಿ ತೋರುತ್ತದೆ."

"ಛೇ! ಹಾಗೆ ಭಾವಿಸಬೇಡಿರಿ. ಈಗಿನ ಪ್ರಸಂಗವು ಮಹತ್ವದ್ದಿರು

ವದರಿಂದ ವಿವಾಹದಂತಹ ಕಾರ್ಯಗಳನ್ನು ನೆರವೇರಿಸುವದು ಅನುಚಿತವು. ನಾನು ನಿಮ್ಮವಳೇ ಇರುವೆನು. ಈ ವಿಷಯದಲ್ಲಿ ಅನುಮಾನಿಸಬೇಡಿರಿ.''

ವ್ರಜಬಾಲೆಯು ಹೀಗೆ ನುಡಿಯುವಷ್ಟರಲ್ಲಿ ಉಷಾಸುಂದರಿಯು ಅಲ್ಲಿಗೆ ಬಂದು, ಗುಪ್ತಚರನು ದೊರೆತನೆಂದು ಹೇಳಿದಳು. ಅಷ್ಟರಲ್ಲಿ ಶಾಂತನೂ ಕೆಲವು ಅನುಚರರೂ ಗುಪ್ತಚರನನ್ನು ಹಿಡಿದುಕೊಂಡು ಬಂದರು. ಆಗ ವ್ರಜಬಾಲೆಯು ಆ ಚರನನ್ನು ಕುರಿತು ''ನೀನು ಯಾರು?''

ಗುಪ್ತಚರನು ವ್ರಜಬಾಲೆಯ ಮಾತಿಗೆ ಉತ್ತರವೀಯದೆ ವಿಕಟ ಹಾಸ್ಯ ಮಾಡಲಾರಂಭಿಸಿದನು. ಹುಚ್ಚನಂತೆ ಅವನು ಕಕ್ಕಾವಿಕ್ಕಿಯಾಗಿ ಅಲ್ಲಿಯ ಜನರನ್ನು ನೋಡತೊಡಗಿದ್ದನು. ಯಾವನೋ ಒಬ್ಬ ಹುಚ್ಚನನ್ನು ಹಿಡಿದುಕೊಂಡು ಬಂದಿರುವರೆಂದು ಅರಸನು ತಿಳಿದನು. ವ್ರಜಬಾಲೆಯು ಅವನನ್ನು ಸೂಕ್ಷ್ಮದೃಷ್ಟಿಯಿಂದ ನೋಡುತ್ತ ಕುಳಿತಿದ್ದಳು. ಆಗ ಉಷಾಸುಂದರಿಯು—''ಹೊಳೆಯಲ್ಲಿ ಪ್ರೇತದಂತೆ ತೇಲುತ್ತ ಹೊರಟವನು ನೀನೇ ಏನು?''

ಆ ಮನುಷ್ಯನು ಈ ಮಾತಿನ ಕಡೆಗೆ ಲಕ್ಷ್ಯಗೊಡದೆ, ದೊಡ್ಡ ಧ್ವನಿಯಿಂದ ಅಳಲಾರಂಭಿಸಿದನು. ಸ್ವಲ್ಪ ಹೊತ್ತಿನ ಮೇಲೆ ಅವನು— ''ನನಗೆ ಹಸಿವೆಯಾಗಿರುವದು.''

ವ್ರಜಬಾಲೆಯು ಆ ಮನುಷ್ಯನ ರಹಸ್ಯವನ್ನು ಚನ್ನಾಗಿ ತಿಳಿದು, ಶಾಂತನನ್ನು ಕುರಿತು—''ಶಾಂತ, ಈ ಮನುಷ್ಯನು ಎಲ್ಲಿದ್ದನು?''

''ರಾಣೀಸರಕಾರ, ಇವನು ಕೋಟೆಯ ಗೋಡೆಯನ್ನು ಏರುವ ಸಾಹಸದಲ್ಲಿದ್ದನು. ನಾನು ಗಟ್ಟಿಗನಾದ್ದರಿಂದ ಇವನನ್ನು ತಂದೆನು; ಮತ್ತೊಬ್ಬನಾಗಿದ್ದರೆ ಮಂಕುಬೂದಿ ಹಚ್ಚಿ ಓಡಿ ಹೋಗುತ್ತಿದ್ದನು. ಇವನು ನನ್ನನ್ನು ನೋಡಿದೊಡನೆಯೆ ನದಿಯಲ್ಲಿ ಬಿದ್ದು. ಈಸಿ ಹೋಗಲಾರಂಭಿಸಿದನು; ಕೂಡಲೆ ನಾನೂ ಇವನ ಹಿಂದೆಯೆ ಈಸಬಿದ್ದು ಇವನನ್ನು ಹಿಡಿದು ದಂಡೆಗೆ ತಂದೆನು. ತಾವು ಕಳುಹಿಸಿದ ಸೇವಕರು ಬಂದ

ದ್ದರಿಂದ ಇವನು ನಿರುಪಾಯನಾಗಿ ನನ್ನ ಸ್ವಾಧೀನಕ್ಕೆ ಬಂದನು. ಇವನು ಹುಚ್ಚನಲ್ಲ; ಹುಚ್ಚುತನದ ವೇಷವನ್ನು ತಾಳಿರುವನು.''

ಶಾಂತನು ಹೀಗೆ ನುಡಿದ ಕೂಡಲೆ ಆ ಮನುಷ್ಯನು ಹುಚ್ಚನಂತೆ ಕುಣಿಯುತ್ತ: 'ಹಸಿವೆ-ಹಸಿವೆ' ಎಂದು ಕೂಗಲಾರಂಭಿಸಿದನು. ಆಗ ವ್ರಜಬಾಲೆಯು ಶಾಂತನನ್ನು ಕುರಿತು "ಇವನನ್ನು ಹೊರಗೆ ತೆಗೆದು ಕೊಂಡು ಹೋಗಿ ಒಳಿತಾಗಿ ತಿನಿಸುಕೊಡು. ಯೋಗ್ಯವಾದ ಖಾದ್ಯ ಗಳಿಂದ ಇವನ ಹುಚ್ಚು ತಾನಾಗಿ ಇಳಿಯುವದು.''

ಅರಸನು ಇಷ್ಟು ವೇಳೆಯವರೆಗೆ ಎಲ್ಲವನ್ನೂ ನೋಡುತ್ತ ಸುಮ್ಮನೆ ಕುಳಿತಿದ್ದನು. ವ್ರಜಬಾಲೆಯಿಂದ ಅನ್ಯಾಯವಾಗುವದೆಂದು ಅವನ ಮನಸ್ಸಿಗೆ ಹೊಳೆದದ್ದರಿಂದ "ವ್ರಜಬಾಲೆ, ಈ ಹುಚ್ಚನನ್ನು ವೃಥಾ ಪೀಡಿಸಬೇಡ; ಇವನನ್ನು ಬಿಟ್ಟು ಬಿಡು.'

"ಮಹಾರಾಜರೆ, ಇವನು ಹುಚ್ಚನೆಂದು ತಿಳಿದಿರುವಿರೇನು? ಇವನು ಬಹಳ ದೂರ್ತನಿರುವನು. ಇವನ ಹುಚ್ಚು ಈಗಲೆ ಇಳಿಯು ವದು; ಸ್ವಲ್ಪ ತಾಳಿರಿ'' ಎಂದು ವ್ರಜಬಾಲೆಯು ಅರಸನಿಗೆ ಹೇಳಿ, ಶಾಂತನನ್ನು ಕುರಿತು "ಏನು ನೋಡುತ್ತೀ? ಇವನ ಚರ್ಮವು ಸುಲಿ ಯುವ ವರೆಗೆ ಚನ್ನಾಗಿ ತಳಿಸಿ ತೆಗೆದುಕೊಂಡು ಬಾ.''

ವ್ರಜಬಾಲೆಯು ಮಾತುಗಳನ್ನು ಕೇಳಿದ ಕೂಡಲೆ ಆ ಹುಚ್ಚು ವೇಷ ಧಾರಿಯು ತನ್ನ ನರ್ತನವನ್ನು ನಿಲ್ಲಿಸಿದನು. ತರುವಾಯ ಅವನು ರಾಣಿಗೆ ಸಾಷ್ಟಾಂಗ ನಮಸ್ಕಾರ ಮಾಡಿ--"ರಾಣೀಸರಕಾರ, ನೀವು ನನ್ನ ಅಪ ರಾಧವನ್ನು ಕ್ಷಮಿಸಿರಿ. ನಾನು ಸರಳತನದಿಂದ ಎಲ್ಲ ಸಂಗತಿಯನ್ನು ಹೇಳಲಿಕ್ಕೆ ಸಿದ್ಧನಿರುವೆನು. ನಾನು ಗುಪ್ತಚರನ ಕೆಲಸ ಮಾಡತೊಡಗಿ ಬಹಳ ದಿನಗಳಾದವು. ಇಷ್ಟು ದಿನಗಳಲ್ಲಿ ನಿಮ್ಮಂತಹ ತೀಕ್ಷ್ಣ ಬುದ್ಧಿ ಯುವರನ್ನು ನಾನು ಕಾಣಲಿಲ್ಲ. ನಾನು ಎಲ್ಲ ಸಂಗತಿಯನ್ನು ನಿಮಗೆ ತಿಳಿಸುವೆನು. ಈ ಸೇವಕರನ್ನು ಹೊರಗೆ ಕಳುಹಿಸಿರಿ. ರಾಜಕೀಯ ಗೌಪ್ಯವು ಸಾಮಾನ್ಯ ಸೇವಕ ವರ್ಗಕ್ಕೆ ತಿಳಿಯುವದು ಒಳಿತಲ್ಲ.''

ಹುಚ್ಚನಂತೆ ಅಭಿನಯಿಸುತ್ತಿದ್ದ ಮನುಷ್ಯನ ಈ ಮಾತುಗಳನ್ನು

ಕೇಳಿ ಅರಸನು ವಿಸ್ಮಿತನಾದನು. ಪ್ರಜಬಾಲೆಯು ತನ್ನ ಸೇವಕರನ್ನು ಹೊರಗೆ ಕಳುಹಿಸಿ—"ನೀನು ಎಲ್ಲ ಸಂಗತಿಯನ್ನು ತಿಳಿಸಿದರೆ ಜೀವ ದಿಂದುಳಿಯುವಿ."

"ರಾಜ್ಞಿಯವರೆ, ನನಗೆ ಜೀವದ ಪರಿವೆಯಿಲ್ಲ. ನಾನು ಮರಣದ ಭಯದಿಂದ ನಿಮಗೆ ವಸ್ತುಸ್ಥಿತಿಯನ್ನು ನಿವೇದಿಸಲಿಕ್ಕೆ ಸಿದ್ಧನಾಗಿರುವೆ ನೆಂದು ತಿಳಿಯಬೇಡಿರಿ. ಮಹಾರಾಜರನ್ನೂ ನಿಮ್ಮನ್ನೂ ನೋಡಿದೊಡ ನೆಯೆ ನಾನು ಮಾಡುತ್ತಿರುವ ಕೃತಿಯು ಭಯಂಕರ ಪಾಪಕರವೆಂದು ತೋರಿದ್ದರಿಂದ ಎಲ್ಲ ಸಂಗತಿಯನ್ನು ತಿಳಿಸಲಿಕ್ಕೆ ಸಿದ್ಧನಾದೆನು. ನಾನು ಜನಾರ್ದನ ಮಂತ್ರಿಗಳ ಸೇವಕನು. ನನ್ನ ಹೆಸರು ನಟವರನೆಂದಿರುವದು."

"ನೀನು ಇಲ್ಲಿಗೇಕೆ ಬಂದೆ?'''

"ಮಂತ್ರಿಯು ನನ್ನನ್ನು ಕಳಿಸಿದ್ದರಿಂದ ಬಂದೆನು."

"ನೀನು ಮಂತ್ರಿಯ ತಂತ್ರದೊಳಗಿನವನೇನು? ಎಲೋ, ಯಾರಿರು ವಿರಿ? ಇವನನ್ನು ಶೂಲಕ್ಕೆ ಹಾಕಿರಿ!" ಎಂದು ಅರಸನು ಗರ್ಜಿಸಿದನು. ಆಗ ಪ್ರಜಬಾಲೆಯು ಅರಸನನ್ನು ಕುರಿತು—"ಸ್ವಲ್ಪ ಶಾಂತರಾಗಿರಿ" ಎಂದು ಹೇಳಿ, ನಟವರನಿಗೆ—"ನೀನು ಯಾರ ಪ್ರಜಾಜನರೊಳಗಿನವ ನೆಂಬದು ಗೊತ್ತಿರುವದೇನು?"

"ನಾನು ಮಹಾರಾಜರ ಪ್ರಜೆಯಿರುವೆನು."

"ನೀನು ಯಾವ ದೇಶದಲ್ಲಿ ಜನ್ಮ ತಾಳಿರುವೆಯೋ ಆ ದೇಶದ ವಿಷ ಯಕ್ಕೆ ನಿನ್ನ ಪ್ರೇಮವಿಲ್ಲವೇನು?"

"ರಾಣೀಸರಕಾರ, ನನಗೆ ನನ್ನ ಜನ್ಮಭೂಮಿಯು ಪ್ರಾಣಕ್ಕಿಂತ ಲೂ ಪ್ರಿಯವಿರುವದು."

"ನಿನ್ನ ಜನ್ಮಭೂಮಿಯ ಸ್ವಾತಂತ್ರ್ಯವನ್ನೂ ಧರ್ಮವನ್ನೂ ದೇವ ಮೂರ್ತಿಗಳನ್ನೂ ನಾಶಮಾಡಲಿಕ್ಕೆ ಬಂದಿರುವ ಯವನರನ್ನು ನೀನು ಪ್ರೀತಿಸುವೆಯಾ?"

"ಛೇ! ಅವರನ್ನು ಕಂಡರೆ ನನ್ನ ಮೈಯೆಲ್ಲ ಉರಿಯುತ್ತದೆ."

"ನಿನ್ನ ಒಡೆಯನು ಈ ದೇಶವನ್ನು ಯವನರ ಕೈಯಲ್ಲಿ ಕೊಡ

ಬೇಕೆಂದಿರುವನು. ಅವನ ಈ ಕೃತಿಯು ನಿನ್ನ ಮನಸ್ಸಿಗೆ ಬಂದಿರುವದೇನು?''

''ರಾಣಿಯವರೆ, ಈ ಸಂಗತಿಗಳೆಲ್ಲವು ನನಗೆ ತಿಳಿದಿಲ್ಲ. ದುರ್ಗಾಧಿಪತಿಯೂ ಬಂಗಾಲೀಸೇನಾಪತಿಯೂ ಮಹಾರಾಜರನ್ನು ನಾಶಗೊಳಿಸುವ ಸಾಹಸದಲ್ಲಿರುವರಾದ್ದರಿಂದ ಅವರ ಪಾರಿಪತ್ಯಗೊಳಿಸಲಿಕ್ಕೆ ಸೈನ್ಯವನ್ನು ಕೂಡಿಸುತ್ತಿರುವೆನೆಂದು ಮಂತ್ರಿಯು ಹೇಳುತ್ತಿರುವನು. ಅವನು ಮುಸಲ್ಮಾನರನ್ನು ಕೂಡಿರುವನೆಂಬದು ನನಗೆ ತಿಲಾಂಶವಾದರೂ ಗೊತ್ತಿಲ್ಲ. ಹಾಗಿದ್ದರೆ ನಾನು ಅರೆಗಳಿಗೆಯಾದರೂ ಅವನಲ್ಲಿರುತ್ತಿದ್ದಿಲ್ಲ. ದೇಶದ್ರೋಹಿಯು ಚಾಂಡಾಲನಿಗಿಂತಲೂ ಕೀಳನು. ಅವನ ದರ್ಶನವಾದರೆ ಸಚೈಲ ಸ್ನಾನಮಾಡಬೇಕು! ರಾಣೀಸರಕಾರ, ನಾನು ಅರಿಯದೆ ಅಪರಾಧವನ್ನು ಮಾಡಿರುವೆನು. ದಯಮಾಡಿ ಕ್ಷಮಿಸಿರಿ. ಮಹಾರಾಜರೆ, ಈ ನಿಮ್ಮ ಚರಣಕಿಂಕರನ ಅಪರಾಧವನ್ನು ಹೊಟ್ಟೆಯಲ್ಲಿ ಹಾಕಿಕೊಳ್ಳಿರಿ.''

''ಒಳ್ಳೇದು; ನೀನು ಯಾವ ಉದ್ದೇಶದಿಂದ ಇಲ್ಲಿಗೆ ಬಂದಿದ್ದೆ?' ಎಂದು ಪ್ರಜಾಲೆಯು ನಟವರನನ್ನು ಕೇಳಿದಳು. ಆಗ ನಟವರನು ನಿಜವಾದ ಸಂಗತಿಗಳನ್ನು ಹೇಳತೊಡಗಿದನು.

''ಮಹಾರಾಣಿಯವರೇ, ದುರ್ಗದಲ್ಲಿಯೂ ರಾಜಧಾನಿಯಲ್ಲಿಯೂ ಮಂತ್ರಿಯ ಪಕ್ಷದ ಕಾರಸ್ಥಾನಿಗಳಾದ ಜನರಿರುವರು. ಅವರವರಲ್ಲಿ ಯಾವಾಗಲೂ ಗುಪ್ತಪತ್ರವ್ಯವಹಾರವು ನಡೆದಿರುತ್ತದೆ. ದುರ್ಗವನ್ನು ವಶಪಡಿಸಿಕೊಳ್ಳಬೇಕೆಂದು ಮಂತ್ರಿಯು ನಿಶ್ಚಯಿಸಿರುವನು. ಈ ಕಾರ್ಯದಲ್ಲಿ ಅವನಿಗೆ ಇಲ್ಲಿಯ ಕೆಲವು ಜನರು ಸಹಾಯಮಾಡುವರೆಂಬಂತೆ ತೋರುತ್ತದೆ. ನಾಡದಿನ ರಾತ್ರಿಯಲ್ಲಿ ದುರ್ಗದ್ವಾರವನ್ನು ತೆಗೆಯಬೇಕೆಂದು ನನಗೆ ಆಜ್ಞಾಮಾಡಿ ಕಳುಹಿಸಿರುವನು. ಇಲ್ಲಿ ಹಗಲು ಪ್ರವೇಶ ಮಾಡುವದು ಅಸಾಧ್ಯವಿದ್ದದರಿಂದ ರಾತ್ರಿಯಲ್ಲಿ ಕೋಟೆಯಲ್ಲಿ ಪ್ರವೇಶಮಾಡಬೇಕೆಂದು ಹವಣಿಸಿದ್ದೆನು. ಮುಂದಿನ ಎಲ್ಲ ಸಂಗತಿಗಳು ನಿಮಗೆ ಗೊತ್ತಿರುವವು.''

ಈ ಗುಪ್ತ ಕಾರಸ್ಥಾನದ ಸಂಗತಿಗಳನ್ನು ಕೇಳಿ ರಾಣಿಯ ಮೈ ಮೇಲೆ ರೋಮಾಂಚಗಳೆದ್ದವು. ಅವಳು ವಿಸ್ಮಯದಿಂದ ನಟವರನ ಮುಖ ವನ್ನು ನೋಡುತ್ತ ಕುಳಿತಳು. ಆಗ ಅರಸನು ಅವನನ್ನು ಕುರಿತು:—

"ನಟವರ, ನೀನು ಹೇಳಿದ ಸಂಗತಿಗಳು ನಿಜವಾದವುಗಳೆ?"

"ಮಹಾರಾಜರೆ, ನಿಮ್ಮ ಚರಣಸಾಕ್ಷಿಯಾಗಿ ನಾನು ಸತ್ಯವನ್ನೇ ಹೇಳಿದೆನು. ನಾನು ಭಯಂಕರವಾದ ಪಾತಕ ಮಾಡಲುದ್ಯುಕ್ತನಾಗಿ ರುವೆನೆಂಬದು ಇಲ್ಲಿಗೆ ಬಂದ ಕೂಡಲೆ ನನಗೆ ತಿಳಿಯಿತು. ಮಾಡಿದ ಪಾಪವನ್ನು ಆಡಿ ಕಳೆಯಬೇಕೆಂದು ಎಲ್ಲ ಸಂಗತಿಗಳನ್ನು ಹೇಳಿರುವೆನು. ಹಾಗಿಲ್ಲದಿದ್ದರೆ ನನ್ನನ್ನು ಕಡಿದರೂ ಒಂದು ಅಕ್ಷರವನ್ನಾದರೂ ಒಡೆಯು ತ್ತಿದ್ದಿಲ್ಲ."

" ಈಗ ಮಂತ್ರಿಯು ಎಲ್ಲಿರುವನು?" ಎಂದು ಅರಸನು ನಟವರ ನನ್ನು ಕೇಳಿದನು.

"ಎರಡು ದಿನಗಳ ಹಿಂದೆ ಅವನು ಕರೀಮಶಹನ ಸೈನ್ಯವನ್ನು ಮುತ್ತುವ ಸಿದ್ಧತೆಯಲ್ಲಿದ್ದನು. ಈಗ ಎಲ್ಲಿರುವನೆಂಬದು ನನಗೆ ತಿಳಿದಿಲ್ಲ."

"ಅವನ ಸೈನ್ಯವು ಎಷ್ಟಿರುವದು?"

"ಅವನ ಬಳಿಯಲ್ಲಿ ಅಪಾರವಾದ ಸೇನಾಸಂಗ್ರಹವಾಗಿದೆ. ಅವನು ಎಲ್ಲ ಸೈನ್ಯವನ್ನು ಇಲ್ಲಿಗೆ ತರುವದಿಲ್ಲ. ಹೆಚ್ಚು ಸೈನ್ಯವನ್ನು ತಂದರೆ ಗೊಂದಲವೇಳುವದೆಂದು ತಿಳಿದು, ಅವನು ಎರಡು ಸಾವಿರ ಸೈನ್ಯವನ್ನು ಮಾತ್ರ ಇಲ್ಲಿಗೆ ತರತಕ್ಕವನಿರುವನು."

"ದುರ್ಗದ್ವಾರವನ್ನು ತೆರವಿಡುವದು ಸಾಧ್ಯವಾಗುವದೋ, ಇಲ್ಲ ವೋ ಎಂಬದನ್ನು ತಿಳಿದುಕೊಳ್ಳದೆ ಅವನು ಇಲ್ಲಿಗೆ ದಂಡೆತ್ತಿ ಬರುವ ನೇನು?" ಎಂದು ರಾಣಿಯು ಕೇಳಲು,

"ಸಾಧ್ಯಾಸಾಧ್ಯಗಳನ್ನು ತಿಳಿದುಕೊಂಡು ನಾಳೆಗೆ ಒಬ್ಬ ಗುಪ್ತ ಚರನಿಂದ ಸುದ್ದಿಯನ್ನು ಹಚ್ಚಬೇಕೆಂದು ಮಂತ್ರಿಯು ನನಗೆ ಆಜ್ಞಾ ಮಾಡಿದ್ದನು."

"ನಿಮ್ಮ ಮಂತ್ರಿಯ ಸಾಂಕೇತಿಕ ಶಬ್ದವೇನಿರುವದು?"

"ಮಹಾಪ್ರಭು" ಎಂಬಿರುವದು. ಈ ಹೆಸರು ಹೇಳಿದರೆ ಅವನು ತನ್ನ ಕಾರಸ್ಥಾನದೊಳಗಿನವನೆಂದು ಮಂತ್ರಿಯು ತಿಳಿಯುತ್ತಾನೆ.

"ನಟವರಾ, ನೀನು ನಿನ್ನ ಮನಬಂದತ್ತ ಹೊರಟು ಹೋಗು. ನಾನು ನಿನ್ನ ಅಪರಾಧವನ್ನು ಕ್ಷಮಿಸಿರುವೆನು. ಸ್ವಜನ, ಸ್ವದೇಶ, ಸ್ವಧರ್ಮ ಇವುಗಳ ವಿರುದ್ಧವಾಗಿ ನೀನು ಎಂದೂ ನಡೆಯಬೇಡ."

ವ್ರಜಬಾಲೆಯ ಮಾತುಗಳನ್ನು ಕೇಳಿ, ನಟವರನು ಕೈಜೋಡಿಸಿ ವಿನಯದಿಂದಲೂ ದೈನ್ಯದಿಂದಲೂ—"ರಾಜ್ಞಿಯವರೇ, ನನ್ನನ್ನು ದಂಡಿಸಿರಿ. ನಾನು ಪರಮ ಪಾಪಿಯಿರುವೆನು. ನಿಮ್ಮನ್ನು ಅಪಹರಿಸಿಕೊಂಡು ಹೋಗುವ ಕಾರಸ್ಥಾನವಾದರೂ ನಡೆದಿರುವದು. ಆದರಲ್ಲಿ ನನ್ನ ಮೇಲೆ ಎಷ್ಟೋ ಕಾರ್ಯಗಳು ಇದ್ದವು.'

"ಏನೇ ಇರಲಿ, ನಾನು ನಿನ್ನನ್ನು ಕ್ಷಮಿಸಿರುವೆನು. ನಿನ್ನ ಮನಬಂದತ್ತ ಹೊರಟು ಹೋಗು."

"ಅಹಹಾ! ಇದು ಎಂತಹ ಶಾಂತಿಯು! ರಾಣಿಯವರೆ, ನೀವು ಮನುಷ್ಯರೋ, ಸ್ವರ್ಗೀಯ ದೇವತೆಗಳೋ? ನಿಮ್ಮಂತಹ ದಯಾಸಂಪನ್ನರನ್ನು ನಾನು ಎಲ್ಲಿಯೂ ಕಾಣಲಿಲ್ಲ. ಅಮ್ಮಾ, ನಾನು ಎಲ್ಲಿಗೂ ಹೋಗಲಿಚ್ಛಿಸುವದಿಲ್ಲ. ದಯಮಾಡಿ ನಿಮ್ಮ ಸನ್ನಿಧಿಯಲ್ಲಿ ಆಶ್ರಯವನ್ನು ಕೊಡಿರಿ. ಆಜನ್ಮವಾಗಿ ನಿಮ್ಮ ಚರಣಸೇವೆಯಲ್ಲಿ ತೊಡಗಿ, ದೇಹದ ಸಾರ್ಥಕತೆ ಮಾಡಿಕೊಳ್ಳುವೆನು."

ನಟವರನು ಹೀಗೆ ನುಡಿದ ಕೂಡಲೆ ರಾಣಿಯು ಅವನನ್ನು ತನ್ನ ಆಶ್ರಯದಲ್ಲಿರಿಸಿಕೊಳ್ಳಲೊಪ್ಪಿದಳು. ಅನಂತರವಲ್ಲಿ ಅವಳು ಎಲ್ಲ ಜನರಿಗೆ ನಿರೋಪ ಕೊಟ್ಟು ಅರಸನನ್ನು ಕುರಿತು —"ಮಹಾರಾಜರೆ, 'ಶಠಂ ಪ್ರತಿ ಶಾಠ್ಯಂ' ಎಂಬ ನ್ಯಾಯದಂತೆ ನಾವು ನಡೆಯಲಿಕ್ಕೆ ಬೇಕು. ಕಾರಸ್ಥಾನಿಯೂ ಪಾತಾಳಯಂತ್ರಿಯೂ ಆದ ಮನುಷ್ಯನೊಡನೆ ಧರ್ಮನೀತಿಯಿಂದ ನಡೆದರೆ ಅನಿಷ್ಟವೊದಗುವದು. ದುರ್ಗದ್ವಾರವನ್ನು ತೆರೆದಿಡುವ

ವ್ಯವಸ್ಥೆ ಮಾಡುವೆನೆಂದು ಸಟವರನು ಸಿರೋಪ ಕಳುಹಿಸಿದಂತೆ ಒಬ್ಬ ಗುಪ್ತಚರನ ಮುಖಾಂತರವಾಗಿ ಮಂತ್ರಿಗೆ ತಿಳಿಸಬೇಕು. ಅದರಂತೆ ಕೋಟೆಯ ಬಾಗಿಲವನ್ನು ತೆರೆದಿಡಬೇಕು. ಮಂತ್ರಿಯು ಸೈನ್ಯಸಹಿತ ವಾಗಿ ದುರ್ಗವನ್ನು ಪ್ರವೇಶಿಸಿದೊಡನೆಯೇ, ದ್ವಾರವನ್ನು ಮುಚ್ಚಿಸಿ ಅವನನ್ನು ಹಣ್ಣು ಮಾಡಬೇಕು. ಮಂತ್ರಿಯು ಕೈಸೆರೆ ಸಿಕ್ಕನೆಂದರೆ ಬಂಡಾಯವು ಶಾಂತವಾಗಿ ಶತ್ರುಗಳೊಡನೆ ಕಾದಲಿಕ್ಕೆ ಬಹಳೇ ಅನು ಕೂಲವಾಗುವದು.''

''ವ್ರಜಬಾಲೆ, ನಾನು ನಿನ್ನ ಆಲೋಚನೆಯಂತೆ ಎಲ್ಲ ವ್ಯವಸ್ಥೆ ಮಾಡುವೆನು. ಖಡ್ಗವನ್ನು ಹಿಡಿಯಲಿಕ್ಕೆ ಕಲಿತರೆ ಅವನು ದೊಡ್ಡ ರಾಜ ಕಾರಣಿಯಾಗುವದಿಲ್ಲವೆಂದೂ ಜಗತ್ತಿನಲ್ಲಿ ಬುದ್ಧಿಬಲವೇ ಬಲವೆಂದೂ ಹೇಳಿದ ನಿನ್ನ ಮಾತುಗಳು ಅಕ್ಷರಶಃ ನಿಜವಾಗಿರುವವು. ನಾನು ಸಂಗ್ರಾ ಮಕ್ಕೆ ತೆರಳಿದರೆ ನಿನ್ನ ಕೈಯಲ್ಲಿಯೇ ರಾಜ್ಯಸೂತ್ರಗಳನ್ನು ಕೊಡುವೆನು. ಇಂದಿನಿಂದ ನಿನಗೆ 'ರಾಣೀ ವ್ರಜಸುಂದರಿ' ಎಂಬ ನಾಮಾಭಿದಾನ ಕೊಟ್ಟಿ ರುವೆನು. ರಾಣೀ ವ್ರಜಸುಂದರಿ, ದೇಶದಲ್ಲಿ ವಿಶ್ವಾಸವು ಉಳಿಯಲಿಲ್ಲ. ಸಿಂಹಾಸನದ ಲೋಭವು ಬಹಳೇ ಕೆಟ್ಟದಾಗಿರುವದು. ರಾಜ್ಯಪ್ರಾಪ್ತಿ ಗಾಗಿ ಮಗನು ತಂದೆಯನ್ನೂ, ಸೇವಕನು ಒಡೆಯನನ್ನೂ ಕೊಲ್ಲಲಿಕ್ಕೆ ಹಿಂಜರಿಯುವದಿಲ್ಲ. ಯಾವನೊಬ್ಬ ಸೇವಕನು ನನ್ನ ರಾಣಿಯರಲ್ಲೊಬ್ಬ ಳನ್ನು ತನ್ನ ಕಡೆಗೆ ಒಡೆದುಕೊಂಡು, ನನಗೆ ವಿಷಹಾಕಲಿಕ್ಕಿಲ್ಲವೆಂದು ಅದಾರು ಹೇಳಬೇಕು? ನನ್ನ ಪುತ್ರನಾದ ಯುವರಾಜ ರಾಮಚಂದ್ರ ದೇವನು ಕಾಳಾಪಹಾಡನನ್ನು ಕೂಡಿ ನನ್ನ ನಾಶಗೊಳಿಸಲಿಕ್ಕಿಲ್ಲವೆಂಬದಕ್ಕೆ ಪ್ರಮಾಣಗಳೇನು? ಯಾರನ್ನು ನಂಬಬೇಕು, ಯಾರನ್ನು ನಂಬಬಾರದು? ಎಂಬ ವಿಚಾರವೇ ನನಗೆ ತಿಳಿಯದಾಗಿದೆ. ನಾನು ಪ್ರಜೆಗಳನ್ನು ಪ್ರೀತಿ ಸುತ್ತಿರುವೆನು; ಅಧಿಕಾರಿಗಳನ್ನು ಪ್ರೀತಿಸುತ್ತಿರುವೆನು; ಪುತ್ರನನ್ನು ಪ್ರೇಮದಿಂದ ನಡೆಯಿಸಿಕೊಳ್ಳುತ್ತಿರುವೆನು; ರಾಣಿಯರಲ್ಲಿ ಅನುರಾಗ ವುಳ್ಳವನಾಗಿರುವೆನು; ಆದರೆ ನನ್ನನ್ನು ಮಾತ್ರ ಯಾರೂ ಪ್ರೀತಿಸುವದಿಲ್ಲ

ವೆಂಬದು ನನ್ನ ಪ್ರತ್ಯಯಕ್ಕೆ ಬಂದಿದೆ. ನಾನು ಸಿಂಹಾಸನದ ಮೇಲೆ ಕುಳಿತು ಅಧಿಕಾರನಡೆಯಿಸುತ್ತಿರುವದೇನೋ ನಿಜವು; ಆದರೆ ನಾನು ಎಷ್ಟು ಬಗೆಯಿಂದ ಶ್ರಮಪಡುತ್ತಿರುವೆನೆಂಬದು ಇತರರಿಗೆ ಹೇಗೆ ಗೊತ್ತಾಗಬೇಕು? ಜಗತ್ತು ಸ್ವಾರ್ಥಮಯವಿರುವದು. ಸದ್ಯದ ಸಂಕಟ ಸಮಯದಲ್ಲಿ ನಿಸ್ವಾರ್ಥ ಬುದ್ಧಿಯಿಂದ ಸಹಾಯ ಮಾಡಲು ನೀನೊಬ್ಬಳು ಮಾತ್ರ ಸಿದ್ಧಳಾಗಿರುವೆ. ಅಂತೆಯೇ ನನಗೆ ದುಃಖದಲ್ಲಿಯೂ ಸೌಖ್ಯವು ದೊರೆಯತೊಡಗಿದೆ. ರಾಣೀ ವ್ರಜಸುಂದರಿ, ಈ ಸ್ಥಳವು ನಿರಾಪದ ವಾಗಿಲ್ಲ. ಆದ್ದರಿಂದ ನಗರದ ಬಳಿಯಲ್ಲಿದ್ದ ಚಿತ್ರಾರಾಜಮಂದಿರಕ್ಕೆ ನಡೆ. ಈ ಚಿತ್ರಾಪ್ರಾಸಾದದಲ್ಲಿರುವದು ಅನಿಷ್ಟವೆಂದು ನನಗೆ ತೋರ ಲಾರಂಭಿಸಿದೆ. ನಾನು ಈಗಲೆ ಅರಮನೆಗೆ ಹೋಗಿ, ನೀನು ಹೇಳಿದ ಮೇರೆಗೆ ಎಲ್ಲ ವಿಧದ ವ್ಯವಸ್ಥೆಯನ್ನು ಮಾಡುತ್ತೇನೆ.''

ಮುಕುಂದದೇವನು ಹೊರಟು ಹೋದ ಸ್ವಲ್ಪ ವೇಳೆಯಲ್ಲಿ ಉಷಾ ಸುಂದರಿಯು ಗಧಾದರನನ್ನು ಕರೆದುಕೊಂಡು ಮಂತ್ರಣಾಗಾರಕ್ಕೆ ಬಂದಳು. ವ್ರಜಬಾಲೆಯು ಗದಾಧರನನ್ನು ನೋಡಿದ ಕೂಡಲೆ ಪರಮ ವಿಸ್ಮಿತಳಾಗಿ:—''ಉಷಾಸುಂದರಿ! ಇವರು ಇಲ್ಲಿ ಏಕೆ?''

''ನೀನು ಇಲ್ಲಿ ಏಕೆ?'' ಎಂದು ಉಷಾಸುಂದರಿಯು ನಗುತ್ತ-ನಗುತ್ತ ವ್ರಜಬಾಲೆಗೆ ಉತ್ತರವಿತ್ತಳು. ಅನಂತರದಲ್ಲಿ ಗದಾಧರನು ಕಾಲಾಪಹಾಡನ ಭೆಟ್ಟಿಯಾದ ಸಂಗತಿಯನ್ನೂ, ತಾನು ಅವನ ಮೇಲಿನ ಸೇಡು ತೀರಿಸಿಕೊಳ್ಳುವದಕ್ಕಾಗಿ ಉತ್ಕಲದ ಸೇನಾಧಿಪತ್ಯವನ್ನು ಸ್ವೀಕರಿಸಿದ ಸಂಗತಿಯನ್ನೂ ತಿಳಿಸಿದನು. ಆಗ ಉಷಾಸುಂದರಿಯು ಗದಾಧರ ನನ್ನು ಕುರಿತು: —''ಅಣ್ಣಾ, ಈಗ ವ್ರಜಬಾಲೆಯು 'ರಾಣೀವ್ರಜಸುಂದರಿ' ಯಾಗಿರುವಳು ''

''ಅಂತೂ ಸಾಧ್ವಿಯೆಂದು ಆಡಂಬರವಿಟ್ಟಿದ್ದ ವ್ರಜಬಾಲೆಯು ರಾಣಿಯಾಗಬೇಕೆಂಬ ಅಭಿಲಾಷೆಯಿಂದ ಮುದುಕನಲ್ಲಿ ಅನುರಕ್ತಳಾಗಿರುವ ಳೆಂದಂತಾಯಿತು!''

"ಗದಾಧರರೆ!" ವ್ರಜಬಾಲೆಯು ತೀವ್ರಸ್ವರದಿಂದ:—"ನೀವು ಈ ಬಗೆಯ ಹೀನವಾದ ಮಾತುಗಳನ್ನಾಡಬೇಡಿರಿ. ನನ್ನ ಹೃದಯದ ಪರೀಕ್ಷೆಯಿಲ್ಲದವರು ಏನಂದರೂ ಕ್ಷಮ್ಯವಾಗಬಹುದು. ಮನಸ್ಸಿನಿಂದ ನಿಮ್ಮನ್ನು ವರಿಸಿದ ನಾನು, ಧರ್ಮವಿಧಿಯಿಂದ ಪಾಣಿಗ್ರಹಣ ಮಾಡಿದ ಕಾಲಾಚಾಂದ ನನ್ನು ತ್ಯಾಗಮಾಡಿದ್ದು ಯಾತರ ದ್ಯೋತಕವು? ಧರ್ಮ ಕಟ್ಟಳೆಯನ್ನು ಮೂಲಿಗೊತ್ತಿ ಹೃದಯೇಶ್ವರರಾದ ನಿಮ್ಮನ್ನು ಅರಸುತ್ತ ಬಂದದ್ದು ಯಾತರ ಲಕ್ಷಣವು? ನೀವು ನನ್ನನ್ನು ಸಮಾಜದ ಅಂಜಿಕೆಯಿಂದ ನಿರಾಕರಿಸಿದ ಮೇಲೆ ಆಜನ್ಮವಾಗಿ ಕೌಮಾರ್ಯದಲ್ಲಿ ಕಾಲಕಳೆಯಬೇಕೆಂದು ಮಾಡಿದ ನನ್ನ ನಿಶ್ಚಯವು ಯಾವ ಗುಣವನ್ನು ವ್ಯಕ್ತಪಡಿಸುವದು? ಕಾಳಾಪಹಾಡನ ಮೇಲಿನ ಸೇಡನ್ನು ತೀರಿಸಿಕೊಳ್ಳಬೇಕೆಂಬ ಮಹತ್ವಾಕಾಂಕ್ಷೆಯಿಂದ ನಾನು ರಾಜಾ ಮುಕುಂದದೇವನ ಆಶ್ರಯಕ್ಕೆ ಬಂದೆನು. ಇಲ್ಲಿ ನನ್ನ ವರ್ತನವು ಯಾವ ವಿಧವಾಗಿರುವದೆಂಬದು ಈ ಉಪಾಸುಂದರಿಗೆ ಗೊತ್ತಿಲ್ಲವೆಂದೆನ್ನುವಂತಿಲ್ಲ. ರಾಜನು ನನ್ನನ್ನು ರಾಣಿಯನ್ನಾಗಿ ಮಾಡಿಕೊಳ್ಳಬೇಕೆಂದು ಹವಣಿಸುತ್ತಿರುವನು. ಕಾರ್ಯ ಸಿದ್ಧಿಯಾಗಬೇಕೆಂದು ನಾನು ಅವನನ್ನು ಯುಕ್ತಿ-ಪ್ರಯುಕ್ತಿಗಳಿಂದ ಸಮಾಧಾನಪಡಿಸಿರುವೆನು. ರಾಜನು ನನ್ನನ್ನು ಓರಿಸಾದ ರಾಣಿಯನ್ನಾಗಿ ನಿಯಮಿಸಿ ರಾಜ್ಯ ಸೂತ್ರಗಳನ್ನು ನನ್ನ ಕೈಯಲ್ಲಿ ಕೊಡಬೇಕೆಂದು ಮಾಡಿರುವನು. ಅವನು ನನಗೆ 'ರಾಣೀ ವ್ರಜಸುಂದರಿ'ಯೆಂಬ ಅಭಿಧಾನವನ್ನಿಟ್ಟಿರುವನು. ಓರಿಸಾದ ರಾಣಿಯಾಗಿ ರಾಜ್ಯಾಧಿಕಾರವನ್ನು ತೆಗೆದುಕೊಂಡು ದೇಶಕಾರ್ಯವನ್ನೂ ಅದರೊಡನೆ ಸೇಡಿನ ಉದ್ದೇಶವನ್ನೂ ಸಾಧಿಸಲಿಕ್ಕೆ ಅಡ್ಡಿಯೇನಿರುವದು? ನಾನು ಓರಿಸಾದ ರಾಣಿಯಾಗಿರುವೆನು; ಮುಕುಂದದೇವನ ರಾಣಿಯಾಗಿಲ್ಲ. ನನ್ನ ಹೃದಯದಲ್ಲಿ ಇನ್ನೂ ನಿಮ್ಮ ಮೂರ್ತಿಯು ಇರುವದು. ಅದು ನನ್ನೊಡನೆ ನಾಶವಾಗತಕ್ಕದ್ದಿದೆ. ನಿಮ್ಮ ಮೂರ್ತಿಯು ನನ್ನ ಹೃದಯ ಮಂದಿರದಲ್ಲಿ ನೆಲಿಸಿದ್ದರೂ, ನಿಮ್ಮೊಡನೆ ವಿವಾಹವಾಗಿ ಸಂಸಾರವನ್ನು ನಡೆಯಿಸಬೇಕೆಂಬ ಲವಲವಿಕೆಯು ಲೇಶಮಾತ್ರವೂ ಇಲ್ಲ. ನನ್ನ ಆಯುಷ್ಯದ ಗುರಿಯು ಒಂದೇ ಒಂದಾಗಿರುವದು. ಬಹಳ ದಿನಕ್ಕೆ

ನಿಮ್ಮ ಭೆಟ್ಟಿಯಾದದ್ದರಿಂದಲೂ, ನೀವು ದೇಶಕಾರ್ಯಕ್ಕಾಗಿ ಸಾಗಿ ಬಂದದ್ದರಿಂದಲೂ ಆನಂದವಾಗಿದೆ. ಇನ್ನು ಮೇಲೆ ನನ್ನ ನಿಮ್ಮ ಸಂಬಂಧವು ಬೇರೆ ತರದ್ದಾಗಿರುವದು. ಎಲ್ಲವೂ ವಿಚಿತ್ರವು! ಜೀವನವೊಂದು ಪ್ರಯೋಗಶಾಲೆ!''

''ವ್ರಜಬಾಲೆ, ಜೀವನವು ಪ್ರಯೋಗಶಾಲೆಯೆ? ಅದು ಹೇಗೆ?'' ಎಂದು ಉಷಾಸುಂದರಿಯು ವ್ರಜಬಾಲೆಯನ್ನು ಕೇಳಿದಳು. ಆಗ ವ್ರಜಬಾಲೆಯು ಉಷಾಸುಂದರಿಯನ್ನು ಕುರಿತು—''ನಾನು ಒಬ್ಬ ದರಿದ್ರ ಬ್ರಾಹ್ಮಣ ಕುಮಾರಿಯಷ್ಟೆ? ಈ ಗದಾಧರರನ್ನು ಕಂಡಾಗಿನಿಂದ ನಾನು ಇವರಲ್ಲಿ ಪ್ರೇಮವುಳ್ಳವಳಾದೆನು. ಒಬ್ಬ ಜಹಗೀರದಾರರನ್ನು ವರಿಸಿ ನಾನು ಭಾಗ್ಯಶಾಲಿನಿಯಾಗುವೆನೆಂದು ನಂಬಿದ್ದೆನು. ಕಡೆಗೆ ವಿಲಕ್ಷಣವಾದ ಘಟನೆಯಿಂದ ಕಾಲಾಚಾಂದನನ್ನು ವರಿಸುವ ಪ್ರಸಂಗವೊದಗಿ ನನ್ನ ಆಯುಷ್ಯವು ದುಃಖಮಯವಾಯಿತು. ಅನಂತರದಲ್ಲಿ ನಾನು ಇವರ ಬಳಿಗೆ ಹೋಗಿ, ನನ್ನನ್ನು ಪಾಣಿಗ್ರಹಣ ಮಾಡಬೇಕೆಂದು ಬೇಡಿಕೊಂಡೆನು. ಸಮಾಜಭೂತಕ್ಕೆ ಭಯಭೀತರಾದ ಇವರು ನನ್ನ ಮಾತನ್ನು ತಿರಸ್ಕರಿಸಿದರು. ಆಗ ನನ್ನಲ್ಲಿ ಕಾಲಾಚಾಂದನ ಮೇಲಿನ ಸೇಡು ತೀರಿಸಿಕೊಳ್ಳುವ ಭಾವನೆಯು ಉತ್ಪನ್ನವಾಯಿತು. ನನ್ನ ಯೋಗ್ಯತೆಯೇನಿರುವದೆಂಬದರ ಕಡೆಗೆ ನಾನು ಲಕ್ಷ್ಯಗೊಡಲಿಲ್ಲ. ದೈವಯೋಗದಿಂದ ಒರಿಸಾದ ರಾಜ್ಯಸೂತ್ರಗಳು ನನ್ನ ಕೈಯಲ್ಲಿ ದೊರಕುವ ಸಂಭವವಿರುವದು. ಈಗ ನಾನು ರಾಣೀವ್ರಜಸುಂದರಿಯಾಗಿರುವೆನು. ಕರ್ತವ್ಯಕ್ಕೆ ಯಶವನ್ನು ಕೊಡುವ ಕಾರ್ಯವು ಪರಮಾತ್ಮನದಿರುವದು. ನನ್ನ ಮಹತ್ವಾಕಾಂಕ್ಷೆಯು ಪೂರ್ಣವಾಗುವದೋ ಹೇಗೋ ನೋಡಬೇಕಾಗಿದೆ. ಇಂದು ರಾಣೀ ವ್ರಜಸುಂದರಿಯಾದವಳು ನಾಳೆ ಮತ್ತೆ ವ್ರಜಬಾಲೆಯಾಗಿ ಜಗನ್ನಾಥಪುರಿಯ ಬಳಿಯ ಸಮುದ್ರ ತೀರದ ಪರ್ಣಕುಟಿಗೆ ಹೋಗುವ ಪ್ರಸಂಗವಾದರೂ ಬರಬಹುದು. ಎಲ್ಲ ಬಗೆಯ ಅನುಕೂಲತೆಗಳೊದಗಿದರೆ ಶಸ್ತ್ರಪಾಣಿಯಾಗಿ ಯುದ್ಧದಲ್ಲಿ ರಣಚಂಡಿಯಂತೆ ನರ್ತನ ಮಾಡುವ ಪ್ರಸಂಗವಾದರೂ ಬರಬಹುದು. ಒಂದು ವೇಳೆ ಧಾರಾತೀರ್ಥದಲ್ಲಿ ಮೈಗೊಡುವ ಸುಸಂಧಿಯಾದರೂ ಬರಬಹುದು. ನನ್ನ ಕರ್ಮಕಥೆಯಂತೆ

ಈ ಗದಾಧರರ ಕರ್ಮಕಥೆಯಾದರೂ ರಹಸ್ಯಮಯವಾಗಿರುವದೆಂಬ ದನ್ನು ನೀನು ಬಲ್ಲೆ. ಕಾಳಾಪಹಾಡನ ಕರ್ಮಕಥೆಯಂತೂ ಜಗಪ್ರಸಿದ್ಧ ವಿರುವದು. ಇದೇ ಮೇರೆಗೆ ಎಲ್ಲರ ಜೀವನಗಳಲ್ಲಿ ಒಂದಿಲ್ಲೊಂದು ರಹಸ್ಯವು ತುಂಬಿಕೊಂಡಿರುವದು. ಅಂತೆಯೆ ಜೀವನವೊಂದು ಪ್ರಯೋಗ ಶಾಲೆಯೆಂದು ಹೇಳಿದೆನು.''

ಅನಂತರದಲ್ಲಿ ವ್ರಜಬಾಲೆ-ಗದಾಧರರು ರಾಜಕಾರಣದ ವಿಷಯ ವಾಗಿ ಕೆಲವು ಗಳಿಗೆಗಳ ವರೆಗೆ ಮಾತನಾಡುತ್ತ ಕುಳಿತಿದ್ದರು.

---

## ರಾಣಿಯ ರಾಜಕಾರಣ.

ವ್ರಜಬಾಲೆಯ ಕಾರಸ್ಥಾನವು ಸಫಲವಾಯಿತು. ಜನಾರ್ದನ ಮಂತ್ರಿಯು ಎರಡು ಸಾವಿರ ಸೈನಿಕರನ್ನೊಡಗೊಂಡು ದುರ್ಗದ ಮೇಲೆ ಸಾಗಿ ಬಂದನು. ವ್ರಜಬಾಲೆಯ ಸೂಚನೆಯ ಮೇರೆಗೆ ದುರ್ಗದ್ವಾರವನ್ನು ತೆಗೆಯಿಸಬೇಕೆಂದು ದುರ್ಗಾಧಿಪತಿಯಾದ ದೀನಕೃಷ್ಣನಿಗೆ ಮುಕುಂದ ದೇವನು ಹೇಳಿದನು. ದುರ್ಗಾಧಿಪತಿಯು ರಾಜಾಜ್ಞೆಯನ್ನು ಅವಜ್ಞೆ ಮಾಡಿದನು. ಶತ್ರುಗಳನ್ನು ಕೋಟೆಯಲ್ಲಿ ತೆಗೆದುಕೊಳ್ಳುವದು ಅನಿಷ್ಟ ವಾದ್ದರಿಂದ ಹಾಗೆ ಮಾಡಲಾರೆನೆಂದು ಅವನು ಅರಸನಿಗೆ ಸ್ಪಷ್ಟವಾಗಿ ತಿಳಿಸಿದನು. ಉಳಿದ ಅಧಿಕಾರಿಗಳಾದರೂ ದೀನಕೃಷ್ಣನನ್ನೇ ಅನುಸರಿ ಸಿದರು ವ್ರಜಬಾಲೆಯ ಅಭಿಪ್ರಾಯವು ಯಾರ ಮನಸ್ಸಿಗೂ ಬಾರದ್ದ ರಿಂದ ಅರಸನು ನಿರುಪಾಯನಾಗಬೇಕಾಯಿತು. ಒತ್ತಾಯದಿಂದ ಯಾವ ದೊಂದು ಕೃತಿಯನ್ನು ಮಾಡಿದರೆ ಅಧಿಕಾರಿಗಳು ವಿಮನಸ್ಕರಾಗಿ ಜನಾ ರ್ದನನಂತೆ ಬಂಡು ಮಾಡಬಹುದೆಂದು ಅವನು ಅಂಜಿದನು. ಸೈನ್ಯ ವನ್ನು ದ್ವಿಭಾಗಿಸಿ ಒಂದು ಭಾಗವನ್ನು ಸಮ್ಮುಖದಲ್ಲಿರಿಸಿ, ಮತ್ತೊಂದು ಭಾಗವನ್ನು ಶತ್ರುಸೈನ್ಯದ ಹಿಂಬದಿಯಲ್ಲಿ ತಂದರೆ, ಜನಾರ್ದನನು ಕೈಗೆ ಸಿಗುವನೆಂದು ವ್ರಜಬಾಲೆಯೂ ಗದಾಧರನೂ ತಮ್ಮ ಅಭಿಪ್ರಾಯವನ್ನು

ತಿಳಿಸಿದರು. ರಾತ್ರಿಯ ವೇಳೆಯಲ್ಲಿ ಸೈನ್ಯದ ವಿಭಾಗಮಾಡುವದನ್ನು ದೀನಕೃಷ್ಣನೂ ಮಂತ್ರಿಯಾದ ಭೃಗುರಾಮನೂ ಅಲ್ಲಗಳೆದರು. ಕಡೆಗೆ ಕೋಟೆಯ ಹೊರಗೆ ಮಂತ್ರಿಯ ಸೈನಿಕರಿಗೂ ಮುಕುಂದದೇವನ ಸೈನಿಕರಿಗೂ ಕಾಳಗವು ನಡೆಯಿತು. ಮಂತ್ರಿಯು ಸೋತು ಓಡಿಹೋದನು. ಅರಸನು ವಿಜಯಾನಂದದಿಂದ ದುರ್ಗವನ್ನು ಸೇರಿದನು. ಈ ಸಂಗ್ರಾಮದಿಂದ ಯಾವ ಲಾಭವೂ ಆಗಲಿಲ್ಲ. ಬಂಡಾಯವನ್ನೆಬ್ಬಿಸಲಿಕ್ಕೆ ಮಂತ್ರಿಯು ಪಾರಾಗಿ ಹೋಗಿಬಿಟ್ಟನು!

ಅರಸನ ಎಲ್ಲ ಪ್ರಯತ್ನಗಳು ವ್ಯರ್ಥವಾಗತೊಡಗಿದ್ದವು. ವೈತರಣೀ ತೀರದ ಮೇಲೆ ಅವನು ಕುಂಜಗಾಧಿಪತಿಯನ್ನು ಕಳುಹಿಸಿದ್ದನು. ಕಾತಲೂಖಾನನು ಕುಂಜಗಾಧಿಪತಿಯನ್ನು ಪರಾಜಯಗೊಳಿಸಿದನು. ಜನಾರ್ದನ ಮಂತ್ರಿಯ ಮೇಲೆ ಹೋಗಿದ್ದ ಕರೀಮುಶಹನು ಹೇಗಾದರೂ ಜೀವವುಳಿಸಿಕೊಂಡು ರಾಜಧಾನಿಯನ್ನು ಸೇರಿದ್ದನು. ಕಾಳಾಪಹಾಡ-ಕಾತಲೂಖಾನರು ದಿನದಿನಕ್ಕೆ ಹೆಜ್ಜೆಯನ್ನು ಮುಂದಿಡತೊಡಗಿದ್ದರು. ಬಂಡಾಯವನ್ನಡಗಿಸುವದು ಆದ್ಯಕರ್ತವ್ಯವಾಗಿತ್ತು. ಅದಕ್ಕಾಗಿ ಅರಸನು ತಾನೇ ಹೋಗಬೇಕೆಂದು ಸಿದ್ಧನಾಗಿದ್ದನು. ಅವನು ಓಲಗವನ್ನು ಕೂಡಿಸಿ, ತಾನು ದಂಡಯಾತ್ರೆಯನ್ನು ಮುಗಿಸಿಕೊಂಡು ಬರುವವರೆಗೆ ಎಲ್ಲ ರಾಜ್ಯಕಾರ್ಯಭಾರವನ್ನು ರಾಣೀ ವ್ರಜಸುಂದರಿಗೆ ಒಪ್ಪಿಸಿರುವೆನೆಂದು ಪ್ರಕಟಗೊಳಿಸಿದನು.

ವ್ರಜಬಾಲೆಯು ರಾಣೀವ್ರಜಸುಂದರಿಯಾಗಿ ರಾಜಸೂತ್ರಗಳನ್ನು ಕೈಯಲ್ಲಿ ತೆಗೆದುಕೊಂಡಳು. ಅವಳು ಈಗ ರಾಧಾಮೋಹನ ಪುತ್ರಿಯಾದ ವ್ರಜಬಾಲೆಯಾಗಿದ್ದಿಲ್ಲ; ಗದಾಧರನನ್ನು ವರಿಸಬೇಕೆಂದು ಇಚ್ಛಿಸುತ್ತಿರುವ ವ್ರಜಬಾಲೆಯಾಗಿದ್ದಿಲ್ಲ; ಕಾಲಾಚಾಂದನನ್ನು ತಿರಸ್ಕರಿಸಿ, ಪುರಿಯಲ್ಲಿ ಒಂದು ಗುಡಿಸಲೊಳಗೆ ವಾಸವಾಗಿದ್ದಂಥ ವ್ರಜಬಾಲೆಯಾಗಿದ್ದಿಲ್ಲ. ಚಿತ್ರಾಭುವನದಲ್ಲಿ ಕುಳಿತು ಉತ್ಕಲದ ರಾಜಸೂತ್ರವನ್ನು ನಡೆಯಿಸುವವಳಾದ ಅವಳು ಈಗ ರಾಣೀವ್ರಜಸುಂದರಿಯಾಗಿದ್ದಳು. ವ್ರಜಬಾಲೆಯು ರಾಣಿಯಾದದ್ದರಿಂದ ಓಲಗದೊಳಗಿನ ಕೆಲವು ಜನರ ಮನಸ್ಸು

ಅಸಂತುಷ್ಟತೆಯನ್ನು ಹೊಂದಿತು. ರಾಣಿಯು ತನ್ನ ಕರ್ತವ್ಯಪ್ರಭಾವದಿಂದ ಆ ಎಲ್ಲ ಜನರ ಮೇಲೆ ತನ್ನ ವರ್ಚಸ್ವವನ್ನು ಪ್ರಸ್ಥಾಪಿಸಿದಳು. ಅವಳ ಆಜ್ಞೆಯನ್ನು ಅವಮಾನ್ಯ ಮಾಡುವ ಧೈರ್ಯವು ಯಾರಿಗೂ ಆಗುತ್ತಿದ್ದಿಲ್ಲ.

ವ್ರಜಸುಂದರಿಯು ತನ್ನ ಸಖಿಯಾದ ಉಷಾಸುಂದರಿಯೊಡನೆ ಮಾತನಾಡುತ್ತ ಕುಳಿತಿದ್ದಳು. ಮಂತ್ರಿಯಾದ ಜನಾರ್ದನನ ನೀಚತನದಿಂದ ಇಡೀ ಉತ್ಕಲದೇಶವು ಗಂಡಾಂತರದಲ್ಲಿ ಮುಳುಗುವ ಪ್ರಸಂಗ ಬಂದದ್ದಕ್ಕಾಗಿ ಅವರಿಬ್ಬರೂ ಸ್ವಾಧೀನಚಿಂತೆಯೊಡಗಿದ್ದರು. ಪ್ರಜಾಜನರಲ್ಲಿ ಕೆಲವು ಜನ ಪ್ರಮುಖರೂ ಸೈನ್ಯವೂ ಸೇನಾಪತಿಯೂ ಸ್ತ್ರೀಪುತ್ರಾದಿಕರೂ ಸ್ವಾರ್ಥಿಗಳಾದ ಮೇಲೆ ದೇಶಕ್ಕೆ ತಾರಣಮಾರ್ಗವೆಲ್ಲಿರುವದು?

ರಾಣೀವ್ರಜಸುಂದರಿಯು ಮಂತ್ರಣಾಗಾರದಲ್ಲಿ ಕುಳಿತಾಗ ನಟವರನು ಅಲ್ಲಿಗೆ ಬಂದನು. ವ್ರಜಸುಂದರಿಗೆ ಬಹಳ ದಿನಗಳಿಂದ ನಟವರನ ಭೆಟ್ಟಿಯಾಗಿದ್ದಿಲ್ಲ. ಆಗ ಅವಳು—"ನಟವರ, ನೀನು ಇಷ್ಟು ದಿವಸಗಳ ವರೆಗೆ ಎಲ್ಲಿ ಅದೃಶ್ಯನಾಗಿದ್ದೆ?"

"ರಾಣೀಸರಕಾರ, ನಾನು ತಮ್ಮ ಕೆಲಸದಲ್ಲಿಯೆ ತೊಡಗಿದ್ದೆನು"

"ನೀನು ಅಂತಹ ಕರ್ತವ್ಯತತ್ಪರನೇ ಇರುವೆ" ಎಂದು ರಾಣಿಯು ನಟವರನಿಗೆ ನುಡಿದು, ಉಷಾಸುಂದರಿಯನ್ನು ಕುರಿತು—'ನೀನು ಮಂತ್ರಣಾಗಾರದ ಬಾಗಿಲ ಬಳಿಯಲ್ಲಿರು. ಯಾರನ್ನೂ ಒಳಗೆ ಬಿಡಬೇಡ."

"ನಟವರಾ, ಮತ್ತೇನು ವಿಶೇಷ ಸಂಗತಿಯು?" ಉಷಾಸುಂದರಿಯು ಹೋದ ಮೇಲೆ ರಾಣಿಯು ನಟವರನನ್ನು ಕೇಳಿದಳು.

"ವಾರ್ತೆಯು ಭಯಂಕರವಾದದ್ದಿರುವದು. ಕಾತಲೂಖಾನನು ನರಾಜದ ಬಳಿಯಲ್ಲಿ ತಳವೂರಿರುವನು."

"ಈ ಸಂಗತಿಯು ವಿಶ್ವಸನೀಯವೆ?"

"ಸರಕಾರ, ಈ ಸಂಗತಿಯು ನಿಜವಾದದ್ದು."

'ನರಾಜದ ಬಳಿಯಲ್ಲಿ ಮಹಾನದಿಯು ದ್ವಿಭಾಗವಾಗಿರುವದಿಲ್ಲವೆ?'

"ಅಹುದು."

"ಕಾತೂಲಖಾನನು ಯಾವ ನದಿಯ ತೀರದಲ್ಲಿ ಬೀಡು ಬಿಟ್ಟಿರುವನು?"

"ಕಾಠಜುಡಿ ನದೀತೀರದಲ್ಲಿ."

"ನರಾಜವು ಇಲ್ಲಿಂದ ಸಮೀಪದಲ್ಲಿರುವದೇನು?"

"ರಾಣಿಯವರೆ, ತೀರ ಸಮೀಪದಲ್ಲಿರುವದು. ಕಾಠಜುಡೀ ನದಿಯ ಪಾತ್ರವು ತೀರ ಸಣ್ಣದಿರುವದರಿಂದ ಅಲ್ಲಿ ಸೇತುವೆಯನ್ನು ಕಟ್ಟಿಸುವ ಕೆಲಸವನ್ನಾದರೂ ಖಾನನು ನಡೆಯಿಸಿರುವನು. ನಾಳೆ ಸಂಧ್ಯಾಕಾಲಕ್ಕೆ ಸೇತುವೆಯು ಪೂರ್ಣವಾಗಬಹುದು. ನಾಡದು ಯವನ ಸೈನ್ಯವು ರಾಜಧಾನಿಯ ಮೇಲೆ ದಂಡೆತ್ತಿ ಬರಬಹುವಾಗಿ ತೋರುವದು."

ನಟವರನಿಂದ ಎಲ್ಲ ವಿಷಯಗಳನ್ನು ಕೇಳಿಕೊಂಡು ರಾಣಿಯು ಅವನಿಗೆ ನಿರೋಪಕೊಟ್ಟಳು. ಮುಂದೆ ಸ್ವಲ್ಪ ವೇಳೆಯಲ್ಲಿ ಮತ್ತೊಬ್ಬ ಗುಪ್ತಚರನು ಅಲ್ಲಿಗೆ ಬಂದು: "ರಾಣಿಯವರೆ, ಹದಿನೈದುಸಾವಿರ ಬಂಡುಗಾರರನ್ನೊಡಗೊಂಡು ಮಂತ್ರಿಯಾದ ಜನಾರ್ದನನು ರಾಜಧಾನಿಯ ಮೇಲೆ ದಂಡೆತ್ತಿ ಬರುವವನಿರುವನು" ಎಂದು ಹೇಳಿ ಅವನು ಹೋಗುವಷ್ಟರಲ್ಲಿ ಮತ್ತೊಬ್ಬ ಅನುಚರನು ಅಲ್ಲಿಗೆ ಬಂದು, ಜನಾರ್ದನ ಮಂತ್ರಿಯು ಬಂಡುಗಾರರನ್ನು ಕೂಡಿಕೊಂಡು ಚೌಘರ ಗ್ರಾಮದ ಬಳಿಯಲ್ಲಿ ತಳವೂರಿರುವನು; ಅವನು ಬೇಗನೆ ರಾಜಧಾನಿಯ ಮೇಲೆ ಸಾಗಿ ಬರುವವನಿರುವವನೆಂಬ ಸಂಗತಿಯನ್ನು ಹೇಳಿದನು.

ರಾಣೀ ವ್ರಜಸುಂದರಿಯು ಅದ್ವಿತೀಯ ರಾಜಕಾರಣಪಟುವಾಗಿದ್ದಳು. ಶತ್ರುಗಳ ಕಡೆಯ ಎಲ್ಲ ಸಂಗತಿಗಳನ್ನು ತಿಳಿಯುವದಕ್ಕಾಗಿ ಅವಳು ಎಲ್ಲ ಕಡೆಯಲ್ಲಿ ಗುಪ್ತಚರರ ಜಾಳಿಗೆಯನ್ನು ಪಸರಿಸಿದ್ದಳು. ಅವಳು ಅತ್ಯಂತ ಕರ್ತವ್ಯನಿಷ್ಠಳಿದ್ದುದರಿಂದ ಎಲ್ಲ ಕಾರ್ಯಗಳನ್ನು ಮನಮುಟ್ಟಿ ಮಾಡುತ್ತಿದ್ದಳು. ಎಲ್ಲ ಕಡೆಯಿಂದಲೂ ಶತ್ರುಗಳ ಸೇನಾಸಾಗರವು ರಾಜಧಾನಿಯ ಮೇಲೆ ಬೇಗನೆ ಬೀಳಲಿರುವದೆಂಬ ವಾರ್ತೆಯು ಕಿವಿಗೆ ಬಿದ್ದಿದ್ದರೂ ಆ ಕೆಚ್ಚೆದೆಯ ಆರ್ಯಾಂಗನೆಯು ಎದೆಗುಂದಲಿಲ್ಲ. ಅವಳ ಬಳಿಯಲ್ಲಿ ಮೂವತ್ತು ಸಾವಿರ ಸೈನ್ಯವು ಮಾತ್ರ ಇತ್ತು.

ಈ ಸೈನ್ಯವು ಸುತ್ತಮುತ್ತು ಮುಗಿಬೀಳತೊಡಗಿರುವ ಶತ್ರುಸೇನಾಸಾಗರಕ್ಕೆ ಎದೆಗೊಟ್ಟು ನಿಲ್ಲಬೇಕಾಗಿತ್ತು. ದೇಶದಲ್ಲಿಯೂ ರಾಜಧಾನಿಯಲ್ಲಿಯೂ ಓಲಗದಲ್ಲಿಯೂ ಪಕ್ಷೋಪಪಕ್ಷಗಳಾಗಿದ್ದದರಿಂದ ರಾಣಿಯು ಬಹಳೇ ಯೋಚನೆಯಲ್ಲಿ ಮುಳುಗಿದಳು. ಗಂಡಾಂತರಕ್ಕೆ ಎದೆಗೊಟ್ಟು ಪ್ರಸಂಗಾವಧಾನದಿಂದ ಕಾರ್ಯವನ್ನು ಹೇಗೆ ಸಾಧಿಸಬೇಕೆಂದು ಅವಳು ನಾನಾ ಪ್ರಕಾರದ ಹಂಚಿಕೆ ಮಾಡಲಾರಂಭಿಸಿದಳು. ಅಷ್ಟರಲ್ಲಿ ಮಹಾರಾಜಾ ಮುಕುಂದದೇವನ ಕಡೆಯಿಂದ ಒಬ್ಬ ದೂತನು ಅಲ್ಲಿಗೆ ಬಂದನು. ಬಂಡುಗಾರರು ಹಿಂದಕ್ಕೆ ಹೆಜ್ಜೆಯಿಡತೊಡಗಿರುವರೆಂದೂ ಮಹಾರಾಜರಿಗೆ ಜಯವು ದೊರೆಯುವ ಸಂಭವವಿರುವದೆಂದೂ ಅವನು ಸುದ್ದೀ ತಿಳಿಸಿದನು. ದೂತನ ಮಾತುಗಳನ್ನು ಕೇಳಿ ವ್ರಜಸುಂದರಿಯು: "ಮಹಾರಾಜರಿಗೆ ವಿಜಯವು ದೊರೆಯುತೊಡಗಿರುವದೆಂಬ ಮಾತು ಅಶುಭವು. ಬಂಡುಗಾರರ ಸೈನ್ಯದ ಒಂದು ಪಥಕವು ಅವರಿಗೆ ಅಂಜಿದಂತೆ ನಟಿಸಿ, ಹಿಂದೆ ಹೆಜ್ಜೆಯಿಟ್ಟಿರುವದು. ಮಹಾರಾಜರು ರಾಜಧಾನಿಯನ್ನು ಬಿಟ್ಟು ದೂರ ಹೋಗಬೇಕೆಂದು ಅವರ ಉದ್ದೇಶವುಂಟು. ಬಂಡುಗಾರರ ಮುಖ್ಯ ಸೈನ್ಯವು ಈಗಾಗಲೆ ಚೌಘರ ಗ್ರಾಮದ ಒಳಿಯಲ್ಲಿ ತಳವೂರಿರುವದಂತೆ. ಅದು ಇನ್ನು ಮೇಲೆ ರಾಜಧಾನಿಯನ್ನು ಮುತ್ತುವದಕ್ಕಾಗಿ ಹೊರಡುವದು. ಕಾತಲೂಖಾನನು ನರಾಜದಲ್ಲಿರುವನು. ಈ ಎಲ್ಲ ಸಂಗತಿಗಳನ್ನು ಮಹಾರಾಜರಿಗೆ ತಿಳಿಸಿ, ರಾಜಧಾನಿಗೆ ಬಂದರೆ ಕ್ಷೇಮವಾಗುವದೆಂದು ಹೇಳು.''

ರಾಣಿಯು ಸೇವಕನಿಗೆ ನಿರೋಪಕೊಟ್ಟು ಓಲಗಕ್ಕೆ ಬಂದಳು. ಅಲ್ಲಿ ರಾಜಸಿಂಹಾಸನದ ಬಳಿಯ ಒಂದು ಉಚ್ಚಾಸನದಲ್ಲಿ ಅವಳು ಮಂಡಿಸಿದಳು. ಗುಪ್ತಕಾರಸ್ಥಾನ ನಡೆಯಿಸಬೇಕಾಗಿದ್ದುದರಿಂದ ಅವಳು ಮುಖ್ಯ ಮುಖ್ಯ ಅಧಿಕಾರಿಗಳನ್ನು ಮಾತ್ರ ಓಲಗದಲ್ಲಿ ಕರೆಯಿಸಿಕೊಂಡಿದ್ದಳು. ದೀನಕೃಷ್ಣ, ಗದಾಧರ, ಕರೀಮಶಹ, ಭೃಗುರಾಮ ಮೊದಲಾದ ನಾಲ್ಕೆಂಟು ಜನ ಅಧಿಕಾರಿಗಳು ಮಾತ್ರ ಓಲಗಕ್ಕೆ ಬಂದಿದ್ದರು. ರಾಣಿಯು ಸಭಿಕರನ್ನು ಕುರಿತು ವಸ್ತುಸ್ಥಿತಿಯನ್ನು ಹೇಳತೊಡಗಿದಳು:

“ಮಂತ್ರಿ-ಸೇನಾನಾಯಕರೆ, ಸರದಾರರೆ, ಉತ್ಕಲದ ಸ್ವಾತಂತ್ರ್ಯ ಸಿಂಹಾಸನದ ಮೇಲೆ ಪ್ರಚಂಡವಾದ ಗದಾಪ್ರಹಾರವಾಗತಕ್ಕದ್ದೆಂಬ ಸಂಗತಿಯು ಎಲ್ಲರಿಗೂ ತಿಳಿದದ್ದಾಗಿರುವದು. ಉತ್ಕಲದ ವೀರರು ಅಜಿಂಕ್ಯರೆಂಬ ಮಾತು ಸರ್ವವಿಶ್ರುತವಿರುವದು. ಸದ್ಯಕ್ಕೆ ಮಾತ್ರ ಈ ಅಭಿಮಾನವನ್ನು ಬಿಡುವ ಪ್ರಸಂಗವೊದಗಿರುವದು. ದೇಶವು ಒಡಕಿನಿಂದ ದುರ್ಬಲವಾಗಿರುವದು. ಗೃಹಭೇದಕರ ಸುಳಿದಾಟದಿಂದ ಶತ್ರುಗಳ ಅಬ್ಬರಕ್ಕೆ ಪ್ರೋತ್ಸಾಹನೆಯು ದೊರೆಯಲಾರಂಭಿಸಿರುವದು. ಕ್ಷುದ್ರ ಸ್ವಾರ್ಥಿಗಳು ರಾಜಧಾನಿಯನ್ನು ಸಹ ಪ್ರವೇಶಿಸಿ, ಸ್ವದೇಶದ ಘಾತ ಮಾಡಲಿಕ್ಕೆ ಸಿದ್ಧರಾಗಿರುವರು. ಬಲಾಢ್ಯನಾದ ಕಾಳಾಪಹಾಡನೂ ಕಾತಲೂಖಾನನೂ ಬಂಡುಗಾರನಾದ ಜನಾರ್ದನ ಮಂತ್ರಿಯೂ ಓರಿಸಾದ ಸ್ವಾತಂತ್ರ್ಯ ಸಿಂಹಾಸನವನ್ನು ಶತಚೂರ್ಣ ಮಾಡಲಿಕ್ಕೆ ಬದ್ಧಕಂಕಣರಾಗಿರುವರು. ಕಾತಲೂಖಾನನು ನರಾಜದ ಒಳಿಯಲ್ಲಿ ಬಂದಿರುವನು. ಜನಾರ್ದನ ಮಂತ್ರಿಯಾದರೂ ನದೀತೀರವನ್ನು ತಲುಪಿರುವನು. ಕಾಳಾಪಹಾಡನಾದರೂ ಮಯೂರಭಂಜದಿಂದ ಬೇಗನೆ ರಾಜಧಾನಿಯ ಮೇಲೆ ಸಾಗಿಬರಲಿರುವನು.' ಈ ಅದ್ಭುತವಾದ ಸೇನಾಸಾಗರಕ್ಕೆ ಎದೆಗೊಟ್ಟು ನಿಲ್ಲುವದು ಸಾಮಾನ್ಯವಾದ ಸಂಗತಿಯಲ್ಲ. ಮಹಾರಾಜರು ಬಂಡಾಯವನ್ನು ಶಾಂತಮಾಡಲಿಕ್ಕೆ ಹೊರಟು, ಶತ್ರುಗಳ ಮೋಸದಿಂದ ಹಾಗೆಯೇ ಮುಂದಕ್ಕೆ ಸಾಗತೊಡಗಿರುತ್ತಾರೆ. ಈ ಸಂಧಿಯಲ್ಲಿ ಯಾವ ಯಾವ ಕಾರಸ್ಥಾನಗಳನ್ನು ರಚಿಸಿ ಉತ್ಕಲದ ಸಿಂಹಾಸನವನ್ನು ರಕ್ಷಿಸಬೇಕೆಂಬದನ್ನು ಈಗಲೇ ನಿರ್ಧರಿಸಿರಿ. ದೇಹದಲ್ಲಿ ಪ್ರಾಣವಾಯುವು ಸಂಚರಿಸುತ್ತಿರುವ ವರೆಗೆ ನೀವು ನಿಮ್ಮ ಕರ್ತವ್ಯವನ್ನು ಮಾಡತಕ್ಕದ್ದು. ನಿಮ್ಮ ಸೈನಿಕರನ್ನಾದರೂ ಇದೇ ಮೇರೆಗೆ ಪ್ರೋತ್ಸಾಹಿಸತಕ್ಕದ್ದು. ಸ್ವಾತಂತ್ರ್ಯವನ್ನು ಕಳೆದುಕೊಂಡು ಬಾಳುವದಕ್ಕಿಂತಲೂ, ಸತ್ತು ಸ್ವರ್ಗವನ್ನು ಕಾಣುವದು ಶ್ರೇಯಸ್ಕರವಾದದ್ದು. ನಿಮ್ಮೆಲ್ಲರ ಮೇಲೆ ಇಡೀ ಓರಿಸಾದ ಭಾರವಿರುವದೆಂಬದನ್ನು ಮರೆಯಬೇಡಿರಿ. ಇದರಲ್ಲಿ ಯಾರಾದರೂ ಕರ್ತವ್ಯಚ್ಯುತರಾದರೆ, ಮುಂದೊದಗುವ ಅನಿಷ್ಟದ ಅಪಯಶಕ್ಕೆ ಅವರೇ ಪಾತ್ರ

ರಾಗುವರೆಂಬದನ್ನು ಹೇಳಬೇಕಾಗಿಲ್ಲ. ಶತ್ರುಗಳ ಪ್ರತಿಕಾರವನ್ನು ಯಾವಯಾವ ಬಗೆಯಿಂದ ಮಾಡಬೇಕೆಂಬದರ ಬಗ್ಗೆ ನಿಮ್ಮ ನಿಮ್ಮ ಅಭಿಪ್ರಾಯಗಳನ್ನು ತಿಳಿಸಿರಿ."

ರಾಣಿಯು ಹೀಗೆ ನುಡಿದ ಕೂಡಲೆ ದೀನಕೃಷ್ಣನು ತನ್ನ ಸ್ಥಳದಿಂದೆದ್ದು ರಾಣಿಗೆ ಅಭಿವಂದಿಸಿ:—"ರಾಣೀಸರಕಾರ, ನೀವು ಅತ್ಯಂತ ರಾಜಕಾರಣ ನಿಪುಣೆಯರಿರುವಿರಿ. ನಿಮ್ಮ ಅಭಿಪ್ರಾಯವೇ ನಮ್ಮ ಅಭಿಪ್ರಾಯವು. ಧೂರ್ತರಾದ ನೀವು ನಮಗಿಂತ ಹೆಚ್ಚಿನ ಸಂಗತಿಗಳನ್ನು ಶೋಧಿಸಿ ತೆಗೆದಿರುವಿರಿ. ನಾವು ನಿಮ್ಮಲ್ಲಿ ಪೂರ್ಣನಂಬಿಗೆಯುಳ್ಳವರಿರುವೆವು. ನಿಮ್ಮ ಹೇಳಿಕೆಯಂತೆ ನಡೆದರೆ ನಾವು ಗಂಡಾಂತರದಿಂದ ಪಾರಾಗುವೆವೆಂದು ನಮ್ಮ ಮನವರಿಕೆಯಾಗಿರುವದು. ಸದ್ಯದ ಘನತರವಾದ ವಿಪತ್ತಿನಿಂದ ನಾವಂತು ದಿಙ್ಮೂಢರಾಗಿರುವೆವು. ನೀವೇ ಮಾರ್ಗದರ್ಶಕರಾಗಬೇಕೆಂದು ಪ್ರಾರ್ಥನೆಯುಂಟು."

"ಸೇನಾಪತಿಗಳೇ, ನೀವು ವಯೋವೃದ್ಧರೂ ಜ್ಞಾನವೃದ್ಧರೂ ಇರುವಿರಿ. ರಾಜಕಾರಣದಲ್ಲಿ ನೀವು ಚನ್ನಾಗಿ ನುರಿತವರಿರುವಿರಿ. ಶೂರರೂ ಧೀರರೂ ಆಗಿರುವಿರಿ. ನಿಮ್ಮಂತಹರಿಗೆ ಪಾಮರಳಾದ ಅಬಲೆಯು ಹೇಗೆ ಮಾರ್ಗದರ್ಶಕಳಾಗಬೇಕು? ನನ್ನ ಯೋಗ್ಯತೆಯು ಅತ್ಯಲ್ಪವಿರುವದು ಸದ್ಯದ ಪ್ರಸಂಗದಲ್ಲಿ ಧೈರ್ಯಗುಂದದೆ ಕರ್ತವ್ಯದಲ್ಲಿ ತೊಡಗಿದರೆ-ಯಶಸ್ವಿಯಾಗುವಿರೆಂಬದನ್ನಿಷ್ಟು ನಾನು ಹೇಳಬಲ್ಲೆನು ಮಾತೃಭೂಮಿಗಾಗಿಯೂ, ಧರ್ಮಕ್ಕಾಗಿಯೂ, ಹರಿಸಾದ ಸ್ವಾತಂತ್ರ್ಯ ಸಿಂಹಾಸನಕ್ಕಾಗಿಯೂ. ನಿಃಸ್ವಾರ್ಥಬುದ್ಧಿಯಿಂದಲೂ ಏಕನಿಷ್ಠೆಯಿಂದಲೂ ಸಾಹಸ ಮಾಡಿ ಯಶೋಭಾಗಿಗಳಾಗಿರಿ."

"ರಾಣೀಸಾಹೇಬರೇ, ನಾವು ದೇಹದಲ್ಲಿ ಪ್ರಾಣವಾಯುವು ಸಂಚರಿಸುತ್ತಿರುವವರೆಗೆ ಕಾದಲಿಕ್ಕೆ ಸಿದ್ಧರಿರುವೆವು" ಎಂದು ಕರೀಮುಶಹನು ಆವೇಶದಿಂದ ನುಡಿದನು.

"ವಿಶ್ವಾಸಘಾತಕಿಯಾದ ಮಂತ್ರಿಯನ್ನು ನಾಶಗೊಳಿಸಲಿಕ್ಕೆ ನಾನು ಬದ್ಧಕಂಕಣನಾಗಿರುವೆನು. ನೀವು ಹೇಳುವದೊಂದೇ ಅವಕಾಶವು.

ನನ್ನ ಸೈನ್ಯವು ಅಗ್ನಿಯಲ್ಲಿ ದುಮುಕಲಿಕ್ಕೆ ಸಹ ಸಿದ್ಧವಿರುವದು" ಎಂದು ಗದಾಧರನು ಎದೆತಟ್ಟಿ ಹೇಳಿದನು.

"ಗದಾಧರರೆ, ನಿಮ್ಮ ಸೈನ್ಯವು ಸ್ವಾಮಿನಿಷ್ಠೆಯ ಪರಾಕಾಷ್ಠೆಯನ್ನು ತೋರಿಸಲಿಕ್ಕೆ ಸಿದ್ಧವಾಗಿರುವದೆಂಬುದು ನನಗೆ ಗೊತ್ತಾಗಿದೆ. ನೀವು ನಿಮ್ಮ ಸಿದ್ಧತೆಯಲ್ಲಿರ್ರಿ. ನಾಳಿನ ದಿವಸ ಸಾಯಂಕಾಲಕ್ಕೆ ನಿಮಗೆ ಕೆಲಸ ಹೇಳುವೆನು."

"ರಾಣೀಸರಕಾರ, ನನ್ನನ್ನು ಎಲ್ಲಿಗೆ ಕಳುಹಿಸುವಿರಿ?" ಎಂದು ಕರೀಮುಶಹನು ಕೇಳಿದನು.

"ನಾಳೆ ಸಾಯಂಕಾಲಕ್ಕೆ ಎಲ್ಲ ಸಂಗತಿಯೂ ತಿಳಿಯುವದು."

ಎಲ್ಲ ಜನರು ರಾಣಿಯನ್ನು ಅವಲಂಬಿಸಿದ್ದರಿಂದ ಮಂತ್ರಿಯಾದ ಭೃಗುರಾಮನ ಮನಸ್ಸು ತಿರಸ್ಕಾರ-ಸಂತಾಪಗಳಿಂದ ಯುಕ್ತವಾಯಿತು. ಆಗ ಅವನು ತೀವ್ರಸ್ವರದಿಂದ "ಒಬ್ಬ ಯುವತಿಯ ಅಧೀನರಾಗಿ, ಅವಳು ಹೇಳಿದಂತೆ ಕೇಳುವದು ಎಲ್ಲಿಯ ನ್ಯಾಯವು? ಸ್ತ್ರೀಯರಿಗೆ ರಾಜಕಾರಣವು ಗೊತ್ತಿರುವದಿಲ್ಲ. ಮೊದಲು ದಡ್ಡತನ ಮಾಡಿ, ಹಿಂದಿನಿಂದ ಪಶ್ಚಾತ್ತಾಪಪಡುವ ಪ್ರಸಂಗವೊದಗಬಾರದೆಂದು ವಸ್ತುಸ್ಥಿತಿಯನ್ನು ನಿವೇದಿಸಿರುವೆನು."

ರಾಣಿಗೆ ಭೃಗುರಾಮನ ಮನೋದಯವು ಗೊತ್ತಾಯಿತು. ಅವಳು ಭೃಗುರಾಮನ ಮಾತುಗಳನ್ನುಪೇಕ್ಷಿಸಿ ಅಂದಿನ ಓಲಗವನ್ನು ಮುಗಿಸಿದಳು. ದೀನಕೃಷ್ಣ, ಗದಾಧರ, ಕರೀಮುಶಹ ಇವರ ಹೊರತು ಉಳಿದ ಜನರು ರಾಣಿಯ ನಿರೋಪದ ಮೇರೆಗೆ ತಮ್ಮ ತಮ್ಮ ಮನೆಗೆ ಹೊರಟು ಹೋದರು. ಆಗ ರಾಣಿಯು ಗದಾಧರನನ್ನು ಕುರಿತು:—"ಗದಾಧರರೆ, ನೀವು ಒಂದು ಸಾವಿರ ಕುದುರೆಯ ಸೈನ್ಯದೊಡನೆ ಕಾಳಗಕ್ಕೆ ಸಿದ್ಧರಾಗಿರಿ. ನಾಳೆ ಸಾಯಂಕಾಲಕ್ಕೆ ನೀವು ಇಲ್ಲಿಂದ ಹೊರಡಬೇಕಾಗುವದು. ನಾಳೆ ಮೂರು ಪ್ರಹರಕ್ಕೆ ನನಗೆ ಭೆಟ್ಟಿಯಾಗಿರಿ. ಈಗ ನೀವು ಹೋಗಬಹುದು."

ಗದಾಧರನು ಹೊರಟು ಹೋದ ಮೇಲೆ ರಾಣಿಯು ಕರೀಮುಶಹ,

ನನ್ನು ಕುರಿತು:—"ನೀವಾದರೂ ನಿಮ್ಮ ಸೈನ್ಯದೊಡನೆ ಕಾಳಗಕ್ಕೆ ಸಿದ್ಧರಾಗಿರಿ."

"ರಾಣೀಸರಕಾರ, ನೀವು ನನ್ನನ್ನು ಎಲ್ಲಿಗೆ ಕಳುಹಿಸಬೇಕೆಂದು ಯೋಚಿಸಿರುವಿರಿ?"

"ನಾಳೆ ಸಾಯಂಕಾಲಕ್ಕೆ ತಿಳಿಯುವದು."

"ನಿಮ್ಮ ಅಜ್ಞಯಾದಾಗ ಹೊರಡಲಿಕ್ಕೆ ನನ್ನ ಸಿದ್ಧತೆ ಇರುವದು."

"ಬಹಳೇ ಉತ್ತಮವಾಯಿತು. ನೀವು ನನಗೆ ನಾಳೆ ಮಧ್ಯಾಹ್ನಕ್ಕೆ ಭೆಟ್ಟಿಯಾಗಿರಿ. ಸದ್ಯಕ್ಕೆ ನೀವು ಹೋಗಬಹುದು."

ರಾಣಿಯ ಮಾತಿನ ಮೇರೆಗೆ ಕರೀಮಶಹನು ಓಲಗದಿಂದ ಹೊರಟು ಹೋದನು. ಅನಂತರದಲ್ಲಿ ರಾಣಿಯು ದೀನಕೃಷ್ಣನನ್ನು ಕುರಿತು:—"ನೀವು ನಾಳೆ ಮಧ್ಯಾಹ್ನಕ್ಕೆ ನನಗೆ ಭೆಟ್ಟಿಯಾಗಿರಿ. ಸದ್ಯಕ್ಕೆ ನೂರು ಜನ ಸೈನಿಕರನ್ನು ಕಳುಹಿಸಿಕೊಡಿರಿ. ನಾಯಕನು ಅತ್ಯಂತ ಕರ್ತವ್ಯನಿಷ್ಠನಿರತಕ್ಕ ಪಥಕವನ್ನೇ ಕಳುಹಿಸಿಕೊಡಿರಿ."

ದೀನಕೃಷ್ಣನು ಹೋದ ಮೇಲೆ ರಾಣಿಯು ನಗರಪಾಲನನ್ನು ಕರೆಯುವದಕ್ಕಾಗಿ ಸೇವಕನನ್ನು ಕಳುಹಿಸಿದಳು. ಸ್ವಲ್ಪವೇಳೆಯಲ್ಲಿ ನಗರಪಾಲನು ರಾಣಿಗೆ ಭೆಟ್ಟಿಯಾದನು. ಆಗ ರಾಣಿಯು ಅವನನ್ನು ಕುರಿತು:—"ನಗರಪಾಲರೆ, ನೀವು ಅತ್ಯಂತ ರಾಜನಿಷ್ಠರಿರುವಿರೆಂಬದನ್ನು ನಾನು ಬಲ್ಲೆನು. ನಿಮ್ಮ ಮೇಲೆ ಒಂದು ಮಹತ್ವದ ಕಾರ್ಯವನ್ನು ವಹಿಸುವೆನು. ಅದನ್ನು ನೀವು ಬಹಳೇ ಉತ್ತಮ ರೀತಿಯಿಂದ ನೆರವೇರಿಸತಕ್ಕದ್ದು. ವಿಧಿಸಿದ ಕೆಲಸದಲ್ಲಿ ಲವಲೇಶವಾದರೂ ಹೆಚ್ಚು ಕಡಿಮೆಯಾಗಬಾರದು."

"ನಾನು ನನ್ನ ಕರ್ತವ್ಯವನ್ನು ಅತ್ಯಂತ ನಿಷ್ಠೆಯಿಂದ ಕೊನೆಗಾಣಿಸುವೆನು. ಈ ಮಾತಿನಲ್ಲಿ ತಾವು ಸಂದೇಹ ತೆಗೆದುಕೊಳ್ಳಬಾರದು."

"ನೀವು ನಿಮ್ಮ ಸೈನ್ಯದೊಡನೆ ಕಾಠಜುಡೀತೀರಕ್ಕೆ ಹೋಗಿರಿ. ನೀವು ಅಲ್ಲಿ ಬಿಗಿಯಾಗಿ ಕಾವಲಿರಿಸಬೇಕು. ನದಿಯಾಚೆಯವರನ್ನು ಈಚೆಗೆ ಬರಗೊಡಬಾರದು; ಈಚೆಯವರನ್ನು ಆಚೆಗೆ ಹೋಗಗೊಡ

ಬಾರದು. ಯಾರು ನನ್ನ ರುಜುವಿನ ಆಜ್ಞಾಪತ್ರಿಕೆಯನ್ನು ತರುವರೋ, ಅವರನ್ನು ಪ್ರತಿಬಂಧಿಸಬೇಡಿರಿ. ಯಾರಾದರೂ ಒತ್ತಾಯದಿಂದ ಹೋಗ ಬರುವದನ್ನು ಮಾಡಲಿಕ್ಕೆ ಪ್ರಯತ್ನಿಸಿದರೆ, ಅವರ ಮೇಲೆ ಶಸ್ತ್ರವನ್ನು ಪ್ರಯೋಗಿಸಿರಿ. ನನ್ನ ಈ ಅಪ್ಪಣೆಯನ್ನು ಅಕ್ಷರಶಃ ಪಾಲಿಸತಕ್ಕದ್ದು."

"ತಮ್ಮ ಆಜ್ಞೆಯಂತೆ ನಡೆಯುವೆನು."

"ನದಿಯಲ್ಲಿ ಎಷ್ಟು ನೌಕೆಗಳಿರುವವೋ ಅವೆಲ್ಲವುಗಳನ್ನು ಒಟ್ಟು ಗೂಡಿಸಿ ಕಾವಲಿನ ಜಾಗೆಯಲ್ಲಿರಿಸಿರಿ. ಇನ್ನೊಂದು ಮಹತ್ವದ ಸಂಗತಿಯನ್ನು ನಿಮಗೆ ಹೇಳಬೇಕಾಗಿರುವದು. ಇಂದು ರಾತ್ರಿಯಲ್ಲಿ ಒಬ್ಬ ಮನುಷ್ಯನು ಪತ್ರವನ್ನು ತೆಗೆದುಕೊಂಡು ಮಂತ್ರಿಗೃಹದಿಂದ ಹೊರಬೀಳುವನು. ನೀವು ಅವನನ್ನು ಹಿಡಿದು, ಅವನ ಪತ್ರವನ್ನು ಮೊದಲು ಸ್ವಾಧೀನಕ್ಕೆ ತೆಗೆದುಕೊಳ್ಳಿರಿ. ಅನಂತರದಲ್ಲಿ ಆ ಗುಪ್ತಚರ ನನ್ನು ನನ್ನ ಕಡೆಗೆ ತಗೆದುಕೊಂಡು ಬನ್ನಿ. ಗೊಂದಲವಾಗದಂತೆ ಈ ಕಾರ್ಯವನ್ನು ನೆರವೇರಿಸತಕ್ಕದ್ದು. ಇನ್ನು ನೀವು ತೆರಳಿರಿ."

ನಗರಪಾಲನು ರಾಣಿಯ ಆಜ್ಞೆಯನ್ನು ಪಡೆದು ಹೊರಟು ಹೋದನು. ಅನಂತರದಲ್ಲಿ ಕಾವಲುಗಾರನು ಅಲ್ಲಿಗೆ ಬಂದು—"ಹೊರಗೆ ನೂರು ಜನ ಸೈನಿಕರು ಬಂದಿರುವರು; ಅವರು ತಮ್ಮ ಆಜ್ಞೆಯನ್ನು ಪ್ರತೀಕ್ಷಿಸುತ್ತಿರುವರು' ಎಂದು ಹೇಳಿದನು. ಆಗ ರಾಣಿಯು ಅವನಿಗೆ ಪಥಕದ ನಾಯಕನನ್ನು ಕಳುಹಿಸೆಂದು ಹೇಳಿದಳು. ತರುವಾಯ ಪಥ ಕದ ನಾಯಕನು ಒಲಗವನ್ನು ಪ್ರವೇಶಿಸಿ, ರಾಣಿಗೆ ಅಭಿವಂದಿಸಿ ನಿಂತು ಕೊಂಡನು. ಆಗ ರಾಣಿಯು ಅವನನ್ನು ಕುರಿತು —"ನಿಮ್ಮ ವಯಸ್ಸು ಬಹಳೇ ಚಿಕ್ಕದಿರುವದು."

"ರಾಣೀಸರಕಾರ!" ಪಥಕದ ನಾಯಕನು ಗಂಭೀರತೆಯಿಂದ: "ಬುದ್ಧಿ-ಪರಾಕ್ರಮಗಳು ವಯಸ್ಸನ್ನವಲಂಭಿಸಿರುವದಿಲ್ಲ!"

"ನಿಮ್ಮ ಬಳಿಯಲ್ಲಿ ಎಷ್ಟು ಜನ ಸೈನಿಕರಿರುವರು?

"ನೂರು ಜನರು."

"ಎಲ್ಲರೂ ಚನ್ನಾಗಿ ನುರಿತವರಿರುವರೇನು?"

"ಎಲ್ಲ ಜನರು ಯುದ್ಧ ಕುಶಲರಿರುವರು; ಅಲ್ಲದೆ ಆಜ್ಞಾ ಧಾರಕರೂ ಸ್ವಾಮಿನಿಷ್ಠರೂ ಆಗಿರುವರು. ಈ ವಿಷಯದಲ್ಲಿ ನೀವು ಸಂದೇಹ ಗೊಳ್ಳಬಾರದು. ನನ್ನ ಆಜ್ಞೆಯಾದರೆ ನನ್ನ ಸೈನಿಕರು ಅಜ್ಞಂದಿರಾದ ದೀನಕೃಷ್ಣರ ತಲೆಯನ್ನು ತರಲಿಕ್ಕೆ ಸಹ ಹಿಂಜರಿಯುವದಿಲ್ಲ."

"ನೀವು ದೀನಕೃಷ್ಣ ಸೇನಾಪತಿಗಳ ಮೊಮ್ಮಕ್ಕಳೇನು?"

"ಹೌದು."

"ದೀನಕೃಷ್ಣರ ವಂಶಜರು ಎಂದೂ ಕರ್ತವ್ಯಭ್ರಷ್ಟರಾಗಲಾರರು" ಎಂದು ರಾಣಿಯು ನುಡಿದು, ಪಥಕದ ನಾಯಕನನ್ನು ಕುರಿತು: "ಕಾತಲೂಖಾನನೂ ಬಂಡುಗಾರನಾದ ಜನಾರ್ದನ ಮಂತ್ರಿಯೂ ನದೀ ತೀರದಲ್ಲಿ ತಳವೂರಿ ಕುಳಿತಿರುವರು. ಅವರಿಬ್ಬರ ಸೈನ್ಯಗಳು ಇನ್ನೂ ಕೂಡಿರುವದಿಲ್ಲ. ಅವರಿಬ್ಬರಲ್ಲಿ ಅಂತರವು ಬಹಳ ಇರುವದರಿಂದ ಪರಸ್ಪರರೊಳಗೆ ಪತ್ರವ್ಯವಹಾರವು ಇನ್ನೂ ಆಗಿರಲಿಕ್ಕಿಲ್ಲವೆಂದು ನನಗೆ ತೋರುತ್ತದೆ. ನೀವು ನಿಮ್ಮ ಸೈನ್ಯದೊಡನೆ ಆ ಎರಡು ಸೈನ್ಯಗಳ ಮಧ್ಯಭಾಗಕ್ಕೆ ಹೋಗಿ ಗುಪ್ತವಾಗಿರತಕ್ಕದ್ದು. ಆ ಸೈನ್ಯದೊಳಗಿನ ಗುಪ್ತಚರರ ಚಲನವಲನವನ್ನು ನೀವು ಒಳ್ಳೇ ದಕ್ಷತೆಯಿಂದ ನೋಡತಕ್ಕದ್ದು. ಯಾವನಾದರೊಬ್ಬ ಚಾರನು ಬರ-ಹೋಗುವದು ಕಂಡರೆ, ಅವನನ್ನು ಹಿಡಿದು ಇತ್ತಕಡೆಗೆ ಕಳುಹಿಸತಕ್ಕದ್ದು. ಪ್ರಸಂಗವೊದಗಿದರೆ ಅವನ ಮೇಲೆ ಖಡ್ಗಚಾಲನೆ ಸಹ ಮಾಡತಕ್ಕದ್ದು. ಇನ್ನೊಂದು ಮಹತ್ವದ ಸಂಗತಿಯನ್ನು ನೀವು ಚನ್ನಾಗಿ ಲಕ್ಷ್ಯದಲ್ಲಿಡತಕ್ಕದ್ದು. ಅದೇನಂದರೆ, ನಾಳಿನ ರಾತ್ರಿಯ ಒಂದು ಪ್ರಹರಕ್ಕೆ ನರಾಜದಿಂದ ಯವನ ಸೈನ್ಯವು ಚೌಘುರಕ್ಕೆ ಹೊರಡುವದು. ಆ ವೇಳೆಯಲ್ಲಿ ನೀವು ಮಾರ್ಗವನ್ನು ಬಿಟ್ಟು ದೂರ ಹೋಗತಕ್ಕದ್ದು. ಸೈನ್ಯವು ಚೌಘುರದ ದಾರಿಯನ್ನು ಹಿಡಿದು ಸಾಗಿದ ಬಳಿಕ ನೀವು ನರಾಜದ ಕಡೆಗೆ ಹೋಗಿರಿ. ಹಾದಿಯಲ್ಲಿ ನಿಮಗೆ ಸೇನಾಪತಿಯು ಭೆಟ್ಟಿಯಾಗುವನು. ಅನಂತರ ಅವನ ಆಜ್ಞೆಯ ಮೇರೆಗೆ ನಡೆದುಕೊಳ್ಳಿರಿ"

"ಮಹಾರಾಜ್ಞಿಯವರ ಆಜ್ಞೆಯು ಶಿರಸಾವಂದ್ಯವಾಗಿರುವದು"

ಎಂದು ಪಥಕದ ನಾಯಕನು ನುಡಿದು —"ನದೀಪಾರು ಆಗುವದಕ್ಕಾಗಿ ಆಜ್ಞಾಪತ್ರವು ಬೇಕಾಗುವದು.

"ಓಹೋ, ಅಹುದು. ನಗರಪಾಲನು ಈಗಾಗಲೆ ನನ್ನ ಆಜ್ಞೆಯನ್ನು ಪ್ರಯೋಗದಲ್ಲಿ ತಂದನೆಂಬಂತೆ ತೋರುವದು. ಸ್ವಲ್ಪ ನಿಲ್ಲಿರಿ. ಆಜ್ಞಾಪತ್ರವನ್ನು ಕೊಡುವೆನು." ಎಂದು ರಾಣಿಯು ನುಡಿದು, ಅವನಿಗೆ ಆಜ್ಞಾಪತ್ರಿಕೆಯನ್ನು ಬರೆದು ತನ್ನ ರುಜು ಮಾಡಿ ಕೊಟ್ಟಳು. ಅನಂತರದಲ್ಲಿ ನಾಯಕನು ರಾಣಿಯ ನಿರೋಪವನ್ನು ಹೊಂದಿ ಹೊರಟನು. ತರುವಾಯ ರಾಣಿಯು ಓಲಗದಿಂದ ಹೊರಟೆದ್ದು ತನ್ನ ಚಿತ್ರಾಭುವನಕ್ಕೆ ಬಂದಳು.

ಎರಡು ಪ್ರಹರ ರಾತ್ರಿಯಾಗಿತ್ತು. ರಾಣಿ ವ್ರಜಸುಂದರಿಯು ತನ್ನ ಶಯನಗೃಹದಲ್ಲಿ ವಿಶ್ರಮಿಸಿದ್ದಳು. ಅನೇಕ ಬಗೆಯ ವಿಚಾರಗಳಿಂದ ಅವಳ ಮನಸ್ಸು ಬಹಳ ಚಾಂಚಲ್ಯಹೊಂದಿದ್ದರಿಂದ ಅವಳಿಗೆ ನಿದ್ದೆ ಬರುವಂತಿದ್ದಿಲ್ಲ. ಅವಳು ಅನೇಕ ರೀತಿಯ ವಿಚಾರದಲ್ಲಿ ಮಗ್ನಳಾಗಿ ಮಲಗಿದ್ದಳು. ಅಷ್ಟರಲ್ಲಿ ದಾಸಿಯು ಅಲ್ಲಿಗೆ ಬಂದು, ನಗರಪಾಲರು ನಿಮ್ಮ ಭೆಟ್ಟಿಗಾಗಿ ನಿಂತುಕೊಂಡಿರುವರೆಂದು ತಿಳಿಸಿದಳು. ಕೂಡಲೆ ರಾಣಿಯು ಶಯನಗೃಹದ ಹೊರಗಿನ ಮಂತ್ರಣಾಗಾರಕ್ಕೆ ಬಂದಳು. ನಗರಪಾಲನು ರಾಣಿಗೆ ಅಭಿವಂದಿಸಿ, ಒಂದು ಪತ್ರವನ್ನು ಅವಳ ಕೈಯಲ್ಲಿ ಕೊಟ್ಟನು. ರಾಣಿಯು ಪತ್ರವನ್ನು ತೆಗೆದುಕೊಂಡು:—"ಗುಪ್ತಚರನನ್ನು ಕಾರಾಗೃಹದಲ್ಲಿರಿಸಿರುವಿರೇನು?"

"ಇರಿಸಿರುವೆವು."

"ಅವನು ಏನು ಹೇಳಿದನು?"

"ಭೃಗುರಾಮ ಮಂತ್ರಿಗಳು ಪತ್ರಕೊಟ್ಟು ಜನಾರ್ದನರ ಕಡೆಗೆ ತನ್ನನ್ನು ಕಳುಹಿಸಿದ್ದರೆಂದು ಅವನು ಹೇಳಿದನು."

"ಅಂತೂ ನಾನು ಹೇಳಿದಂತೆ ಎಲ್ಲ ಸಂಗತಿಗಳು ಘಟಿಸಿದವೆಂದಂತಾಯಿತು."

"ಸರಕಾರ, ನಿಜವು. ನೀವು ಹೇಳಿದ ಮೇರೆಗೆ ಎಲ್ಲ ಘಟನೆಗಳೂ ನಡೆದವು."

"ನಿಮ್ಮ ಬಳಿಯಲ್ಲಿ ಎಷ್ಟು ಸೈನ್ಯವಿರುವದು?"

"ನಾಲ್ಕೈದು ಸಾವಿರ ಸೈನ್ಯವಿದೆ"

'ನೀವು ನಿಮ್ಮ ಬಳಿಯಲ್ಲಿದ್ದ ಎಲ್ಲ ಸೈನ್ಯವನ್ನು ತೆಗೆದುಕೊಂಡು ನದೀತೀರದಲ್ಲಿರತಕ್ಕದ್ದು. ದುರ್ಗದಿಂದ ನಿಮಗೆ ಸಹಾಯವು ದೊರೆಯುತ್ತ ಹೋಗುವದು. ನದೀ ತೀರದಲ್ಲಿ ಒಂದೇ ಸ್ಥಳದಲ್ಲಿ ಸೈನ್ಯವಿರಿಸದೆ, ನಾಲ್ಕಾರು ಹರದಾರಿಗಳ ವರೆಗೆ ಒಳ್ಳೇ ಯುಕ್ತಿಯಿಂದ ಸೈನ್ಯವನ್ನಿರಿಸತಕ್ಕದ್ದು. ಎಲ್ಲ ಸೈನ್ಯವು ನದೀ ತೀರವನ್ನು ಬಿಟ್ಟು ದೂರ ಹೋಗಲಿಕ್ಕಾಗದು."

"ತಮ್ಮ ಆಜ್ಞೆಯ ಮೇರೆಗೆ ವ್ಯವಸ್ಥೆ ಮಾಡುವೆನು. ಯಾವ ನದೀತೀರದಲ್ಲಿ ಸೈನ್ಯವಿರಿಸಬೇಕು?"

"ಕಾಠಜುಡಿಯ ತೀರದಲ್ಲಿ."

"ಸೈನ್ಯಕ್ಕೆ ಕೆಲಸವೇನು?"

"ಅದನ್ನು ನಾನು ನಾಳೆಗೆ ತಿಳಿಸುವೆನು. ಸದ್ಯಕ್ಕೆ ಜನರ ಓಡಾಟಕ್ಕೆ ಪ್ರತಿಬಂಧ ಮಾಡತಕ್ಕದ್ದು. ನನ್ನ ಆಜ್ಞಾಪತ್ರವಿದ್ದವರನ್ನು ಮಾತ್ರ ಪ್ರತಿಬಂಧಿಸಕೂಡದು."

ರಾಣಿಯ ವಾಕ್ಚಾತುರ್ಯವನ್ನೂ ಕಾರ್ಯಪದ್ಧತಿಯನ್ನೂ ನೋಡಿ ನಗರಪಾಲನು ದಿಗಿಲು ಬಡೆದು ಅಲ್ಲಿಂದ ಹೊರಟು ಹೋದನು. ಅನಂತರದಲ್ಲಿ ರಾಣಿಯು ನಗರಪಾಲನು ತಂದು ಕೊಟ್ಟ ಪತ್ರವನ್ನು ಓದತೊಡಗಿದಳು.

"ಶ್ರೀಮಾನ್ ಜನಾರ್ದನ ಮಂತ್ರಿಗಳಿಗೆ—

ತಮ್ಮ ಭೃಗುರಾಮ ಮಂತ್ರಿಯ ವಿಜ್ಞಾಪ್ತಿಯೇನಂದರೆ:—

ನಾಳಿನ ದಿವಸ ರಾತ್ರಿಯಲ್ಲಿ ಬಂಗಾಲೀ ಸೇನಾಪತಿಯಾದ ಗದಾಧರನು ನಿಮ್ಮ ಮೇಲೆ ದಂಡೆತ್ತಿ ಬರುವನು. ನೀವು ನಿಮ್ಮ ಸಿದ್ಧತೆಯಲ್ಲಿರಬೇಕು. ಕಾತಲೂಖಾನನು ನರಾಜದಲ್ಲಿ ತಳವೂರಿರುವನು. ನೀವು ಅವನನ್ನು ಕೂಡಿಕೊಳ್ಳಿರಿ. ರಾಜ್ಯವು ನಿಮ್ಮದೇ ಎಂದು ತಿಳಿಯುತಿಕ್ಕೆ ಏನೂ ಪ್ರತ್ಯವಾಯವಿಲ್ಲ.

ತಮ್ಮ ಹಿತಚಿಂತಕ,

ಅಮಾತ್ಯ ಭೃಗುರಾಮ."

"ಹೊಸ ಸಂಗತಿ:—ರಾಜ್ಯವು ನಿಮ್ಮದು; ಬಂಗಾಲೀ ತರುಣಿಯು ಮಾತ್ರ ನನ್ನವಳು!

ಭೃಗುರಾಮ"

ಪತ್ರವನ್ನೋದಿದೊಡನೆಯೆ ರಾಣಿಯ ಮುಖಮಂಡಲವು ಸಂತಾಪಾತಿರೇಕದಿಂದ ಆರಕ್ತವಾಯಿತು. "ಭೃಗುರಾಮ! ಬಹಳೇ ಉತ್ತಮವಾಯಿತು! ಈ ಬಂಗಾಲೀ ತರುಣಿಯನ್ನು ನಿನ್ನವಳನ್ನಾಗಿ ಮಾಡಿಕೊಳ್ಳುವೆಯಾ? ಆಗಲಿ, ನೋಡುವೆನು!" ಎಂಬ ಉದ್ಗಾರವು ಅವಳ ಮುಖದಿಂದ ಹೊರಟಿತು. ಅನಂತರದಲ್ಲಿ ಅವಳು ಪತ್ರದೊಳಗಿನ ಹೊಸ ಸಂಗತಿಯಿದ್ದ ಕಾಗದವನ್ನಷ್ಟು ಹರಿದು, ಉಳಿದ ಭಾಗವನ್ನು ಸುವ್ಯವಸ್ಥೆಯಿಂದಿರಿಸಿದಳು. ಅಷ್ಟರಲ್ಲಿ ಒಬ್ಬ ದಾಸಿಯು ಅವಳ ಬಳಿಗೆ ಬಂದು—"ರಾಣೀಸರಕಾರ, ಗುಪ್ತಚರರು ತಮ್ಮನ್ನು ಕಾಣುವದಕ್ಕಾಗಿ ಬಂದಿರುವರು" ಎಂದು ಹೇಳಿದಳು. ಆಜ್ಞಾಪತ್ರವನ್ನು ಪಡೆಯುವದಕ್ಕಾಗಿ ಅವರು ಬಂದಿರುವರೆಂಬದು ರಾಣಿಗೆ ಗೊತ್ತಾಗಿ, ನಗರಪಾಲನ ಕರ್ತವ್ಯನಿಷ್ಠೆಯನ್ನು ಚನ್ನಾಗಿ ಶ್ಲಾಘನೆ ಮಾಡಿದಳು. ಆಗ ಅವಳು ಗುಪ್ತಚರರನ್ನು ಕಳುಹಿಸಬೇಕೆಂದು ದಾಸಿಗೆ ತಿಳಿಸಿದಳು. ಪರಕ್ಷಣದಲ್ಲಿ ಹತ್ತು-ಹದಿನೈದು ಜನ ಚಾರರು ಬಂದು, ರಾಣಿಗೆ ನಮಸ್ಕರಿಸಿ, ಆಜ್ಞಾಪತ್ರವು ದೊರೆಯಬೇಕೆಂದು ಬೇಡಿಕೊಂಡರು. ಆಗ ರಾಣಿಯು ಆ ಚರರೊಳಗಿನ ನಟವರ-ದ್ವಿಜವರರೆಂಬ ಇಬ್ಬರನ್ನು ಇಟ್ಟುಕೊಂಡು, ಉಳಿದವರಿಗೆ ಆಜ್ಞಾಪತ್ರ ಕೊಟ್ಟು ಕಳುಹಿಸಿದಳು. ರಾಣಿಯು ದ್ವಿಜವರನನ್ನು ಮಂತ್ರಣಾಗಾರದಲ್ಲಿದ್ದ ಒಂದು ಕೋಣೆಯಲ್ಲಿ ಕರೆದೊಯ್ದು, ಭೃಗುರಾಮನು ಜನಾರ್ದನ ಮಂತ್ರಿಗೆ ಬರೆದ ಪತ್ರವನ್ನು ಅವನ ಕೈಯಲ್ಲಿ ಕೊಟ್ಟಳು. ದ್ವಿಜವರನು ಪತ್ರವನ್ನೋದಿ ವಿಸ್ಮಯದಿಂದ—"ರಾಣೀಸರಕಾರ, ಈ ಪತ್ರವನ್ನು ಯಾರಿಗೆ ತಲುಪಿಸಬೇಕು?"

"ಜನಾರ್ದನ ಮಂತ್ರಿಗೆ; ಅವನು ಈಗ ಚೌಘರದಲ್ಲಿರುವನು."

"ಈ ಪತ್ರವು ಅವನಿಗೆ ತಲುಪುವದರಿಂದ ಅನಿಷ್ಟವೊದಗುವದಿಲ್ಲವೆ?"

"ಈ ವಿಷಯದಲ್ಲಿ ನೀನು ಈಗ ಹೆಚ್ಚಿನ ಚಿಕಿತ್ಸೆ ಮಾಡಬೇಡ. ಕಾರ್ಯಾನಂತರದಲ್ಲಿ ನಿನಗೆ ಎಲ್ಲ ಸಂಗತಿಗಳೂ ತಿಳಿಯುವವು." ಎಂದು ವ್ರಜರಾಣಿಯು ನುಡಿದು, ಅವನಿಂದ ಒಂದು ಪತ್ರವನ್ನು ಬರೆಯಿಸಿದಳು.

"ಮಹಾ ಪರಾಕ್ರಮಿಗಳೂ ರಣಧುರಂಧರರೂ ಆದ ದೀನಕೃಷ್ಣ ರಾಯ ಸೇನಾಪತಿಗಳಿಗೆ:—

ನೀವು ಬಂಡುಗಾರನಾದ ಜನಾರ್ದನನನ್ನು ಪರಾಭವಗೊಳಿಸಿದ ಸಂಗತಿಯನ್ನು ಕೇಳಿ ಆನಂದವಾಯಿತು. ನೀವು ರಾಜಧಾನಿಗೆ ಬರದೆ ಚೌಘರದಲ್ಲೇ ಇರಬೇಕು. ನಾಳೆ ರಾತ್ರಿಯಲ್ಲಿ ನಿಮ್ಮ ಸಹಾಯಕ್ಕಾಗಿ ಗದಾಧರ ಸೇನಾಪತಿಗಳನ್ನು ಕಳುಹಿಸುವೆನು ಅನಂತರದಲ್ಲಿ ನರಾಜದಲ್ಲಿ ತಳವೂರಿದ್ದ ಕಾತಲೂಖಾನನ ಮೇಲೆ ಸಾಗಿ ಹೋಗತಕ್ಕದ್ದು. ರಾಜಧಾನಿಯಲ್ಲಿ ಇಪ್ಪತ್ತೈದುಸಾವಿರ ಸೈನ್ಯವಿರುವದರಿಂದ ನೀವು ಇಲ್ಲಿಯ ಆಲೋಚನೆ ಮಾಡಬಾರದು,

ರಾಣೀ ವ್ರಜಸುಂದರಿದೇವಿ"

ದ್ವಿಜವರನಿಂದ ಈ ಮೇರೆಗೆ ಪತ್ರವನ್ನು ಬರೆಯಿಸಿ, ರಾಣಿಯು ಅದನ್ನು ತನ್ನ ಕಡೆಗೆ ತೆಗೆದುಕೊಂಡಳು. ಜನಾರ್ದನ ಮಂತ್ರಿಗೆ ತಲುಪಿಸತಕ್ಕ ಪತ್ರವನ್ನು ಒಳ್ಳೆಯ ಜಾಗ್ರತೆಯಿಂದಲೂ ತ್ವರೆಯಿಂದಲೂ ತಲುಪಿಸಬೇಕೆಂದು ಅವಳು ದ್ವಿಜವರನಿಗೆ ಹೇಳಿ, ಅವನಿಗೆ ನಿರೋಪ ಕೊಟ್ಟಳು. ಅನಂತರದಲ್ಲಿ ಹೊರಗೆ ಬಂದು ನಟವರನ ಕೈಯಲ್ಲಿ ದ್ವಿಜವರನು ಬರೆದ ಪತ್ರವನ್ನು ಕೊಟ್ಟು, ಆ ಪತ್ರವನ್ನು ಕಾತಲೂಖಾನನ ವಶಕ್ಕೆ ಕೊಡಬೇಕೆಂದು ಹೇಳಿದಳು. ಆಗ ನಟವರನು ವಿಸ್ಮಿತನಾಗಿ:—"ಈ ಪತ್ರವನ್ನು ನಾನು ಒಯ್ದು ಕಾತಲೂಖಾನನಿಗೆ ಕೊಟ್ಟರೆ ಅವನು ಪತ್ರವನ್ನು ನಂಬುವನೆ?"

"ನೀನು ಮಾರ್ಗ ತಪ್ಪಿ ಪಠಾಣರ ಶಿಬಿರಕ್ಕೆ ಹೋದಂತೆ ಮಾಡಬೇಕು. ಅಲ್ಲಿಯ ಗುಪ್ತಚರರಿಗೂ ಸೈನಿಕರಿಗೂ ಸಂಶಯ ಹುಟ್ಟುವಂತೆ ವರ್ತಿಸಬೇಕು. ನೀನು ಶತ್ರುಗಳ ಕಡೆಯ ಗುಪ್ತಚರನಿರುವೆಯೆಂಬದು ಕಾತಲೂಖಾನನ ಜನರಿಗೆ ಗೊತ್ತಾದ ಮೇಲೆ, ಅವರು ನಿನ್ನ

ಶೋಧನೆ ಮಾಡಿ ಪತ್ರವನ್ನೂ ನಿನ್ನನ್ನೂ ಖಾನನ ಬಳಿಗೆ ಒಯ್ಯುವರು. ಪ್ರಸಂಗವು ಜೀವದ ಮೇಲಿನದಿದ್ದರೂ, ನೀನು ಇದನ್ನು ಈಡೇರಿಸಬೇಕು. ಯುದ್ಧದ ಗೊಂದಲವು ನಡೆದಾಗ ನಿನಗೆ ಅಲ್ಲಿಂದ ಪಾರಾಗಲಿಕ್ಕೆ ಮಾರ್ಗವು ದೊರೆಯಬಹುದಾಗಿದೆ. ಒಳ್ಳೆಯ ಯುಕ್ತಿಯಿಂದ ಕಾರ್ಯಸಾಧನೆ ಮಾಡಬೇಕು-ಕಂಡೆಯಾ?''

ನಟವರನು ಧೂರ್ತನಿದ್ದನು. ಅವನಿಗೆ ಪಾತಾಳಯಂತ್ರಿಯಾದ ರಾಣಿಯ ಅದ್ಭುತವಾದ ರಾಜಕಾರಣದ ಮರ್ಮವು ತಕ್ಕಮಟ್ಟಿಗೆ ಹೊಳೆಯಲಾರಂಭಿಸಿತು. ಸ್ವಾಮಿಕಾರ್ಯಕ್ಕಾಗಿಯೂ ರಾಷ್ಟ್ರಹಿತಕ್ಕಾಗಿಯೂ ತನ್ನ ಜೀವವು ಹೋದರೂ ಹಿಂಜರಿಯುವದಿಲ್ಲವೆಂದು ನಟವರನು ರಾಣಿಗೆ ಹೇಳಿ, ಅವಳ ನಿರೋಪವನ್ನು ಪಡೆದು ಚಿತ್ರಭುವನದಿಂದ ಹೊರಟನು.

---

## ಕಾರಾಗೃಹದ ಪಾರಿತೋಷಕ.

ಪ್ರಖ್ಯಾತ ಸೇನಾಪತಿಯಾದ ಕಾತಲೂಖಾನನು ನರಾಜದ ಬಳಿಯಲ್ಲಿ ತನ್ನ ಸೈನ್ಯದೊಡನೆ ಬೀಡುಬಿಟ್ಟಿದ್ದನು. ಅವನ ಶಿಬಿರವು ಕಾಠಜೂಡಿಯ ತೀರದಲ್ಲಿತ್ತು. ನದಿಗೆ ಸೇತುವೆಯನ್ನು ಕಟ್ಟಿದ ಹೊರತು ಅವನ ಅಪಾರವಾದ ಸೈನ್ಯವು ನದೀಪಾರ ಆಗುವಂತಿದ್ದಿಲ್ಲ. ಅಲ್ಲಿ ನದೀ ಪಾತ್ರವು ಆಕುಂಚಿತವಿದ್ದುದರಿಂದ ಸೈನ್ಯವು ದಾಟುವ ಮಟ್ಟಿಗೆ ಕಟ್ಟಿಗೆಯ ಸೇತುವೆಯನ್ನು ಮಾಡಿಸಬೇಕೆಂದು ಸೇನಾಪತಿಯು ಯೋಚಿಸಿದನು. ಇಷ್ಟರಲ್ಲಿಯೆ ಕೆಲಸವು ಪ್ರಾರಂಭವಾಯಿತು. ಅಂದು ಸೇತುವೆಯನ್ನು ಕಟ್ಟುವ ಕೆಲಸವು ಮುಗಿಯಬೇಕೆಂದು ಅವನು ತನ್ನ ಕೈ ಕೆಳಗಿನ ಅಧಿಕಾರಿಗೆ ಕಟ್ಟಪ್ಪಣೆ ಮಾಡಿದ್ದನು. ಸೇತುವೆಯು ಮುಗಿಯುವ ವರೆಗೆ ಏನೂ ಕೆಲಸವಿಲ್ಲದ್ದರಿಂದ ಕಾತಲೂಖಾನನು ತನ್ನ ರಾಹುಟಿಯಲ್ಲಿ ವಿಶ್ರಾಂತಿ ಪಡೆಯತೊಡಗಿದ್ದನು. ಅವನು ಶೂರನಿದ್ದಂತೆ ವಿಲಾಸಿಯೂ ಆಗಿದ್ದನು. ಸುಂದರಿ, ಸುಗಂಧ, ಸರಬತ್ತು, ಸರಾಯಿ ಮೊದಲಾದವುಗಳಿಗೆ ಅವನು ಮೆಚ್ಚಿದ್ದನು. ಅವನು ದಂಡಯಾತ್ರೆಗೆ ಹೊರಡುವಾಗ ನರ್ತಕಿಯರನ್ನೂ

ಗಾಯಕರನ್ನೂ ಸಂಗಡ ಒಯ್ಯುತ್ತಿದ್ದನು. ಕೆಲಸವಿಲ್ಲದಾಗ ಅವನು ನೃತ್ಯಗೀತಗಳಲ್ಲಿಯೂ ವಿಲಾಸದಲ್ಲಿಯೂ ಕಾಲಕಳೆಯುತ್ತಿದ್ದನು. ಬಹುತರವಾಗಿ ಮುಸಲಮಾನರು ರಮಣೀ ಸೌಂದರ್ಯಕ್ಕೆ ಮುಗ್ಧರಾಗುವಂಥವರಾಗಿದ್ದರೂ, ಕರ್ತವ್ಯವಿಮುಖರಾಗಿ ಕೇವಲ ಸ್ತ್ರೀಲಂಪಟರಾಗುತ್ತಿದ್ದಿಲ್ಲ. ಮುಸಲಮಾನ ರಾಜಸತ್ತಾಕಾಲೀನ ಇತಿಹಾಸವನ್ನು ನೋಡಿದರೆ ಈ ಮಾತಿನ ಸತ್ಯತೆಯು ಕಂಡುಬರುವದು. ರಾಜನಿರಲಿ, ಮಂತ್ರಿಯಿರಲಿ, ಸೇನಾಪತಿ-ಸರದಾರರಿರಲಿ, ಯಾವ ಅಧಿಕಾರಿಗಳೇ ಇರಲಿ; ಅವರು ಬಹುತರವಾಗಿ ವಿಲಾಸಪ್ರಿಯರಿರುತ್ತಿದ್ದರು. ಪ್ರತಿಯೊಬ್ಬರಿಗೆ ಬಹು ಜನ ಸ್ತ್ರೀಯರಿರುತ್ತಿದ್ದು, ಅವರ ಜನಾನಖಾನೆಯು ಬಹಳೇ ವಿಸ್ತಾರವಾದದ್ದಿರುತ್ತಿತ್ತು. ಅವರು ವಿಲಾಸಶಯ್ಯೆ ಮಾಡಲಿಕ್ಕೆ ಉತ್ಸುಕರಾಗಿರುವಂತೆ, ಧಾರಾತೀರ್ಥದಲ್ಲಿ ಮೃತ್ಯುಶಯ್ಯೆ ಮಾಡಲಿಕ್ಕಾದರೂ ಆತುರಗೊಂಡವರಿರುತ್ತಿದ್ದರು. ವಿಲಾಸಭುವನದಲ್ಲಿಯ ವಿಲಾಸ ಸಾಧನ ಸಾಮಗ್ರಿಗಳ ಜೊತೆಗೆ ಮಾನವ ಸಂಹಾರಕ ಶಸ್ತ್ರಾಸ್ತ್ರಗಳಾದರೂ ಇರುತ್ತಿದ್ದವು ಅವರು ವಿಲಾಸಿಗಳಿದ್ದಂತೆ ಶಕ್ತಿಸಂಪನ್ನರೂ ಆಗಿರುತ್ತಿದ್ದರು. ಸುಂದರ ಲಲನೆಯರ ಪ್ರೇಮರಸದಲ್ಲಿ ಅವರು ಹೇಗೆ ತಲ್ಲೀನತೆಯನ್ನು ಹೊಂದುತ್ತಿದ್ದರೋ, ಹಾಗೆಯೆ ಸಂಗ್ರಾಮದಲ್ಲಿ ಶತ್ರುಗಳೊಡನೆ ಕಾದುವಾಗ ವೀರರಸದಲ್ಲಿ ಲೀನರಾಗುತ್ತಿದ್ದರು. ಶಿಬಿರದಲ್ಲಿ ವಿಲಾಸಮಗ್ನರಾಗಿರುತ್ತಿದ್ದ ಯುವನ ವೀರರು ರಣದಲ್ಲಿ ಜೀವದ ಪರಿವೆಯಿಲ್ಲದೆ ಕಾದುತ್ತ ಅರಿಗಳಿಗೆ ಕರಾಲರೂಪಿಯಾಗಿ ಕಾಣುತ್ತಿದ್ದರು. ವಿಲಾಸಪ್ರಿಯತೆಯೂ ಪರಾಕ್ರಮವೂ ಪರಸ್ಪರ ವಿರೋಧಿಗಳಾಗಿದ್ದರೂ, ರಾಜಕರ್ತರಾದ ಯುವನರಲ್ಲಿ ಆವೆರಡೂ ಗುಣಗಳು ವಾಸವಾಗಿದ್ದವು. ಕರ್ತವ್ಯನಿಷ್ಠರಾದ ಯುವನ ನರಪುಂಗವರು ಪ್ರಸಂಗದಲ್ಲಿ ವಿಲಾಸವನ್ನು ಪೂರಾ ಮರೆತು ಯುದ್ಧಕಾರ್ಯವನ್ನು ಜರುಗಿಸುತ್ತಿದ್ದುದರಿಂದ ಅವರ ಆಳಿಕೆಯು ಹಿಂದುಸ್ತಾನದಲ್ಲಿ ಬಹು ಕಾಲ ಬಾಳಿತು. ಮನುಷ್ಯನು ಕರ್ತವ್ಯಜಾಗೃತನಾಗಿರುತ್ತಿದ್ದರೆ ಅವನಿಗೆ ಅವನತಿಯೆಲ್ಲಿ?

ಕಾತಲೂಖಾನನು ತನ್ನ ರಾವುಟಿಯಲ್ಲಿ ಕುಳಿತಿದ್ದನು. ನರ್ತಕಿ

ಯರು ಮಂಜುಳವಾದ ಸ್ವರದಿಂದ ಹಾಡುತ್ತ ನರ್ತನಮಾಡಹತ್ತಿದ್ದರು. ಖಾನನು ಇಂಪಾದ ಗಾಯನವನ್ನು ಕೇಳುತ್ತ ಸುಗಂಧಿತವಾದ ಮದ್ಯ ವನ್ನು ಕುಡಿಯಹತ್ತಿದ್ದನು. ಅವನ ಉಚ್ಚಾಸನದ ಎಡಬಲಗಳಲ್ಲಿ ಇಬ್ಬರು ಲಾವಣ್ಯಲತಿಕೆಯರು ಪನ್ನೀರಿನಲ್ಲಿ ತೋಯಿಸಿದ ಬಾಳದ ಬೇರಿನ ಬೀಸಣಿಕೆಗಳಿಂದ ಗಾಳಿಹಾಕಹತ್ತಿದ್ದರು. ಕೆಲವು ವೇಳೆಯ ವರೆಗೆ ಗಾಯನ-ನರ್ತನಗಳು ನಡೆದ ಬಳಿಕ ಒಬ್ಬ ದೂತನು ಸೇನಾಪತಿಯ ಬಳಿಗೆ ಬಂದು ನೆಲಮುಟ್ಟಿ ಮುಜುರೆ ಮಾಡಿ:—"ಖಾನಸಾಹೇಬರೆ, ಶತ್ರುಗಳ ಕಡೆಯ ಇಬ್ಬರು ಗುಪ್ತಚರರು ಸಿಕ್ಕಿರುವರು."

"ಏನು? ನನ್ನ ಶಿಬಿರದಲ್ಲಿ ಶತ್ರುಗಳ ಗುಪ್ತಚರರು ಬಂದರೆ? ಅವ ರನ್ನು ಕರೆದುಕೊಂಡು ಬಾ."

ದೂತನು ಸೇನಾಪತಿಯ ಆಜ್ಞೆಯ ಮೇರೆಗೆ ಗುಪ್ತಚರರನ್ನು ಕರೆದುಕೊಂಡು ಬಂದನು. ಅವರಲ್ಲಿ ಒಬ್ಬಳು ಸ್ತ್ರೀಯಿದ್ದಳು. ಗುಪ್ತ ಚರರನ್ನು ಸೆರೆಹಿಡಿದು ತಂದ ಕೊತವಾಲನು ಅವರ ಬಳಿಯಲ್ಲಿ ದೊರೆತ ಪತ್ರವನ್ನು ಸೇನಾಪತಿಯ ಕೈಯಲ್ಲಿ ಕೊಟ್ಟನು. ಪತ್ರವು ಉತ್ಕಲ ಭಾಷೆಯಲ್ಲಿ ಬರೆದದ್ದಾಗಿದ್ದು, ಆ ಭಾಷೆಯು ಕೌತಲೂಖಾನನಿಗೆ ಅಪರಿ ಚಿತವಾಗಿತ್ತು. ಆಗ ಖಾನನು ಆ ಪತ್ರವನ್ನು ತನ್ನ ಸರದಾರನಾದ ಕಾಸಿಮಖಾನನ ಕಡೆಗೆ ಕೊಟ್ಟನು. ಕಾಸಿಮಖಾನನಿಗೆ ಉತ್ಕಲ ಭಾಷೆ ಯು ಚನ್ನಾಗಿ ಬರುತ್ತಿದ್ದುದರಿಂದ ಅವನು ಪತ್ರವನ್ನೋದಿಕೊಂಡು ಅದರೊಳಗಿನ ಎಲ್ಲ ಸಂಗತಿಗಳನ್ನು ಖಾನನಿಗೆ ತಿಳಿಸಿದನು. ಕೂಡಲೆ ಗುಪ್ತಚರನು ಕೈಜೋಡಿಸಿ ಖಾನನನ್ನು ಕುರಿತು:—

"ಖಾವಿಂದ, ನನಗೆ ಈ ಪತ್ರದ ವಿಷಯದಲ್ಲಿ ಏನೂ ಗೊತ್ತಿರು ವದಿಲ್ಲ."

"ನೀನು ಪತ್ರವನ್ನು ತೆಗೆದುಕೊಂಡು ಎಲ್ಲಿಗೆ ಹೊರಟಿದ್ದೆ?"

"ಹುಜೂರ, ಇದಾದರೂ ನನಗೆ ಗೊತ್ತಿಲ್ಲ."

"ಇದನ್ನು ನಿನ್ನ ಕಡೆಗೆ ಯಾರು ಕೊಟ್ಟರು? ಯಾರಿಗೆ ಮುಟ್ಟಿಸು ವದಕ್ಕಾಗಿ ಕೊಟ್ಟರು?"

“ಗರೀಬಪರವರದಿಗಾರ, ನಾನು ಈ ವಿಷಯಗಳಲ್ಲಿ ತೀರ ಅಜ್ಞನಿರುವೆನು.”

“ನಿನಗೆ ಗೊತ್ತಿಲ್ಲವೊ? ಎಲೋ, ಇವನನ್ನು ಚನ್ನಾಗಿ ತಳಿಸಿ ಬುದ್ಧಿಗಲಿಸಿರಿ” ಎಂದು ಖಾನನು ಆಜ್ಞಾ ಮಾಡಿದೊಡನೆಯೆ ಆ ಚರನು “ಅಯ್ಯೋ! ಸತ್ತೆನು! ಸತ್ತೆನು!” ಎಂದು ಚೀರುತ್ತ ಭೂಮಿಗೆ ಬಿದ್ದು ಹೊರಳಾಡತೊಡಗಿದನು. ಆಗ ಅವನ ಬಳಿಯಲ್ಲಿದ್ದ ಸ್ತ್ರೀಯು ಮುಂದೆ ಬಂದು “ಖಾವಿಂದ, ಶಾಂತರಾಗಿರಿ. ನಾನು ಎಲ್ಲ ಸಂಗತಿಯನ್ನು ಹೇಳುತ್ತೇನೆ. ಇವನು ನನ್ನ ಪತಿಯಿರುವದರಿಂದ ಇವನನ್ನು ಹೊಡೆಯುವದನ್ನು ನಾನು ನೋಡಲಾರೆನು.”

“ನಿನಗೆ ಎಲ್ಲ ಸಂಗತಿಗಳು ತಿಳಿದಿರುವವೆ? ಹೇಳು ಹಾಗಾದರೆ!” ಎಂದು ಕಾತಲೂಖಾನನು ದರ್ಪೋಕ್ತಿಯಿಂದ ನುಡಿದನು.

“ಬಾದಶಹರೆ, ಇವನು ನನ್ನ ಪತಿಯು. ಇವನ ಹೆಸರು ನಟವರನೆಂದಿರುವದು. ನನ್ನ ಹೆಸರು ಲಲಾಟಿಯು. ನನ್ನ ಲಲಾಟದಲ್ಲಿ ಇಂತಹ ದುಷ್ಟ ಪತಿಯು ದೊರೆಯಬೇಕೆಂದು ವಿಧಿಯು ಬರಹವಿದ್ದುದರಿಂದ ನಾನು ಇವನನ್ನು ವರಿಸಿದೆನು. ಇವನು ಕಡು ದುಷ್ಟನೂ ಕಲಹಾರ್ಥಿಯೂ—”

“ನಿನ್ನ ಆತ್ಮವೃತ್ತವನ್ನು ಸಾಕು ಮಾಡು. ಮುಖ್ಯ ಸಂಗತಿಗಳನ್ನಷ್ಟು ನನಗೆ ತಿಳಿಸು.”

“ಅವಸರ ಪಡಬೇಡಿರಿ. ನಾನು ಹೇಳುವ ಸಂಗತಿಯು ಮುಖ್ಯವಾದದ್ದೇ ಇರುವದು. ಸದ್ಯಕ್ಕೆ ಒಬ್ಬ ಬಂಗಾಲೀ ಸ್ತ್ರೀಯು ರಾಜ್ಯಕಾರಭಾರ ನೋಡುತ್ತಿರುವಳಷ್ಟೆ? ಇವನು ಅವಳ ಬಳಿಯಲ್ಲಿ ಗುಪ್ತಚರರ ಕೆಲಸ ಮಾಡುತ್ತಿರುವನು. ಇವನು ಮನೆ ಹಿಡಿದುಕೊಂಡಿರಬೇಕೆಂದು ನಾನು ಬಹಳೇ ಯತ್ನಿಸಿದೆನು; ಆದರೆ ನನ್ನ ಪ್ರಯತ್ನಕ್ಕೆ ಯಶವು ದೊರೆಯಲಿಲ್ಲ. ಕಡೆಗೆ ರಾಣಿಯ ಬಳಿಗೆ ಹೋಗಿ ನಾನು ಅವಳಿಗೆ ಬೇಡಿಕೊಂಡೆನು. ಪತಿಯು ದುರ್ಮಾರ್ಗಿಯಿರುವದರಿಂದ ಅವನನ್ನು ನಿಮ್ಮ ಕೆಲಸದಿಂದ ಕಡಿಮೆ ಮಾಡಿಬಿಟ್ಟರೆ ಪುಣ್ಯಬರುವದೆಂದು

ನಾನು ಬಹು ಪರಿಯಾಗಿ ಬೇಡಿಕೊಂಡಿದ್ದರಿಂದ ರಾಣಿಯು ನನ್ನಲ್ಲಿ ದಯವುಳ್ಳವಳಾದಳು. ಆಗ ಅವಳು ಒಂದು ಪತ್ರವನ್ನು ನನ್ನ ಪತಿಯ ಬಳಿಯಲ್ಲಿ ಕೊಟ್ಟು, ಅದನ್ನು ಚೌಘರದಲ್ಲಿ ಬೀಡು ಬಿಟ್ಟಿದ್ದ ತನ್ನ ವಿಜಯೀ ಸೇನಾಪತಿಯಾದ ದೀನಕೃಷ್ಣನಿಗೆ ಕೊಡಬೇಕೆಂದು ಹೇಳಿದಳು. ಪತ್ರವನ್ನು ಚೌಘರಕ್ಕೆ ತಲುಪಿಸಿದ ಮೇಲೆ ಢಾಕಾದಲ್ಲಿಗೆ ಹೋಗಬೇಕೆಂದು ಅವಳು ಆಜ್ಞಾಪಿಸಿದ್ದಳು. ನಾನು ನನ್ನ ಪತಿಯಾದ ಇವನೊಡನೆ ಚೌಘರಕ್ಕೆ ಹೋಗಲಿಕ್ಕೆ ಸಿದ್ಧಳಾದೆನು; ಆದರೆ ಇವನು ನನ್ನನ್ನು ಅಲ್ಲಿಗೆ ಬರಬೇಡವೆಂದು ಹೇಳತೊಡಗಿದನು. ಕಡೆಗೆ ಇವನು ಖಂಡಿತನ ಮಾಡಿ:—

ನಿನ್ನನ್ನು ನಿನ್ನ ತವರೂರಿಗೆ ಕಳುಹಿಸಿಯೇ ನಾನು ಚೌಘರಕ್ಕೆ ಹೋಗುವೆನು. ಅಲ್ಲಿ ಪತ್ರ ಮುಟ್ಟಿಸಿದ ಮೇಲೆ ಮರಳಿ ನಿನ್ನ ಬಳಿಗೆ ಬರುವೆನು.'' ಎಂದು ಸ್ಪಷ್ಟವಾಗಿ ಹೇಳಿದ್ದರಿಂದ ನಾನು ನನ್ನ ತವರೂರಿಗೆ ಇವನೊಡನೆ ಹೊರಟೆನು. ದಾರಿಯಲ್ಲಿ ನಿಮ್ಮ ಗುಪ್ತಚಾರರು ನಮ್ಮನ್ನು ಹಿಡಿದು ತಂದರು. ಖಾನಿಂದ, ನೀವು ಆ ಬಂಗಾಲಿ ತರುಣಿಯ ಸೊಕ್ಕು ಮುರಿಯಿರಿ. ಆ ದೀನಕೃಷ್ಣ ಸೇನಾಪತಿಯ ಉರವಣಿಗೆಯನ್ನಂತೂ ಹೇಳಲಾಸಲ್ಲ. ಅವನೇನೋ ವಿಜಯವನ್ನು ಸಂಪಾದಿಸಿರುವನಂತೆ! ಮೊದಲೆ ಗರ್ವಿಷ್ಠನಾದ ಸೇನಾಪತಿಯು ದೊರೆತ ವಿಜಯದಿಂದ ಮತ್ತಿಷ್ಟು ಉನ್ಮತ್ತನಾಗಿರುವನು. ಅವನ ಸಹಾಯಕ್ಕೆ ರಾಣಿಯು ಬಂಗಾಲೀ ಸೇನಾಪತಿಯನ್ನು ಕಳಿಸುವಳಂತೆ. ಅವರಿಬ್ಬರೂ ನಿಮ್ಮ ಸೈನ್ಯದ ಮೇಲೆ ದಂಡೆತ್ತಿ ಬರುವವರಿರುವರಂತೆ. ಖಾನಿಂದ, ಆ ತರುಣಿಯು ಒಳ್ಳೇ ಪಾತಾಳಯಂತ್ರಿಯಾಗಿ ಕಾಣುತ್ತಾಳೆ. ನೀವು ಅವಳಿಗೆ ಚೆನ್ನಾಗಿ ದಂಡನೆಯನ್ನು ವಿಧಿಸಿದರೆ ನನ್ನ ಮೇಲೆ ಉಪಕಾರವಾಗುವದು. ಈ ಉಡಾಳನಾದ ಪತಿಯು ಲುಂಠನಪ್ರಿಯನು. ಅಂತೆಯೇ ರಾಣಿಯ ಕೈಕೆಳಗಿದ್ದು, ಸುಲಿಗೆ ಮಾಡುತ್ತ ತಿರುಗಾಡುವನು. ನೀವು ಆ ರಾಣಿಯನ್ನು ಗೊತ್ತಿಗೆ ಹಚ್ಚಿದರೆ, ನನ್ನ ಸಂಸಾರವು ನೆಲ್ಲೀಕಾಯಿ ತಿಂದು ನೀರು ಕುಡಿದಂತಾಗುವದು!''

''ಲಲಾಟಿ, ನೀನು ನಿಜ ಸ್ಥಿತಿಯನ್ನರುಹಿದ್ದರಿಂದ ನಿನ್ನ ಗಂಡನ

ಅಪರಾಧವನ್ನು ಕ್ಷಮಿಸಿರುವೆನು. ಇನ್ನು ನೀವೆಲ್ಲರೂ ಬೇಕಾದಲ್ಲಿಗೆ ಹೋಗಬಹುದು.''

''ನನ್ನ ಲಲಾಟದ ಬರವಣಿಗೆಯು ಒಳಿತಾಗುವದು.'' ಎಂದು ಲಲಾಟಿಯು ಸಂಭ್ರಮಗೊಂಡು ನುಡಿದು:—''ಹುಜೂರ, ಈಗ ಬಹಳೇ ರಾತ್ರಿಯಾಗಿರುವದು. ಇದೊಂದು ದಿವಸ ಇಲ್ಲಿಯೇ ಇದ್ದು, ನಾಳೆ ಪ್ರಾತಃಕಾಲದಲ್ಲಿ ಇಲ್ಲಿಂದ ಹೊರಡುವೆವು.''

''ಒಳ್ಳೇದು; ಇಂದು ಇಲ್ಲಿಯೇ ಇದ್ದರೂ ಅಡ್ಡಿಯಿಲ್ಲ.''

ಕಾತಲೂಖಾನನು ಓಲಗವನ್ನು ನೆರೆಯಿಸಿ, ದಂಡಯಾತ್ರೆಯ ಪ್ರಸ್ತಾಪವೆತ್ತಿದನು. ರಾಜಧಾನಿಯಲ್ಲಿ ಇಪ್ಪತ್ತೈದುಸಾವಿರ ಸೈನ್ಯ ವಿದ್ದುದರಿಂದ ಅಲ್ಲಿಗೆ ದಂಡೆತ್ತಿ ಹೋಗುವದು ಲಾಭದಾಯಕವಲ್ಲೆಂದೂ ಒಂದು ವೇಳೆ ದಂಡೆತ್ತಿ ಹೋದರೆ, ದುರ್ಗದ ಹೊರಗಿದ್ದ ದೀನಕೃಷ್ಣ ಸೇನಾಪತಿಯು ಸೈನ್ಯಕ್ಕೆಕಾಳು-ಕಡಿ ಮೊದಲಾದ ಸಾಮಗ್ರಿಗಳು ಬರು ವದನ್ನು ಕಟ್ಟುಮಾಡುವನೆಂದೂ ಕಾತಲೂಖಾನನು ತನ್ನ ಅಭಿಪ್ರಾಯ ವನ್ನು ಸಭಿಕರಿಗೆ ತಿಳಿಸಿದನು. ಗದಾಧರನು ದೀನಕೃಷ್ಣನನ್ನು ಕೂಡುವ ದಕ್ಕಿಂತ ಮುಂಚಿತವಾಗಿ ತಾನು ಅವನ ಸೈನ್ಯವನ್ನು ಮುತ್ತಿ ಅದನ್ನು ಪರಾಭವಗೊಳಿಸುವದು ಸಯುಕ್ತಿಕವೆಂದು ಅವನ ಮತವಿತ್ತು. ಎಲ್ಲ ಜನರೂ ಸೇನಾಪತಿಯ ಅಭಿಪ್ರಾಯಕ್ಕೆ ಸಮ್ಮತಿಸಿದ್ದರಿಂದ ಯುದ್ಧದ ಸಿದ್ಧತೆಯಲ್ಲಿ ತೊಡಗಬೇಕೆಂದು ಸೈನಿಕರಿಗೆ ಆಜ್ಞೆಯಾಯಿತು. ಆಗ ಸೂರ್ಯಾಸ್ತವಾಗಿತ್ತು. ಎಲ್ಲ ಕಡೆಯಲ್ಲಿಯೂ ಅಂಧಕಾರವು ಪಸರಿಸ ಲುದ್ಯುಕ್ತವಾಗಿತ್ತು. ಕಾತಲೂಖಾನನಿಗೆ ರಾತ್ರಿಯ ಹಾಗು ಅಂಧ ಕಾರದ ಪರಿವೆಯಿದ್ದಿಲ್ಲ. ಅವನು ತನ್ನ ಸೇನೆಯೊಡನೆ ಚೌಘುರದ ದಾರೀ ಹಿಡಿದನು. ನಟವರನೂ ಲಲಾಟಿಯೂ ಪಠಾಣ ಸೈನಿಕರಿಗೆ ಮಂಕು ಬೂದಿ ಹಚ್ಚಿ, ರಾಜಧಾನಿಗೆ ತೆರಳಿದರು.

ದ್ವಿಜವರನು ರಾಣಿಯ ಪತ್ರವನ್ನು ತೆಗೆದುಕೊಂಡು ಜನಾರ್ದನ ಮಂತ್ರಿಯ ಕಡೆಗೆ ಹೊರಟಿದ್ದನಷ್ಟೆ? ಅವನು ತನ್ನ ಕಾರ್ಯವನ್ನು ಚನ್ನಾಗಿ ನೆರವೇರಿಸಿದನು. ರಾಣಿಯು ಜನಾರ್ದನನಿಗೆ ಕಳುಹಿಸಿದ

ಪತ್ರವು ಭೃಗುರಾಮನ ಹಸ್ತಾಕ್ಷರದ್ದೇ ಇದ್ದದರಿಂದ ಅವನಿಗೆ ಯಾವ ವಿಧದ ಸಂಶಯು ಹುಟ್ಟಲಿಕ್ಕೂ ಮಾರ್ಗವಿದ್ದಿಲ್ಲ. ತನ್ನ ಜೀವನ್ಮಿತ್ರನು ಯೋಗ್ಯ ವೇಳೆಗೆ ಸೂಚನೆ ಕೊಟ್ಟು ತನ್ನನ್ನು ಜಾಗ್ರತೆ ಪಡಿಸಿದನೆಂದು ಅವನು ಸಂಭ್ರಮಗೊಂಡನು. ಪ್ರಸಂಗವೊದಗಿದರೆ ಭೃಗುರಾಮನು ತನಗೆ ಯಾವ ಬಗೆಯು ಸಹಾಯವನ್ನಾದರೂ ಮಾಡುವನೆಂದು ಅವನು ಧೈರ್ಯತಾಳಿ, ಸಂಗ್ರಾಮದ ಸಿದ್ಧತೆಯಲ್ಲಿ ತೊಡಗಿದನು. ತನ್ನ ಅಪಾರ ವಾದ ಸೈನ್ಯವು ಬಂಗಾಲೀ ಸೇನಾಪತಿಯಾದ ಗದಾಧರನ ಸೈನ್ಯವನ್ನು ಲೆಕ್ಕಿಸುವಂತಹದಲ್ಲವೆಂದು ಅವನ ಭಾವನೆಯಿದ್ದರೂ, ಶತ್ರುಸೈನ್ಯವು ನಿರ್ನಾಮವಾಗುವಂತೆ ಸಾಹಸ ಮಾಡಬೇಕೆಂದು ಅವನು ತನ್ನ ಸೈನ್ಯದ ವ್ಯೂಹವನ್ನು ರಚಿಸತೊಡಗಿದನು.

ದ್ವಿಜವರನೂ ನಟವರನೂ ತಮ್ಮ ಕರ್ತವ್ಯಗಳನ್ನು ಪೂರೈಸಿ ಕೊಂಡು ರಾಜಧಾನಿಗೆ ಬಂದರು. ಅವರು ತಮ್ಮ ಕೆಲಸವನ್ನು ಉತ್ತಮ ರೀತಿಯಿಂದ ಈಡೇರಿಸಿದ್ದನ್ನು ನೋಡಿ ರಾಣಿಗೆ ಪರಮಾನಂದವಾಯಿತು. ಆಗ ಅವಳು ದೀನಕೃಷ್ಣ, ಗದಾಧರ, ಕರೀಮಶಹ, ನಗರಪಾಲ ಮೊದ ಲಾದ ಸೇನಾಪತಿಗಳನ್ನು ಕರೆಯಿಸಿ ಅವರವರು ಮಾಡತಕ್ಕ ಕಾರ್ಯ ಗಳನ್ನು ತಿಳಿಸಿದಳು. ಅನಂತರದಲ್ಲಿ ಅವಳು ನಗರಪಾಲನ ಹೊರತು ಎಲ್ಲ ಸೇನಾಪತಿಗಳಿಗೆ ನಿರೋಪ ಕೊಟ್ಟಳು. ಎಲ್ಲ ಸೇನಾಪತಿಗಳು ಹೋದ ಬಳಿಕ ರಾಣಿಯು ನಗರಪಾಲನನ್ನು ಕುರಿತು—"ನಗರಪಾಲರೆ, ಭೃಗುರಾಮನು ದೇಶದ್ರೋಹಿಯಾದ ಜನಾರ್ದನನ ಪಕ್ಷದವನಿರುವನು. ಸ್ವಾರ್ಥಿಯಾದ ಭೃಗುರಾಮನು ದೇಶಕ್ಕೆ ಹಾನಿಯನ್ನುಂಟು ಮಾಡದೆ ಇರಲಾರನೆಂದು ನಿಮಗಾದರೂ ತಿಳಿದಿರುವದು. ಅವನನ್ನು ಕಾರಾಗೃಹ ದಲ್ಲಿರಿಸಬೇಕೆಂದು ನನ್ನ ಆಲೋಚನೆಯಿರುವದು. ರಾಜಧಾನಿಯಲ್ಲಿ ಅವನ ಪಕ್ಷಪಾತಿಗಳು ಬಹಳವಿಲ್ಲವಾದ್ದರಿಂದ ನಮ್ಮ ಕೃತಿಯಿಂದ ದುಷ್ಪರಿಣಾಮವಾಗಲಾರದು. ಈ ವಿಷಯದಲ್ಲಿ ನಿಮ್ಮ ಅಭಿಪ್ರಾಯ ವೇನುಂಟು?"

ರಾಣಿಯ ವಿಚಾರವು ನಗರಪಾಲನಿಗೆ ಯೋಗ್ಯವಾಗಿ ತೋರಿತು

ರಾಷ್ಟ್ರಕ್ಕೆ ಕುಠಾರ ಸ್ವರೂಪಿಯಾದ ಮಂತ್ರಿಯು ಜನಾರ್ದನನಂತೆ ಬಂಡುಗಾರನಾಗಬಹುದೆಂದು ಪ್ರತಿಯೊಬ್ಬ ಅಧಿಕಾರಿಗೂ ಗೊತ್ತಿತ್ತು; ಆದರೆ ಆ ಪ್ರಬಲ ಮಂತ್ರಿಯನ್ನು ಹೇಗೆ ಬಂಧನ ಮಾಡಬೇಕೆಂಬ ಹಂಚಿಕೆಯು ಮಾತ್ರ ಯಾರಿಗೂ ಗೊತ್ತಾಗಿದ್ದಿಲ್ಲ. ಆಗ ನಗರಪಾಲನು: "ರಾಣಿಯವರೆ, ನಿಮ್ಮ ಅಭಿಪ್ರಾಯವು ಸರಿಯಾಗಿರುವದು. ಅವನನ್ನು ಕಾರಾಗೃಹದಲ್ಲಿರಿಸುವ ಕಾರ್ಯವು ಹೇಗೆ ಸಾಧಿಸುವದು?"

"ನೀವು ಭೃಗುರಾಮನ ಬಳಿಗೆ ಹೋಗಿ 'ರಾಣಿಯು ಕರೆದಿರುವಳೆ'ಂದು ತಿಳಿಸಿರಿ. ಅವನು ನಿಮ್ಮ ಹಿಂದೆಯೆ ಬರುವನು. ನೀವು ಅವನನ್ನು ಮಂತ್ರಣಾಗಾರದಲ್ಲಿದ್ದ ಒಂದು ಕೋಣೆಯೊಳಗೆ ಕರೆದೊಯ್ದು, ಅವನನ್ನು ಅಲ್ಲಿಯೆ ಬಿಟ್ಟು ಹೊರಗೆ ಬಂದು ಬಾಗಿಲ ಹಾಕಿರಿ. ಈ ಕಾರ್ಯವು ಒಳ್ಳೇ ಯುಕ್ತಿಯಿಂದ ಸಾಧಿಸಲ್ಪಡತಕ್ಕದ್ದಿರುವದು. ಸ್ವಲ್ಪ ಅವ್ಯವಸ್ಥೆಯಾದರೆ ಕೆಲಸವೇ ಕೆಟ್ಟು ಹೋಗುವದು. ನೀವು ಈ ಕಾರ್ಯವನ್ನು ನೆರವೇರಿಸುವಿರಾ?"

"ಅವಶ್ಯವಾಗಿ ನೆರವೇರಿಸುವೆನು."

ನಗರಪಾಲನು ಭೃಗುರಾಮನ ಮನೆಗೆ ಹೋಗಿ, ಅವನನ್ನು ಮಂತ್ರಣಾಗಾರಕ್ಕೆ ಕರೆತಂದನು. ಅಲ್ಲಿ ರಾಣಿಯು ಕಾಣದ್ದರಿಂದ ಭೃಗುರಾಮನು:--"ರಾಣಿಯವರು ಇನ್ನೂ ಮಂತ್ರಣಾಗಾರಕ್ಕೆ ಬಂದಿಲ್ಲವಲ್ಲ?" ಎಂದು ಕೇಳಿದನು. ಆಗ ನಗರಪಾಲನು ಅಲ್ಲಿದ್ದ ಒಂದು ಕೋಣೆಯನ್ನು ತೋರಿಸಿ:—"ಈ ಕೋಣೆಯಲ್ಲಿರಬಹುದು." ಎಂದು ಹೇಳಿ ಅವನನ್ನು ಕೋಣೆಯಲ್ಲಿ ಕರೆದೊಯ್ದನು. ಆಗ ಅಲ್ಲಿಯೂ ರಾಣಿಯು ಇರದ್ದರಿಂದ ಭೃಗುರಾಮನು ಸಿಟ್ಟಿಗೆದ್ದು:—"ರಾಣಿಯು ಮಂತ್ರಣಾಗಾರದಲ್ಲಿರುವಳೆಂದು ನೀವು ಸುಳ್ಳು ಹೇಳಿದಿರಲ್ಲವೆ?"

"ಛೇ! ನಾನು ಸುಳ್ಳು ಹೇಳಿಲ್ಲ. ಇದೀಗ ಇಲ್ಲಿಯೇ ಇದ್ದರು. ಕುಳಿತುಕೊಳ್ಳಿರಿ; ಅವರನ್ನು ಈಗಲೆ ಕರೆತರುವೆನು." ಎಂದು ಅಲ್ಲಿಂದ ಎದ್ದನು.

ನಗರಪಾಲನು ಕೋಣೆಯಿಂದ ಹೊರಗೆ ಬಂದ ಕೂಡಲೆ, ಬಾಗಿಲ

ಮುಚ್ಚಿಕೊಂಡನು. ಈ ಘಟನೆಯನ್ನು ನೋಡಿ ಭೃಗುರಾಮನ ಸಂತಾಪವು ಅನಿವಾರವಾಯಿತು. ಆಗ ಅವನು ತಾರಸ್ವರದಿಂದ:—"ನಗರಪಾಲ, ಇದೇನು ಹುಡುಗಾಟಿಕೆಯು? ಉತ್ಕಲದ ಮಂತ್ರಿಯೊಡನೆ ಪ್ರಸಂಗವಿರುವದೆಂಬದನ್ನು ನೀನು ಮರತೆಯೇನು?"

ಭೃಗುರಾಮನು ಹೀಗೆ ನುಡಿಯುವಷ್ಟರಲ್ಲಿ ರಾಣಿಯು ಅಲ್ಲಿಗೆ ಬಂದು ಕಠೋರವಾಣಿಯಿಂದ:—"ನೀಚಾ! ಭೃಗುರಾಮಾ! ನೀನು ಉತ್ಕಲದ ಸ್ವಾತಂತ್ರ್ಯ ಸಿಂಹಾಸನವನ್ನು ನಾಶಮಾಡಲು ಯತ್ನಿಸಿದ್ದೆಯಲ್ಲವೆ? ದೇಶದ್ರೋಹಿಯಾದ ನಿನಗೆ ಬೇಗನೆ ಮರಣ ದಂಡನೆಯು ವಿಧಿಸಲ್ಪಡುವದು."

"ಉತ್ಕಲದ ಮಂತ್ರಿಯಾದ ನನ್ನ ಅಪಮಾನ ಮಾಡುವೆಯಾ?"

"ನಿನ್ನನ್ನು ಅಪಮಾನಗೊಳಿಸಿಲ್ಲ; ಸ್ವಾರ್ಥದ ಬಗ್ಗೆ ಏಕನಿಷ್ಠನಾದ ನಿನಗೆ ಕಾರಾಗೃಹದ ಪಾರಿತೋಷಕವನ್ನಿತ್ತಿರುವೆನು." ಎಂದು ನೃಜಬಾಲೆಯು ನುಡಿದು, ಕೋಣೆಯ ದ್ವಾರದಲ್ಲಿ ಸಶಸ್ತ್ರ ಸೈನಿಕರ ಕಾವಲಿರಿಸಿದಳು.

---

# ವಿಲಕ್ಷಣ ವಿಜಯ!

ಕಾಶಲೂಖಾನನು ತನ್ನ ಸೈನ್ಯದೊಡನೆ ಚೌಘರಕ್ಕೆ ಬಂದು ತಲುಪಿದನು. ರಾತ್ರಿಯಲ್ಲಿ ದಂಡೆತ್ತಿ ಬಂದ ಖಾನನ ಸೈನಿಕರು ಬಹಳೇ ಶ್ರಮಬಟ್ಟಿದ್ದರು. ಅವರು ಚೌಘರಕ್ಕೆ ಬಂದ ಕೂಡಲೆ ಅವರ ಮೇಲೆ ಬಾಣವೃಷ್ಟಿಯು ಪ್ರಾರಂಭವಾಯಿತು. ಶತ್ರುಗಳು ಯುದ್ಧದ ಸಿದ್ಧತೆಯಿಂದಲೆ ಇದ್ದರೆಂದು ಖಾನನು ತಿಳಿದನು. ಶತ್ರುಗಳು ಮೂರು ದಿಕ್ಕಿನಿಂದ ಅವನ ಸೈನ್ಯದ ಮೇಲೆ ಶರಸಂಧಾನ ಮಾಡಲಾರಂಭಿಸಿದ್ದರು. ನದಾಜದ ನಿಟ್ಟಿಗೆ ಮಾತ್ರ ಶತ್ರುಗಳಿರಲಿಲ್ಲ. ಖಾನನು ಕೆಚ್ಚೆದೆಯುವನಿದ್ದುದರಿಂದ ಶತ್ರುಗಳ ಏರ್ಪಾಟಕ್ಕೆ ಅಳುಕ್ಕಡೆಯದೆ, ತನ್ನ ಸೈನ್ಯಕ್ಕೆ ಪ್ರೋತ್ಸಾಹನೆ ಕೊಡುತ್ತ ಯುದ್ಧಕ್ಕೆ ಅಣಿಮಾಡಿದನು. ಅವನು ತನ್ನ ಸೈನ್ಯ ರಚನೆಯನ್ನು ಚನ್ನಾಗಿ

ಮಾಡಿ ತುಬಾಕಿಯ ಸೈನ್ಯದ ಸಾಲುಗಳನ್ನು ಮುಂದೆ ಹಾಕಿದನು. ಅವನಲ್ಲಿ ಎರಡು ಅಗ್ನಿಗೋಲಕ ಯಂತ್ರಗಳಿದ್ದವು. ಅವುಗಳನ್ನು ನರಾಜದ ಶಿಬಿರದಲ್ಲಿಯೇ ಬಿಟ್ಟು ಬಂದಿದ್ದನು. ಆದ್ದರಿಂದ ತುಬಾಕಿಗಳಿಂದಲೆ ಕಾರ್ಯಭಾಗವನ್ನು ಸಾಧಿಸಬೇಕಾಗಿತ್ತು. ಖಾನನು ತುಬಾಕಿಯ ಸೈನ್ಯವನ್ನು ಮುಂದೆ ಮಾಡಿದ್ದೇನೋ ನಿಜವು; ಆದರೆ ಯಾವ ನಿಟ್ಟಿಗೆ ಶತ್ರು ಸೈನ್ಯವಿರುವದೆಂಬದು ಆ ಸೈನ್ಯಕ್ಕೆ ಕಾಣದಾಗಿತ್ತು. ಶತ್ರು ಸೈನ್ಯವು ಅಲ್ಲಲ್ಲಿ ಮರೆಯಲ್ಲಿದ್ದುಕೊಂಡು ಕಾತಲೂಖಾನನ ಸೈನ್ಯದ ಮೇಲೆ ಬಾಣಗಳನ್ನು ಎಸೆಯಲಾರಂಭಿಸಿತ್ತು. ತುಬಾಕಿಯ ಸೈನ್ಯದಿಂದ ಯಾವ ಬಗೆಯ ಉಪಯೋಗವೂ ಆಗುವದಿಲ್ಲವೆಂಬದು ಖಾನನಿಗೆ ತಿಳಿಯಿತು. ಅಗ್ನಿಗೋಲಕ ಯಂತ್ರಗಳನ್ನು ಶಿಬಿರದಲ್ಲಿ ಬಿಟ್ಟು ಬಂದದ್ದು ಒಳಿತಾಗಲಿಲ್ಲವೆಂದು ಅವನು ಪಶ್ಚಾತ್ತಾಪ ಬಡತೊಡಗಿದನು. ಶತ್ರುಗಳು ಗುಪ್ತರೀತಿಯಿಂದಿದ್ದು ತನ್ನ ಸೈನ್ಯವನ್ನು ನಾಶಪಡಿಸತೊಡಗಿದ್ದನ್ನು ನೋಡಿ, ಖಾನನು ತನ್ನ ಅಶ್ವ ಸೈನ್ಯವನ್ನು ಮುಂದೆ ಮಾಡಿದನು. ಅಷ್ಟರಲ್ಲಿ ಶತ್ರುಗಳು ಪಠಾಣ ಸೈನ್ಯದ ದೃಷ್ಟಿಗೆ ಬಿದ್ದರು. ಕೂಡಲೆ ಪಠಾಣ ಸೈನಿಕರು ರೊಚ್ಚಿಗೆದ್ದು ತಮ್ಮ ಎದುರಾಳಿಗಳೊಡನೆ ನಿಕರದಿಂದ ಯುದ್ಧವನ್ನು ಪ್ರಾರಂಬಿಸಿದರು.

ಕಾತಲೂಖಾನನು ಯಾರೊಡನೆ ಯುದ್ಧವನ್ನು ಪ್ರಾರಂಭಿಸಿದನೋ ಅವರು ನಿಜವಾದ ಶತ್ರುಗಳಾಗಿದ್ದಿಲ್ಲ. ಭೃಗುರಾಮನ ಪತ್ರದ ಮೇರೆಗೆ ಗದಾಧರನು ಯುದ್ಧಕ್ಕೆ ಬಂದಿರುವನೆಂದು ಮಂತ್ರಿಯಾದ ಜನಾರ್ದನನು ತಿಳಿದು, ಪಠಾಣಸೈನ್ಯದೊಡನೆ ಯುದ್ಧವನ್ನು ಪ್ರಾರಂಭಿಸಿದನು. ಕಾತಲೂಖಾನನು ಎದುರಾಳಿಗಳನ್ನು ದೀನಕೃಷ್ಣನ ಸೈನ್ಯವೆಂದು ಭಾವಿಸಿದ್ದನು. ಗುಪ್ತವಾಗಿದ್ದುಕೊಂಡು ಕಾತಲೂಖಾನನ ಸೈನ್ಯದ ಮೇಲೆ ಶರಸಂಧಾನ ಮಾಡುವ ಶತ್ರುಗಳು ಬೇರೆಯಾಗಿದ್ದರು. ರಾಣಿಯ ಆಜ್ಞೆಯಮೇರೆಗೆ ನಗರಪಾಲನು ತನ್ನ ಸೈನ್ಯವನ್ನು ಅಲ್ಲಲ್ಲಿ ಗುಪ್ತರೀತಿಯಿಂದಿರಿಸಿ ಶತ್ರುಗಳ ಮೇಲೆ ದಾಳಿಮಾಡತೊಡಗಿದ್ದನು. ರಾತ್ರಿಯ ವೇಳೆಯಾದ್ದರಿಂದ ನಿಜಸ್ಥಿತಿಯು ಜನಾರ್ದನನಿಗೂ ಕಾತಲೂಖಾನನಿಗೂ ತಿಳಿಯುವಂತಿದ್ದಿಲ್ಲ. ಅವರು ಯಾದವಿಯನ್ನು ಪ್ರಾರಂಭಿಸಿ ತಮ್ಮಷ್ಟಕ್ಕೆ ತಾವೇ

ನಾಶವಾಗತೊಡಗಿದ್ದರು. ರಾಣಿಯು ಕಾರಸ್ಥಾನವೇ ಹಾಗಿತ್ತು. ಪಾತಾಳ ಯಂತ್ರಿಯಾದ ರಾಣಿಯು ಶತ್ರುಗಳಲ್ಲಿ ಯಾದವಿಯನ್ನು ಪ್ರಾರಂಭಿಸಿ, ಅವರನ್ನು ದುರ್ಬಲರನ್ನಾಗಿ ಮಾಡಬೇಕೆಂದು ಮಾಡಿದ ಹಂಚಿಕೆಯು ನೆರವೇರಿತು!

ಜನಾರ್ದನ-ಕಾತಲೂಖಾನರಿಗೆ ಪರಸ್ಪರರ ಶಿಬಿರಗಳು ಎಲ್ಲಿರುವವೆಂಬದು ಪರಸ್ಪರರಿಗೆ ಗೊತ್ತಿರಲಿಲ್ಲ. ಅವರಿಬ್ಬರಲ್ಲಿ ಹೆಚ್ಚಿನ ಸ್ನೇಹವೂ ಇದ್ದಿಲ್ಲ. ಸ್ವಾರ್ಥಕ್ಕಾಗಿ ಅವರು ಬಾಹ್ಯಸ್ನೇಹವನ್ನು ತಳೆದಿದ್ದರು. ಜನಾರ್ದನನಿಗೆ ಉತ್ಕಲದ ಸಿಂಹಾಸನವನ್ನು ಸಮರ್ಪಿಸುವದಕ್ಕಾಗಿ ಕಾತಲೂಖಾನನು ಬಂದಿದ್ದಿಲ್ಲ; ಜನಾರ್ದನನಾದರೂ ಕಾತಲೂಖಾನನಿಗೆ ವಿಜಯಸಂಪಾದನೆ ಮಾಡಿಕೊಡುವದಕ್ಕಾಗಿ ಒಂಡಾಯವನ್ನೆಬ್ಬಿಸಿದ್ದಿಲ್ಲ. ಕಾತಲೂಖಾನನು ಓರಿಸಾದೇಶವನ್ನು ನವಾಬಶಾಹಿಯಲ್ಲಿ ತೆಗೆದುಕೊಳ್ಳಬೇಕೆಂದು ಹೊಂಚುಹಾಕಿದ್ದನು. ಅವನಿಗೆ ಜನಾರ್ದನನಂತಹ ಗೃಹಭೇದಿಗಳು ಬೇಕಾಗಿತ್ತು. ಗೃಹಭೇದಿಗಳಿಂದಲೆ ರಾಜ್ಯವು ಸುಸೂತ್ರವಾಗಿ ಗಂಟಲಲ್ಲಿಳಿಯುವದೆಂಬದು ಅವನಿಗೆ ಗೊತ್ತಾಗಿತ್ತು. ಜಡಸ್ವಾರ್ಥಿಯಾದ ಜನಾರ್ದನನಿಗೆ ಆಶೆ ಹಚ್ಚಿದರೆ ಸ್ವದೇಶ-ಸ್ವಧರ್ಮಗಳ ವಿರುದ್ಧವಾಗಿ ತನಗೆ ಸಹಾಯ ಮಾಡುವನೆಂದು ತಿಳಿದು, ಖಾನನು ಜನಾರ್ದನನಿಗೆ ಓರಿಸಾದ ಸಿಂಹಾಸನದ ಒಡೆತನವನ್ನು ಕೊಡುವೆನೆಂದು ಹೇಳಿದ್ದನು. ಕಾರ್ಯಸಿದ್ಧಿಯಾದ ಮೇಲೆ ಜನಾರ್ದನನಿಗೆ ಅರ್ಧಚಂದ್ರ ದರ್ಶನ ಮಾಡಿಸುವದು ಅವನಿಗೆ ಅಸಾಧ್ಯವಿದ್ದಿಲ್ಲ. ಜನಾರ್ದನನಿಂದ ಸಹಾಯವು ಚೆನ್ನಾಗಿ ದೊರೆತರೆ, ಅವನಿಗೆ ಯಾವದೊಂದು ಅಧಿಕಾರವನ್ನಾದರೂ ಕೊಡಲಿಕ್ಕೆ ಅಡ್ಡಿಯಿಲ್ಲವೆಂದು ಖಾನನ ಮನೋದಯವಿತ್ತು; ಆದರೆ ಜನಾರ್ದನನು ಮಾತ್ರ ಮನಸ್ಸಿನಲ್ಲಿ ಯಥೇಷ್ಟವಾಗಿ ಮಂಡಿಗೆಗಳನ್ನು ತಿನ್ನಲಾರಂಭಿಸಿದ್ದನು. ಈ ದುಷ್ಟ ಮಂತ್ರಿಯು ಬಹಳ ದಿನಗಳಿಂದ ರಾಜ್ಯಲೋಭಾಕೃಷ್ಟನಾಗಿದ್ದನು. ಮುಕುಂದದೇವನಂತಹ ಪ್ರಬಲನೊಡನೆ ವೈರಬೆಳೆಯಿಸಿ ಬಾಳುವದು ಅಸಾಧ್ಯವೆಂದು ತಿಳಿದು, ತನ್ನ ದುಷ್ಟಲಾಲಸೆಯನ್ನು ನಿಗ್ರಹಿಸಿಕೊಂಡಿದ್ದನು. ಪಠಾಣರು ದಂಡೆತ್ತಿ

ಹೊರಟಿರುವರೆಂಬ ಸುದ್ದಿಯು ಅವನ ಕಿವಿಗೆ ಬಿದ್ದಕೂಡಲೆ ಬಂಡಾಯದ ಕೊಂಬನ್ನೂದಿದನು. ಯುದ್ಧದ ಸರ್ವ ಭಾರವು ನವಾಬನ ಜಾಮಾತನಾದ ಕಾಳಾಪಹಾಡನ ಮೇಲಿದ್ದುದರಿಂದ ಜನಾರ್ದನನು ಅವನಲ್ಲಿ ಸಂಧಾನ ಹಚ್ಚಿದನು. ಕಾಳಾಪಹಾಡನು ಆ ಹೇಸಿ ದೇಶದ್ರೋಹಿಯೊಡನೆ ಅನುಸಂಧಾನ ಮಾಡಲಾರದೆ, ಅವನನ್ನು ಕಾತಲೂಖಾನನ ಕಡೆಗೆ ಕಳುಹಿಸಿದನು. ಚಾಣಾಕ್ಷನಾದ ಕಾತಲೂಖಾನನು ಕುಟಿಲರಾಜನೀತಿಗನುಸಾರವಾಗಿ ಜನಾರ್ದನನಿಗೆ ಅಭಯವಿತ್ತಿದ್ದನು.

ಜನಾರ್ದನನ ಸೈನ್ಯಕ್ಕೂ ಪಠಾಣ ಸೈನ್ಯಕ್ಕೂ ವಿಕಟವಾದ ಸಂಗ್ರಾಮವು ಪ್ರಾರಂಭವಾಯಿತೆಂದು ತಿಳಿದೊಡನೆಯೆ ಗುಪ್ತರೀತಿಯಿಂದ ನಡೆದ ಶರಸಂಧಾನವು ನಿಲ್ಲಿಸಲ್ಪಟ್ಟಿತು. ವೀರಯೋಧರಾದ ಪಠಾಣರು ಜನಾರ್ದನನ ಬಾಡಿಗೆಯ ಸೈನಿಕರನ್ನು ಹಿಂದೆ ನೂಕತೊಡಗಿದರು. ಮುಂದೆ ಎಷ್ಟೋ ವೇಳೆಯ ಮೇಲೆ ತನಗೆ ಎದುರಾದವರು ಹಿಂದುಸೈನಿಕರಾಗಿರದೆ ಪಠಾಣರಿರುವರೆಂಬದು ಜನಾರ್ದನನಿಗೆ ಗೊತ್ತಾಯಿತು. ಕಾತಲೂಖಾನನು ತನ್ನ ಮೇಲೆ ದಾಳಿಯನ್ನೇಕೆ ಮಾಡಿರುವನೆಂಬದು ಅವನಿಗೆ ತೋಚದಾಯಿತು. ಯುದ್ಧವನ್ನು ನಿಲ್ಲಿಸಿ ನಿಜಸ್ಥಿತಿಯನ್ನು ತಿಳಿಸಬೇಕೆಂದು ಜನಾರ್ದನನು ಬಹಳ ಯತ್ನಿಸಿದನು. ಆವೇಶದಿಂದ ನಡೆದ ಯುದ್ಧದಲ್ಲಿ, ಅವನ ಈ ಇಚ್ಛೆಯು ಸಫಲವಾಗುವಂತಿದ್ದಿಲ್ಲ. ಪಠಾಣರ ಅಬ್ಬರಕ್ಕೆ ಮಂತ್ರಿಯ ಸೈನ್ಯವು ಈಡಾಗಲಿಲ್ಲ. ಜೀವದಿಂದುಳಿದಿದ್ದ ಅಲ್ಪಸ್ವಲ್ಪ ಸೈನ್ಯವು ದಾರಿ ದೊರೆತ ಕಡೆಗೆ ಓಡಿಹೋಯಿತು. ಪಠಾಣರು ಬಹಳ ದಣಿದಿದ್ದರಿಂದ ಆ ಸೈನಿಕರನ್ನು ಬೆನ್ನಟ್ಟಲಿಲ್ಲ.

ಜನಾರ್ದನನು ತನ್ನ ಸೈನ್ಯದೊಡನೆ ಓಡಿ ಹೋಗುತ್ತಿರುವಾಗ ಒಮ್ಮೆಲೆ ತುಬಾಕಿಯ ಖಡಖಡಾಟವು ಅವನ ಕಿವಿಗೆ ಬಿತ್ತು. ಪಠಾಣರು ತಮ್ಮನ್ನು ಬೆನ್ನಟ್ಟಿ ಬರತೊಡಗಿರುವರೆಂದು ಜನಾರ್ದನನೂ ಅವನ ಸೈನಿಕರೂ ತಿಳಿದುಕೊಂಡರು. ಕೂಡಲೆ ಅವರು ಭಯಭೀತರಾಗಿ ತಮ್ಮ ಓಟದ ವೇಗವನ್ನು ಹೆಚ್ಚು ಮಾಡಿದರು. ಹೆಚ್ಚು ಹೆಚ್ಚು ಓಡಿದಂತೆ

ತುಬಾಕಿಗಳ ಸಪ್ಪಳವು ಸಮಿಸಮೀಪವಾಗಿ ಕೇಳಲಾರಂಭಿಸಿತು. ಪಠಾಣರು ತಮ್ಮನ್ನು ಬೆನ್ನಟ್ಟಿರುವರೆಂದೂ, ಅವರು ಸರ್ವನಾಶ ಮಾಡಿಯೆ ಹಿಂದಿರು ಗುವರೆಂದೂ ಜನಾರ್ದನನ ಸೈನಿಕರ ಮನವರಿಕೆಯಾಯಿತು. ನಿಜವಾದ ಸಂಗತಿಯು ಬೇರೆ ವಿಧವಾಗಿತ್ತು. ನದೀ ತೀರದಲ್ಲಿದ್ದ ನಗರಪಾಲನ ಸೈನ್ಯವು ಬೇರೆ ಬೇರೆ ಸ್ಥಳಗಳಲ್ಲಿ ಗುಪ್ತವಾಗಿದ್ದು ಶತ್ರುಗಳ ಮೇಲೆ ತುಬಾಕಿಗಳನ್ನು ಹೊಡೆಯುತ್ತೊಡಗಿತ್ತು. ಶತ್ರುಸೈನ್ಯವನ್ನು ದಣಿಸಿದರೆ ಮುಂದಿನ ಕಾರ್ಯವು ಸುಯಂತ್ರಿತವಾಗಿ ನಡೆಯುವದೆಂಬ ಉದ್ದೇಶ ದಿಂದ ರಾಣಿಯು ಹೀಗೆ ಹಂಚಿಕೆ ಮಾಡಿದ್ದಳು.

ಜನಾರ್ದನನೂ ಅವನ ಸೈನಿಕರೂ ಓಡುತ್ತೋಡುತ್ತ ಒಮ್ಮೆ ನದೀ ತೀರವನ್ನು ತಲುಪಿದರು. ನದಿಯನ್ನು ದಾಟಿದ ಹೊರತು ಅವನಿಗೆ ಗತ್ಯಂತರವಿದ್ದಿಲ್ಲ. ಅವನು ನದಿಯನ್ನು ದಾಟಬೇಕೆಂದು ಪ್ರಯತ್ನಿಸು ವಷ್ಟರಲ್ಲಿ ಶತ್ರುಸೇನೆಯು ಅವನನ್ನು ಮುತ್ತಿತು. ಜನಾರ್ದನನ ದಣಿದ ಸೈನಿಕರು ಈ ಆಕಸ್ಮಿಕ ಪ್ರಸಂಗದಿಂದ ಎದೆಗುಂದಿದರು. ಕುರಿಗಳಂತೆ ಕೊಯಿಸಿಕೊಂಡು ಸಾಯುವ ಪ್ರಸಂಗವೊದಗಿತೆಂದು ಅವರು ಬಹು ಪರಿ ಯಾಗಿ ದುಃಖಿಸಿದರು. ಜನಾರ್ದನನು ಅಳಿದುಳಿದ ಸೈನ್ಯಕ್ಕೆ ಉತ್ತೇ ಜನ ಕೊಡುತ್ತ ಕಾದಲಾರಂಭಿಸಿದನು. ಆ ವೀರನು ತನ್ನ ಸೈನ್ಯದಲ್ಲಿ ನೂರು ಜನರು ಉಳಿಯುವ ವರೆಗೂ ಕಾದಿದನು; ಆದರೆ ಬಂಗಾಲೀ ಸೇನಾ ಪತಿಯಾದ ಗದಾಧರನ ಪರಾಟಕ್ಕೆ ಅವನು ತಡೆಯದಾದನು. ಅಷ್ಟರಲ್ಲಿ ನದೀತೀರದಲ್ಲಿ ಅವಿತುಕೊಂಡು ತುಬಾಕಿ ಹೊಡೆಯುತ್ತಿದ್ದ ನಗರಪಾಲನ ರಾಹುತರು ಗದಾಧರನನ್ನು ಕೂಡಿದರು. ಈ ಅಶ್ವಸೈನ್ಯವು ಶತ್ರುಗಳ ದೆಂದು ಮೊದಮೊದಲು ಗದಾಧರನು ತಿಳಿದಿದ್ದನು. ಜನಾರ್ದನನ ಬಳಿ ಯಲ್ಲಿ ಇಪ್ಪತ್ತೈದು ಸಾವಿರ ಬಂದುಗಾರರ ಸೈನ್ಯವಿದ್ದು ಆ ಸೈನ್ಯವೆಲ್ಲ ಏನಾಯಿತೆಂಬದು ಅವನಿಗೆ ಗೊತ್ತಿರಲಿಲ್ಲ. ನಗರಪಾಲನು ಗದಾಧರನಿಗೆ ಭೆಟ್ಟಿಯಾಗಿ ನಿಜಸ್ಥಿತಿಯನ್ನು ತಿಳಿಸಿದ ಮೇಲೆ ಅವನಿಗೆ ರಾಣಿಯ ಅತುಲ ನೀಯವಾದ ರಾಜಕಾರಸ್ಥಾನವೆಲ್ಲ ಗೊತ್ತಾಗಿ ದಂಗುಬಡೆದನು. ರಾಣಿಯು ಆಯುಕ್ತವಾದ ಸಮಯದಲ್ಲಿ ಸೇನಾಪತಿಗಳನ್ನು ಬೇರೆ ಬೇರೆಯಾಗಿ ಕರೆ

ಯಿಸಿಕೊಂಡು ಅವರಿಗೆ ಬೇರೆ ಬೇರೆ ಕೆಲಸಗಳನ್ನು ಹೇಳಿದ್ದಳು. ನಿಜ ಸ್ಥಿತಿಯು ಗೊತ್ತಾದ ಕೂಡಲೆ ಗದಾಧರನು ರಾಣಿಯನ್ನು ಮನಸೋಕ್ತ ಕೊಂಡಾಡಿದನು.

ಜನಾರ್ದನನು ಶಕ್ತಿಮೀರಿ ಕಾದಿದನು. ಅಶ್ವಸೇನೆಯು ಗದಾಧರನ ಬೆಂಬಲಕ್ಕೆ ಬಂದ ಮೇಲಂತು ಬಂಡುಗಾರರು ಶಸ್ತ್ರವನ್ನು ಕೆಳಗಿಟ್ಟರು. ಗದಾಧರನು ಜನಾರ್ದನ ಮಂತ್ರಿಯನ್ನು ಸೆರೆಹಿಡಿದನು. ಉತ್ಕಲದ ಮಹಾರಾಜನಾಗಬೇಕೆಂದು ಮಹತ್ವಾಕಾಂಕ್ಷೆ ತಳೆದಿದ್ದ ತನಗೆ ಮುಂದೆ ಯಾವ ದುರ್ಘಟ ಪ್ರಸಂಗವೊದಗುವದೋ ಏನೋ ಎಂದು ಮಂತ್ರಿ-ಯು ಬಹು ಪರಿಯಾಗಿ ಮಿಡುಕಿದನು. ಗದಾಧರನು ಆ ದೇಶದ್ರೋಹಿಯನ್ನೂ ಅವನ ಪರಾಭೂತ ಸೈನ್ಯವನ್ನೂ ತೆಗೆದುಕೊಂಡು ವಿಜಯಾನಂದದಿಂದ ರಾಜಧಾನಿಗೆ ತೆರಳಿದನು.

ಜನಾರ್ದನ ಮಂತ್ರಿಯು ಸೈನ್ಯವು ಪರಾಭೂತವಾಗಿ ಓಡಿ ಹೋದ ಬಳಿಕ ಕಾತಲೂಖಾನನು ದೀನಕೃಷ್ಣನನ್ನು ಸೋಲಿಸಿದೆನೆಂಬ ಉಬ್ಬಿನಿಂದ ನರಾಜದಲ್ಲಿದ್ದ ತನ್ನ ಶಿಬಿರದ ದಾರೀ ಹಿಡಿದನು. ವೀರಶ್ರೀಯನ್ನು ತೋರಿಸಿ ಜಯಶ್ರೀಯನ್ನು ಸ್ವಾಧೀನ ಪಡಿಸಿಕೊಂಡ ಪಠಾಣ ಸೈನಿಕರು ಆನಂದದಿಂದ ಸಾಗಿದ್ದರು. ದೀನಕೃಷ್ಣ ಸೇನಾಪತಿಯನ್ನು ಪರಾಭವಗೊಳಿಸಿದ ತನಗೆ ರಾಜಧಾನಿಯನ್ನು ವಶಪಡಿಸಿಕೊಳ್ಳುವ ಕಾರ್ಯವು ಸುಲಭಸಾಧ್ಯವಾಗುವದೆಂದು ಕಾತಲೂಖಾನನು ಮನೋರಾಜ್ಯವನ್ನು ಕಲ್ಪಿಸತೊಡಗಿದ್ದನು ನವಾಬನ ಜಾಮಾತನಾದ ಕಾಳಾಪಹಾಡನ ಮೇಲೆ ಯುದ್ಧದ ಸರ್ವ ಭಾರವಿದ್ದು, ಅವನೇ ಮುಖ್ಯ ಸೇನಾಪತಿಯಾಗಿದ್ದನು. ಮುಖ್ಯ ಸೇನಾಪತಿಗಿಂತ ತನ್ನಿಂದ ಹೆಚ್ಚಿನ ಕರ್ತೃತ್ವಪ್ರಭಾವವು ತೋರಲ್ಪಟ್ಟ ಸಂಗತಿಯು ನವಾಬನ ಕಿವಿಗೆ ಬೀಳಬೇಕೆಂದು ತಿಳಿದು, ಅವನು ನರಾಜಕ್ಕೆ ತಲುಪಿದೊಡನೆಯೆ ಕಟಕವಾರಣಾಶಿ ರಾಜಧಾನಿಯ ಮೇಲೆ ದಾಳಿ ಮಾಡಬೇಕೆಂದು ನಿರ್ಧರಿಸಿಕೊಂಡನು. ರಾಜಧಾನಿಯು ತನಗೆ ವಶವಾದರೆ ನವಾಬನ ಪ್ರೇಮಾದರಕ್ಕೆ ಪಾತ್ರನಾಗುವೆನೆಂದು ಅವನು ಭಾವಿಸಿದ್ದನು. ವಿಜಯಿಯಾಗಿದ್ದ ಕಾತಲೂಖಾನನು ನಾನಾವಿಧವಾಗಿ ಆಲೋ

ಚಿಸುತ್ತ ಸಂಭ್ರಮದಿಂದ ಅಶ್ವಾರೋಹಿಯಾಗಿ ಸಾಗಿದ್ದನು. ಅವನ ಆನಂದವೂ ಮನೋರಾಜ್ಯವೂ ಬಹಳ ವೇಳೆಯ ವರೆಗೆ ಸ್ಥಿರವಾಗಲಿಲ್ಲ. ಸ್ವಲ್ಪ ದಾರೀ ಸಾಗುವಷ್ಟರಲ್ಲಿ ಅವನ ಸೈನ್ಯದ ಮೇಲೆ ಭಯಂಕರ ವಾದ ದಾಳಿಯು ಮಾಡಲ್ಪಟ್ಟಿತು! ಹೀಗೆ ಅಕಸ್ಮಾತ್ತಾದ ದಾಳಿಯು ಯಾರಿಂದ ಮಾಡಲ್ಪಟ್ಟಿತೆಂಬದೂ, ಶತ್ರುಗಳು ಯಾವ ನಿಟ್ಟಿನಿಂದ ಬಂದು ಮುತ್ತಿಗೆ ಹಾಕಿದರೆಂಬದೂ ಖಾನನಿಗೆ ತಿಳಿಯಲಿಲ್ಲ. ಆನಂದೋನ್ಮತ್ತ ರಾದ ಸೈನಿಕರು ಯುದ್ಧಕ್ಕೆ ಸಿದ್ಧವಾಗುವಷ್ಟರಲ್ಲಿ, ಸೈನ್ಯದೊಳಗಿನ ಸಾವಿ ರಾರು ಜನರು ಭೂಮಿಗೆ ಬಿದ್ದರು. ಈ ಭಯಂಕರ ಘಟನೆಯಿಂದ ಖಾನನು ಅಳ್ಳೆದೆಯದೆ, ತನ್ನ ದಣಿದ ಸೈನಿಕರನ್ನು ಹುರಿದುಂಬಿಸಿ ಯುದ್ಧಕ್ಕೆ ಅಣಿಮಾಡಿದನು. ಎರಡೂ ಸೈನ್ಯಗಳ ನಡುವೆ ಭಯಂಕರ ವಾದ ಕಾಳಗವು ಪ್ರಾರಂಭವಾಯಿತು.

ಪ್ರಸ್ತುತದಲ್ಲಿ ಕಾತಲೂಖಾನನ ಮೇಲೆ ದಾಳಿಮಾಡಿದವನು ದೀನ ಕೃಷ್ಣನಾಗಿದ್ದನು. ದೀನಕೃಷ್ಣನು ಹತ್ತು ಸಾವಿರ ಸೈನ್ಯದೊಡನೆ ಸಾಗಿ ಬಂದಿದ್ದನು. ಕಾತಲೂಖಾನನಿಂದ ಜನಾರ್ದನನು ಪರಾಭೂತನಾದ ಮೇಲೆ, ಖಾನನ ದಣಿದ ಸೈನ್ಯವನ್ನು ಮುತ್ತಿದರೆ ಯಶವು ದೊರೆಯುವ ದೆಂದು ಭಾವಿಸಿ, ರಾಣೀ ವ್ರಜಸುಂದರಿಯು ಈ ಕೆಲಸವನ್ನು ಸೇನಾಪತಿ ಯಾದ ದೀನಕೃಷ್ಣನಿಗೆ ಒಪ್ಪಿಸಿದ್ದಳು. ರಾಣಿಯು ತಂತ್ರಗಳನ್ನು ಒಳ್ಳೇ ಧೂರ್ತತನದಿಂದ ಹೂಡಿದ್ದಳು. ಇಲ್ಲಿಯ ವರೆಗೆ ಅವಳ ಯೋಜನೆಯು ಸರ್ವರೀತಿಯಿಂದಲೂ ಯಶಸ್ವಿಯಾಗುತ್ತ ಬಂದಿತ್ತು. ಸ್ವಲ್ಪ ವೇಳೆ ಸಂಗ್ರಾಮವು ನಡೆಯುವಷ್ಟರಲ್ಲಿ ಅರುಣೋದಯವಾಯಿತು. ಉಷಾ ಸುಂದರಿಯು ಕಾಳಗದ ದೃಶ್ಯವನ್ನು ನೋಡುವದಕ್ಕಾಗಿ ಪೂರ್ವದಿಶೆ ಯಲ್ಲಿ ನಿಂತುಕೊಂಡಿದ್ದಳು. ಪ್ರಕಾಶವು ಹೆಚ್ಚಾಗತೊಡಗಿದಂತೆ ಶತ್ರು ಸೈನ್ಯವು ಕಾತಲೂಖಾನನಿಗೆ ಕಾಣಲಾರಂಭಿಸಿತು. ತನ್ನನ್ನು ಮುತ್ತಿ ದವನು ಉತ್ಕಲದ ಸೇನಾಪತಿಯಾದ ದೀನಕೃಷ್ಣನೆಂಬದು ಅವನ ಮನ ವರಿಕೆಯಾಯಿತು. ಇದೀಗ ಪಲಾಯನ ಮಾಡಿದ ಸೇನಾಪತಿಯು ಹುರಿ ದುಂಬಿಸಿಕೊಂಡು ಬಂದಿರುವನೆಂದು ಅವನ ಭಾವನೆಯಾಯಿತು. ಎರಡೂ

ಜಿಣಗಳು ರಣರಕ್ತಸತನದಿಂದ ಕಾದಲಾರಂಭಿಸಿದ್ದವು. ಅಷ್ಟರಲ್ಲಿ ಅಗ್ನಿ ಗೋಲಕ ಯಂತ್ರಗಳ ಭಯಂಕರವಾದ ಸಪ್ಪಳವು ಕೇಳತೊಡಗಿತು. ಅಗ್ನಿಯಂತ್ರಗಳು ಹಿಂದುಗಳವೊ, ಪಠಾಣರವೊ ಎಂಬದು ಎರಡೂ ಸೈನ್ಯ ದವರಿಗೆ ತಿಳಿಯಲಿಲ್ಲ. ಯಂತ್ರಗಳು ಯಾರ ಪಕ್ಷದವಿರುವವೊ ಅವು ಆ ಪಕ್ಷವನ್ನು ಕೂಡಿದ ಮೇಲೆಯೇ ನಿಜ ಸ್ಥಿತಿಯು ತಿಳಿಯಬೇಕಾಗಿತ್ತು.

ಉತ್ಕಲದ ಮಹಾರಾಣಿಯು ಸೇನಾಪತಿಯಾದ ಕರೀಮುಶಹನನ್ನು ರಾಣಿಯು ನರಾಜದಲ್ಲಿದ್ದ ಪಠಾಣ ಶಿಬಿರವನ್ನು ಮುತ್ತುವದಕ್ಕಾಗಿ ಕಳಿ ಸಿದ್ದಳು. ಕಾತಲೂಖಾನನು ದೀನಕೃಷ್ಣನ ಮೇಲೆ ದಾಳಿ ಮಾಡುವದ ಕ್ಕಾಗಿ ಹೋಗುವನೆಂತಲೂ, ಅವನ ಶಿಬಿರವನ್ನು ಮುತ್ತಿದರೆ ಅಲ್ಲಿ ಉಳಿದ ಸೈನಿಕರಾದರೂ ನಾಮಶೇಷವಾಗುವರೆಂತಲೂ ಭಾವಿಸಿ ರಾಣಿಯು ಕರೀಮುಶಹನನ್ನು ಐದು ಸಾವಿರ ಅಶ್ವಸೇನೆಯೊಡನೆ ನರಾಜಕ್ಕೆ ಕಳುಹಿ ಸಿದಳು. ಕರೀಮುಶಹನು ಶಿಬಿರವನ್ನು ಮುತ್ತಿದಾಗ ಕಾತಲೂಖಾನನು ಚೌಘರವನ್ನು ಸಮೀಪಿಸಿರಬಹುದು. ನರಾಜದಲ್ಲಿ ಶಿಬಿರದ ರಕ್ಷಣೆಗಾಗಿ ಎರಡು ಸಾವಿರ ಸೈನಿಕರು ಇದ್ದರು. ಸೇನಾಪತಿಯೂ ಅಧಿಕಾರಸ್ಥರೂ ಯುದ್ಧಕ್ಕೆ ತೆರಳಿದ್ದರಿಂದ ನರಾಜದಲ್ಲಿದ್ದ ಸೈನಿಕರು ನಿಶ್ಚಿಂತೆಯಿಂದ ನಿದ್ರಾ ಧೀನರಾಗಿದ್ದರು. ನಿತ್ಯದ ಕಾವಲು ಸಹ ಇರಿಸಲ್ಪಟ್ಟಿರಲಿಲ್ಲ. ಕರೀಮು ಶಹನು ನಿದ್ರೆಯಿಂದ ಮೈಮರೆತಿದ್ದ ಕಾತಲೂಖಾನನ ಸೈನ್ಯದ ಮೇಲೆ ಒಳ್ಳೇ ಬಲವಾದ ದಾಳಿ ಮಾಡಿದನು. ಈ ಆಕಸ್ಮಿಕವಾದ ದಾಳಿಯಿಂದ ಕಾತಲೂಖಾನನ ಸೈನಿಕರಲ್ಲಿ ಎಷ್ಟೋ ಜನರು ಮಲಗಿದ್ದ ಸ್ಥಳದಲ್ಲಿಯೆ ತುಂಡರಿಸಲ್ಪಟ್ಟರು. ಎಷ್ಟೋ ಜನರು ಶಸ್ತ್ರಾಸ್ತ್ರಗಳನ್ನು ಹುಡುಕುತ್ತಿ ರುವಾಗ ನಾಶಗೊಳಿಸಲ್ಪಟ್ಟರು. ಅಂತಕನ ಕೋಲಾಹಲವೇ ನಡೆಯಿ ತೆಂದು ಜೀವದಿಂದುಳಿದವರು ಗಾಬರಿಗೊಂಡರು. ಅತ್ಯಲ್ಪ ವೇಳೆಯಲ್ಲಿ ಕರೀಮುಶಹನು ಶಿಬಿರವನ್ನು ಸ್ವಾಧೀನಕ್ಕೆ ತೆಗೆದುಕೊಂಡು, ಜೀವದಿಂದು ಳಿದ ಶತ್ರುಸೈನ್ಯವನ್ನು ಕೈಸೆರೆ ಹಿಡಿದನು. ಅನಂತರದಲ್ಲಿ ಅವನು ದೀನ ಕೃಷ್ಣನ ಸಹಾಯಕ್ಕಾಗಿ ನಡೆದನು. ಅವನು ಕಾತಲೂಖಾನನ ಎರಡೂ ಅಗ್ನಿಗೋಲಕ ಯಂತ್ರಗಳನ್ನು ಸ್ವಾಧೀನಕ್ಕೆ ತೆಗೆದುಕೊಂಡಿದ್ದನು.

ನರಾಜ-ಚೌಘುರಗಳ ಮಧ್ಯದಲ್ಲಿ ದೀನಕೃಷ್ಣನಿಗೂ ಕಾತಲೂಖಾನನಿಗೂ ನಿಕರವಾದ ಯುದ್ಧವು ನಡೆದಿರುವದೆಂಬದು ತಿಳಿದೊಡನೆಯೆ ಅವನು ಅಗ್ನಿ ಗೋಲಕ ಯಂತ್ರಗಳಿಗೆ ಚಾಲನೆ ಕೊಟ್ಟನು. ಕರೀಮುಶಹನು ದೀನ ಕೃಷ್ಣನ ಸೈನ್ಯವನ್ನು ಕೂಡಿದೊಡನೆಯೆ ನಿಜಸ್ಥಿತಿಯು ಕಾತಲೂಖಾನನಿಗೆ ತಿಳಿಯಿತು. ಕರೀಮುಶಹನು ತನ್ನ ಶಿಬಿರವನ್ನು ಸ್ವಾಧೀನಪಡಿಸಿಕೊಂಡಿ ರುವನೆಂಬದು ಗೊತ್ತಾದ ಕೂಡಲೆ ಅವನು ಅತ್ಯಂತ ತ್ವೇಷಗೊಂಡನು. ಎರಡೂ ಸೈನ್ಯಗಳ ನಡುವೆ ಆವೇಶದ ಸಂಗರವು ನಡೆಯಿತು. ಕರೀಮು ಶಹನು ತನ್ನ ಎರಡೂ ಅಗ್ನಿಗೋಲಕ ಯಂತ್ರಗಳಿಗೆ ವೇಗದಿಂದ ಚಾಲನೆ ಕೊಟ್ಟದ್ದರಿಂದ ಕಾತಲೂಖಾನನ ಸೈನ್ಯವು ಹೆಚ್ಚಾಗಿ ನಾಶವಾಗ ತೊಡಗಿತು.

ಕೆಚ್ಚೆದೆಯುವನಾದ ಕಾತಲೂಖಾನನು ತನ್ನ ಕಟ್ಟಾಳುಗಳಿಗೆ ಪ್ರೋತ್ಸಾಹನೆ ಕೊಡುತ್ತ ಶತ್ರುಪ್ರತಿಕಾರ ಮಾಡಲಾರಂಭಿಸಿದ್ದನು. ವೈರಿಗಳ ಬಲವಾದ ಹೊಡತಕ್ಕೆ ಸೈನ್ಯವು ಬಹುಮಟ್ಟಿಗೆ ನಾಶವಾಗಿತ್ತು. ಪಲಾಯನದ ಹೊರತು ಗತ್ಯಂತರವಿಲ್ಲವೆಂದು ಪಠಾಣಸೈನಿಕರಿಗೆ ಚೆನ್ನಾಗಿ ಗೊತ್ತಾಯಿತು. ಇಷ್ಟರಲ್ಲಿ ದೀನಕೃಷ್ಣ-ಕರೀಮುಶಹರು ತಮ್ಮ ಸೈನ್ಯದ ವ್ಯೂಹವನ್ನು ರಚಿಸಿ, ಪಠಾಣ ಸೈನಿಕರನ್ನು ಒಳ್ಳೇ ಇಕ್ಕಟ್ಟಿನಲ್ಲಿ ತಂದಿ ದ್ದರು. ಒಂದು ಕಡೆಯಲ್ಲಿ ಕರೀಮುಶಹನ ಸೈನ್ಯವೂ ಮತ್ತೊಂದು ಕಡೆಗೆ ದೀನಕೃಷ್ಣನ ಸೈನ್ಯವೂ ಇನ್ನೊಂದು ಕಡೆಗೆ ನದಿಯೂ ನಾಲ್ಕ ನೆಯ ನಿಟ್ಟಿಗೆ ಪರಾಭೂತವಾಗಿ ಕರೀಮುಶಹನ ಆಧಿಪತ್ಯದಲ್ಲಿದ್ದ ಕಾತಲೂ ಖಾನನ ಪಠಾಣಸೈನ್ಯವೂ ಇತ್ತು. ಕಾತಲೂಖಾನನ ಸೈನ್ಯದವರಿಗೆ ಓಡಿ ಹೋಗಿ ಜೀವವುಳಿಸಿಕೊಳ್ಳಲಿಕ್ಕೆ ಸಹ ಮಾರ್ಗವಿಲ್ಲದಾಗಿತ್ತು. ಕಾತಲೂ ಖಾನನು ಒಳ್ಳೆಯ ಧೈರ್ಯದಿಂದ ತನ್ನ ಕೆಲವು ಕುದುರೆಯ ರಾಹುತ ರೊಡನೆ ಹಿಂದು ಸೈನ್ಯದ ವ್ಯೂಹವನ್ನು ಭೇದಿಸಿ ಪಲಾಯನ ಮಾಡಿದನು. ಎಷ್ಟೋ ಜನರು ಜೀವವುಳಿಸಿಕೊಳ್ಳುವದಕ್ಕಾಗಿ ನದಿಯಲ್ಲಿ ಬಿದ್ದರು; ನದಿಯಲ್ಲಿ ಬಿದ್ದ ಜನರೊಳಗೆ ಬಹು ಜನರು 'ಸಮುದ್ರಾಸ್ತ್ರಪ್ಯಂತು' ಎಂದು ತಮ್ಮ ದೇಹವನ್ನು ಜಲದೇವತೆಗೆ ಸಮರ್ಪಿಸಿ ಬಿಟ್ಟರು!

ನದಿಯಲ್ಲಿ ಈಸಿ ಹೋದ ಜನರೂ, ಸಮರಾಂಗಣದಿಂದ ಓಡಿ ಹೋದವರೂ ಪಾರಾದೆವೆಂದು ಸಂತೋಷಬಡುವಂತಿದ್ದಿಲ್ಲ. ಅಂತಹ ಜನರನ್ನು ಸೆರೆ ಹಿಡಿಯುವದಕ್ಕಾಗಿ ರಾಣಿಯು ನಗರಪಾಲನಿಗೆ ಆಜ್ಞಾಪಿಸಿದ್ದಳು. ನಗರಪಾಲನು ಅಲ್ಲಲ್ಲಿಗೆ ಸೈನ್ಯವನ್ನಿರಿಸಿ, ಓಡಿಹೋಗುವ ಪಠಾಣರನ್ನು ಸೆರೆಹಿಡಿಯ ತೊಡಗಿದ್ದನು. ಕಾತಲೂಖಾನನ ಸಂಗಡ ಓಡಿ ಹೋದ ಕೆಲವು ಅಶ್ವಸೇನೆಯ ಹೊರತು ಜೀವದಿಂದುಳಿದ ಸೈನಿಕರೆಲ್ಲರೂ ನಗರಪಾಲನ ಕೈಸೆರೆಯಲ್ಲಿ ಸಿಕ್ಕರು. ಅಷ್ಟರಲ್ಲಿ ಭಗವಾನ್ ಭಾಸ್ಕರನು ಉದಯಿಸಿದನು. ಎಲ್ಲ ಕಡೆಯಲ್ಲಿ ಸೂರ್ಯಪ್ರಕಾಶವು ಬಿದ್ದು, ಶವಮಯವಾದ ರಣವು ಭೀಷಣವಾಗಿ ತೋರಲಾರಂಭಿಸಿತು. ವಿಲಕ್ಷಣವಾದ ವಿಜಯವನ್ನು ಸಂಪಾದಿಸಿದ ದೀನಕೃಷ್ಣ-ಕರೀಮಶಹ-ನಗರಪಾಲರು ಅತ್ಯಾನಂದದಿಂದ ಕಟಕವಾರಣಾಶಿ ರಾಜಧಾನಿಗೆ ತೆರಳಿದರು.

ರಾಣಿಯು ಅದ್ವಿತೀಯ ರಾಜಕಾರಸ್ಥಾನದಿಂದ ವಿಲಕ್ಷಣವಾದ ವಿಜಯ ಸಂಪಾದನೆ ಮಾಡಿದಳು. ಅವಳು ಜನಾರ್ದನ ಮಂತ್ರಿಯ ಕಡೆಗೆ ಭೃಗುರಾಮನ ಪತ್ರವನ್ನು ಕಳುಹಿಸಿ, ಬಂಗಾಲೀ ಸೇನಾಪತಿಯಾದ ಗದಾಧರನು ತನ್ನ ಮೇಲೆ ದಂಡೆತ್ತಿ ಬರುವನೆಂಬ ಭಾವನೆಯನ್ನು ಅವನಲ್ಲಿ ಹುಟ್ಟಿಸಿದಳು. ದೀನಕೃಷ್ಣ ಸೇನಾಪತಿಯು ಚೌಘುರದಲ್ಲಿ ತಳ ವೂರಿಕೊಂಡು ಕುಳಿತಿರುವನೆಂದು ಕಾತಲೂಖಾನನಿಗೆ ನಟವರನ ಮುಖಾಂತರವಾಗಿ ಒಳ್ಳೇ ಯುಕ್ತಿಯಿಂದ ತಿಳಿಸಿದಳು. ಇವೆರಡೂ ಸಂಗತಿಗಳಿಂದ ಯೋಗ್ಯವಾದ ಪರಿಣಾಮವಾಗುವದೆಂದು ರಾಣಿಯು ನಿಶ್ಚಯ ಪೂರ್ವಕವಾಗಿ ತಿಳಿದಿದ್ದಳು. ದೀನಕೃಷ್ಣನ ಸೈನ್ಯವೆಂದು ತಿಳಿದು ಕಾತಲೂಖಾನನು ಜನಾರ್ದನನ ಸೈನ್ಯದ ಮೇಲೆ ದಾಳಿಯ ಮಾಡಬೇಕೆಂದು ರಾಣಿಯ ಯೋಚನೆಯಿತ್ತು. ಪಠಾಣ ಸೈನ್ಯವು ಚೌಘುರವನ್ನು ಸಮೀಪಿಸಿದೊಡನೆಯೆ, ಆ ಸೈನ್ಯದ ಮೇಲೆ ಬಾಣ ಹೊಡೆಯಬೇಕೆಂದು ಅವಳು ಕೆಲವು ಸೈನಿಕರನ್ನು ಈ ಕಾರ್ಯಕ್ಕಾಗಿ ಯೋಜನೆ ಮಾಡಿದ್ದಳು. ಪಠಾಣ ಸೈನ್ಯವನ್ನು ಸಿಟ್ಟಿಗೆಬ್ಬಿಸಿ, ಜನಾರ್ದನನ ಸೈನ್ಯವನ್ನು ನಾಶಗೊಳಿಸ ಹಚ್ಚಬೇಕೆಂದೇ ಅವಳು ಹೀಗೆ ತಂತ್ರ ಮಾಡಿದ್ದಳು. ಪಠಾಣ

ಸೈನ್ಯದಿಂದ ಜನಾರ್ದನನ ಸೈನ್ಯವು ಪರಾಭೂತವಾಗುವದೆಂದು ಅವಳು ತಿಳಿದಿದ್ದಳು. ಆ ಸೈನ್ಯವು ಓಡಿ ಹೋಗುವಾಗ ಅದರ ಮೇಲೆ ತುಬಾಕಿಗಳನ್ನು ಹಾರಿಸಬೇಕೆಂದು ರಾಣಿಯು ನಗರಪಾಲನಿಗೆ ಆಜ್ಞಾಪಿಸಿದ್ದಳು. ಇದರಿಂದ ಪಠಾಣ ಸೈನ್ಯವು ಜನಾರ್ದನನ ಸೈನ್ಯಕ್ಕೆ ಬೆನ್ನಟ್ಟಿರುವದೆಂದು ತಿಳಿದುಕೊಂಡು, ಅದು ಓಡಿ ಓಡಿ ದಣಿಯಬೇಕೆಂದು ಅವಳ ಯತ್ನವಿತ್ತು. ಓಡಿ ದಣಿದ ಸೈನ್ಯವನ್ನು ಸುಗ್ಗು ಮಾಡಿ, ಜನಾರ್ದನನನ್ನು ಸೆರೆಹಿಡಿದುಕೊಂಡು ಬರಬೇಕೆಂದು ಅವಳು ಗದಾಧರನಿಗೆ ಅಪ್ಪಣೆಯಿತ್ತಿದ್ದಳು. ಚೌಫುರದಿಂದ ನರಾಜಕ್ಕೆ ಹೊರಟ ವಿಜಯುಶಾಲಿಯಾದ ಕಾತಲೂಖಾನನ ಸೈನ್ಯವನ್ನು ಮುತ್ತಬೇಕೆಂದು ರಾಣಿಯು ದೀನಕೃಷ್ಣ ಸೇನಾಪತಿಯನ್ನು ಕಳುಹಿಸಿದ್ದಳು. ನರಾಜದಲ್ಲಿದ್ದ ಖಾನನ ಶಿಬಿರವನ್ನು ವಶಪಡಿಸಿಕೊಂಡು, ದೀನಕೃಷ್ಣನಿಗೆ ನೆರವಾಗಬೇಕೆಂದು ರಾಣಿಯು ಮೂರನೇ ಸೇನಾಪತಿಯಾದ ಕಶೀಮುಶಪನಿಗೆ ಕಟ್ಟಪ್ಪಣೆ ಮಾಡಿದ್ದಳು. ಪಾತಾಳಯಂತ್ರಿಯಾದ ರಾಣಿಯು ಎಲ್ಲ ಕಾರಸ್ಥಾನಗಳು ಹೇಗೆ ಫಲದ್ರೂಪವಾದವೆಂಬದು ವಾಚಕರಾಶಯರ ನಿದರ್ಶನಕ್ಕೆ ಬಂದಿರುವದು. ಅವಳು ಓಲಗವನ್ನು ನೆರೆಯಿಸಿ, ತನ್ನ ಕಾರಸ್ಥಾನದ ಬಗ್ಗೆ ಯಾರಿಂದಲೂ ಅಭಿಪ್ರಾಯ ಪಡೆದಿರಲಿಲ್ಲ ಒಬ್ಬನಿಗಾದ ಆಜ್ಞೆಯು ಮತ್ತೊಬ್ಬನಿಗೆ ಗೊತ್ತಿದ್ದಿಲ್ಲ. ಕಾರಸ್ಥಾನವು ಬೈಲಿಗೆ ಬಿದ್ದರೆ, ಕಾರ್ಯ ನಾಶವಾಗುವದೆಂದು ಅವಳು ಅತ್ಯಂತ ಗುಪ್ತರೀತಿಯಿಂದ ತನ್ನ ವ್ಯೂಹವನ್ನು ರಚಿಸಿದ್ದಳು. ಎಲ್ಲ ಮಂತ್ರಿ ಸೇನಾಪತಿಗಳು ರಾಜಧಾನಿಯಲ್ಲಿ ಕೂಡಿ ಬಹಳ ವೇಳೆಯ ವರೆಗೆ ಆಟದಾಟ ಮಾಡಿದ ಮೇಲೆ ರಾಣಿಯು ಕಾರಸ್ಥಾನದ ಎಲ್ಲ ಮರ್ಮವನ್ನು ತಿಳಿದು, ಆ ಅಧಿಕಾರಿಗಳು ಅವಳನ್ನು ಚನ್ನಾಗಿ ಕೊಂಡಾಡಿದರು.

ವಿಲಕ್ಷಣ ವಿಜಯದ ಸುವಾರ್ತೆಯನ್ನು ಕೇಳಿ ರಾಜಧಾನಿಯೊಳಗಿನ ಜನರು ಆನಂದಶರಧಿಯಲ್ಲಿ ಮುಳುಗೇಳತೊಡಗಿದರು. ಅವರು ವಿಜಯಿ ಸೈನ್ಯದ ಸ್ವಾಗತದ ಅಪೂರ್ವ ಸಿದ್ಧತೆಯನ್ನು ಮಾಡಿದ್ದರು. ತನ್ನ ಕಾರಸ್ಥಾನವು ಸಂಪೂರ್ಣವಾಗಿ ಫಲದ್ರೂಪವಾದದ್ದರಿಂದ ರಾಣಿಯು

ಆನಂದಭರಿತಳಾಗಿದ್ದಳು. ಅವಳು ಉತ್ತಮೋತ್ತಮವಾದ ವಸ್ತ್ರಾಲಂಕಾರ-ಮುಕುಟಗಳನ್ನು ಧರಿಸಿ ಸ್ವಾಗತ ಸಮಾರಂಭದಲ್ಲಿ ಭಾಗ ತೆಗೆದುಕೊಂಡಿದ್ದಳು. ಅಷ್ಟರಲ್ಲಿ ವಿಜಯವನ್ನು ಸಂಪಾದಿಸಿದ ದೀನ ಕೃಷ್ಣ, ಕರೀಮುಶಹ, ನಗರಪಾಲ, ಗದಾಧರ ಮೊದಲಾದವರು ತಮ್ಮ ಸೈನ್ಯ ಸಹಿತವಾಗಿ ರಾಜಧಾನಿಯನ್ನು ಪ್ರವೇಶಿಸಿದರು. "ಜಯ ಜಗನ್ನಾಥ!" ಎಂಬ ವಿಜಯಧ್ವನಿಯಿಂದ ದಶದಿಶೆಗಳು ನಿನಾದಗೊಂಡವು. ವಿಜಯಿಗಳಾದ ಸೇನಾಪತಿಗಳೂ ಸೈನಿಕರೂ ರಾಣಿಯನ್ನು ಕಂಡು ಭಕ್ತಿಪುರಸ್ಸರವಾಗಿ ಪ್ರಣಾಮಗಳನ್ನು ಸಮರ್ಪಿಸಿದರು.

---

## ಅನಿಷ್ಟ ವಾರ್ತೆ.

ರಾಣೀ ವ್ರಜಸುಂದರಿಯು ಚಿತ್ರಾಭುವನದಲ್ಲಿ ಉಷಾಸುಂದರಿಯೊಡನೆ ಮಾತನಾಡುತ್ತ ಕುಳಿತಿದ್ದಳು. ರಾಣಿಯ ರಾಜಕಾರಣ ಕುಶಲತೆಯನ್ನು ಕಂಡು ಉಷಾಸುಂದರಿಯು ಅವಳ ಗುಣವರ್ಣನೆಯನ್ನು ಮನಸೋಕ್ತವಾಗಿ ಮಾಡತೊಡಗಿದ್ದಳು. ಒಬ್ಬ ಬಡಬ್ರಾಹ್ಮಣನ ಪುತ್ರಿಯು ಓರಿಸಾದ ರಾಜ್ಯಸೂತ್ರಗಳನ್ನು ಕೈಯಲ್ಲಿ ತೆಗೆದುಕೊಂಡು, ಅದ್ವಿತೀಯ ಕುಶಲತೆಯಿಂದ ಕಾರ್ಯಭಾರವನ್ನು ಸಾಗಿಸುತ್ತಿರುವದು ಅವಳಿಗೆ ಒಳ್ಳೇ ವಿಸ್ಮಯವನ್ನುಂಟು ಮಾಡಿತ್ತು. ಈ ಬಂಗಾಲೀ ರಾಣಿಯು ಸ್ವಲ್ಪ ದಿವಸಗಳಲ್ಲಿ ಪ್ರಜೆಗಳ ಪ್ರೇಮಾದರಕ್ಕೆ ಪಾತ್ರಳಾಗಿದ್ದಳು. ಮುಖ್ಯ ಮಂತ್ರಿ-ಸೇನಾಪತಿಗಳೂ ದೊಡ್ಡ ದೊಡ್ಡ ಮಂಡಲೇಶ್ವರರೂ ಇವಳನ್ನು ಸನ್ಮಾನಿಸುತ್ತಿದ್ದರು. ರಾಣಿಯೆಂದರೆ ಪ್ರತ್ಯಕ್ಷ ದೇವತೆಯೆಂದು ಜನರ ಭಾವನೆಯಾಗಿತ್ತು. ಅವರು ರಾಜಾ ಮುಕುಂದದೇವನನ್ನು ಸಂಪೂರ್ಣವಾಗಿ ಮರೆತುಬಿಟ್ಟಿದ್ದರು. ಒಂದುವೇಳೆ ಅರಸನ ಆಗಮನವಾದರೂ ರಾಜ್ಯಸೂತ್ರಗಳನ್ನು ನಿಮ್ಮ ಕೈಯಲ್ಲಿಯೇ ಇಟ್ಟುಕೊಳ್ಳಬೇಕೆಂದು ಎಲ್ಲ ಜನರು ಅವಳಿಗೆ ಹೇಳತೊಡಗಿದ್ದರು. ಸಮುದ್ರ ತೀರದ ಒಂದು ಮುರುಕ ಗುಡಿಸಲಲ್ಲಿ ಕಾಲಕ್ಷೇಪ ಮಾಡುತ್ತಿದ್ದ ವ್ರಜಬಾಲೆಯು ತನ್ನ

ಅನುಪಮವಾದ ಸದ್ಗುಣ ಪ್ರಭಾವದಿಂದಲೇ ಕೀರ್ತಿವಂತಳಾದಳೆಂದು ಉಷಾಸುಂದರಿಯು ತಿಳಿದಳು.

ರಾಜ್ಯಸೂತ್ರಗಳನ್ನು ಕೈಯಲ್ಲಿ ತೆಗೆದುಕೊಂಡು ಉತ್ತಮವಾದ ರೀತಿಯಿಂದ ರಾಜ್ಯಕಾರ್ಯವನ್ನು ಸಾಗಿಸಲಿಕ್ಕೆ ಪುರುಷನೇ ಯೋಗ್ಯ ನೆಂದು ವ್ರಜಸುಂದರಿಯ ಅಭಿಪ್ರಾಯವಿತ್ತು. ಸ್ತ್ರೀಯರು ಎಷ್ಟೇ ಪ್ರಬಲರಾದರೂ ಅವರ ಹೃದಯವು ಅಬಲವಾದದ್ದೇ ಇರುತ್ತದೆಂಬದು ಸ್ವಾನುಭವದಿಂದ ಅವಳಿಗೆ ಗೊತ್ತಾಗಿತ್ತು. ಅದಕ್ಕಾಗಿ ಅವಳು ಈ ವಿಷಯದಲ್ಲಿ ರಾಜನಿಗೆ ಪತ್ರವನ್ನಾದರೂ ಒರೆದಿದ್ದಳು. ಕಾತಲೂ ಖಾನನು ತೀರ ಅಪಮಾನಕಾರಕವಾದ ಪರಾಭವವನ್ನು ಹೊಂದಿದ್ದರಿಂದ ಕಾಳಾಪಹಾಡ ಸೇನಾಪತಿಯು ರೊಚ್ಚಿಗೆದ್ದು ರಾಜಧಾನಿಯನ್ನು ಮುತ್ತುವ ನೆಂದು ಅವಳಿಗೆ ಗೊತ್ತಾಗಿತ್ತು. ಈ ಪ್ರಸಂಗದಲ್ಲಿ ರಾಜ್ಯಭಾರವನ್ನು ಅರಸನಿಗೊಪ್ಪಿಸಿ ತಾನು ಕೇವಲ ಮಾರ್ಗದರ್ಶಕಳಾಗಿರುವದು ಒಳಿತೆಂದು ಅವಳ ಭಾವನೆಯಾಗಿತ್ತು. ಜನಾರ್ದನ ಮಂತ್ರಿಯು ಹಾಗು ಕಾತಲೂ ಖಾನನ ಪರಾಭವದ ಸುದ್ದಿಯನ್ನು ಅವಳು ಅರಸನಿಗೆ ತಿಳಿಸಿ, ಬೇಗನೆ ರಾಜಧಾನಿಗೆ ಹೊರಟುಬರಬೇಕೆಂದು ಸಂದೇಶ ಕಳುಹಿಸಿದ್ದಳು. ತನ್ನ ಪತ್ರಕ್ಕೆ ಅರಸನಿಂದ ಉತ್ತರವು ಬಾರದ್ದರಿಂದ ಅವಳು ಉದ್ವಿಗ್ನಮನಸ್ಕ ಳಾಗಿ ಕುಳಿತಿದ್ದಳು. ಅಷ್ಟರಲ್ಲಿ ಒಬ್ಬ ದೂತನು ಅಲ್ಲಿಗೆ ಬಂದು ರಾಣಿಗೆ ನೆಲಮುಟ್ಟಿ ನಮಸ್ಕಾರ ಮಾಡಿ ಒಂದು ಪತ್ರವನ್ನು ಅವಳ ಸ್ವಾಧೀನ ಮಾಡಿದನು. ಆ ಪತ್ರವು ಅರಸನದೇ ಎಂದು ತಿಳಿದು ರಾಣಿಯು ಪತ್ರದೊಳಗಿನ ಸಂಗತಿಗಳನ್ನು ಓದತೊಡಗಿದಳು:

"ಪ್ರಿಯ ರಾಣಿ ವ್ರಜಸುಂದರಿ!

ನಿನ್ನ ಪತ್ರವು ತಲುಪಿ ಅತ್ಯಾನಂದವಾಯಿತು. ಅದ್ವಿತೀಯ ರಾಜಕಾರಣ ಕುಶಲಿಂದ ಸಹ ನೀಗದ ಕಾರ್ಯವನ್ನು ನೀನು ಈಡೇರಿಸಿ, ಉತ್ಕಲ ದೇಶದ ಮೇಲೆ ಮಹತ್ತರವಾದ ಉಪಕಾರವನ್ನು ಮಾಡಿರುವೆ. ಬಂಡುಗಾರನಾದ ಜನಾರ್ದನನನ್ನೂ ರಾಜದ್ರೋಹಿಯಾದ ಭೃಗುರಾಮ ನನ್ನೂ ಹಿಡಿದು, ಕಾರಾಗೃಹದಲ್ಲಿರಿಸಿದ ಸಂಗತಿಯು ಅವರ್ಣನೀಯ

ಏರುವದು. ವಂಗ ಸೇನಾಪತಿಯಾದ ಕಾತಲೂಖಾನನನ್ನು ಪರಾಭವ ಗೊಳಿಸಿದ ಸಂಗತಿಯು ಅಶ್ರುತಪೂರ್ವವಿರುವದು. ಸದ್ಯದ ವಿಜಯವು ನಿನ್ನಿಂದಲೇ ದೊರೆತಿರುವದು. ನಿನ್ನ ಸ್ಥಳದಲ್ಲಿ ನಾನಿರುತ್ತಿದ್ದರೆ, ನನ್ನಿಂದ ಇಷ್ಟು ಕೆಲಸವಾಗುತ್ತಿದ್ದಿಲ್ಲ.

ನೀನು ರಾಜಪರಿವಾರಕ್ಕೂ, ರಾಜ್ಯಾಧಿಕಾರಿಗಳಿಗೂ, ಪ್ರಜಾಜನ ರಿಗೂ ಪ್ರೀತ್ಯಾಸ್ಪದಳಾಗಿ ರಾಜ್ಯ ಶಕಟವನ್ನು ನಡೆಯಿಸುತ್ತಿರುವ ಸಂಗ ತಿಯು ಸಾಮಾನ್ಯವಾದದ್ದೇ? ಪರಂಪರವಾಗಿ ರಾಜ್ಯವಾಡಳಿತ ಸಾಗಿ ಸುತ್ತ ಬಂದವರಲ್ಲಿ ಸಹ ಇಂತಹ ಆಳಿಕೆಯ ಶಕ್ತಿಯು ಇರಲಾರದು. ರಾಜಕಾರಣವೇನೆಂಬದನ್ನು ಎಂದೂ ಅರಿಯದ ಒಬ್ಬ ಒಡಬ್ರಾಹ್ಮಣನ ಕುಮಾರಿಯು ಈ ಬಗೆಯ ಅದ್ಭುತವಾದ ಕಾರ್ಯವನ್ನು ನೆರವೇರಿಸಿದುದು ಉತ್ಕಲದ ಇತಿಹಾಸದಲ್ಲಿ ಚಿರಸ್ಮರಣೀಯವಾಗುವದೆಂಬದರಲ್ಲಿ ಸಂದೇಹ ವಿಲ್ಲ.

ಪ್ರಿಯ ವ್ರಜ, ಜನಾರ್ದನನ ಕುಮಾರನಾದ ಹರಿಕೀರ್ತನನು ಬಂಡಾಯವನ್ನೆಬ್ಬಿಸಬೇಕೆಂದು ದಂಡು ಕೂಡಿಸತೊಡಗಿರುವನು. ಕಾಳಾ ಪಹಾಡನೂ ರಾಜಧಾನಿಯ ಮೇಲೆ ದಂಡೆತ್ತಿ ಬರಬಯಸಿದಾಗಿದೆ. ಸದ್ಯದ ವಿಜಯದಿಂದ ರಾಜ್ಯವು ಕಂಟಕಹೀನವಾಯಿತೆಂದು ತಿಳಿಯಲಿಕ್ಕೆ ಬರುವ ದಿಲ್ಲ. ನಾನು ಬೇಗನೆ ನಿನ್ನ ದರ್ಶನಕ್ಕಾಗಿ ಬರುವೆನು. ಈಗ ಓರಿಸಾದ ರಾಣಿಯಾದ ನೀನು ನಾನು ನಮ್ಮ ರಾಜಧಾನಿಗೆ ಬಂದ ಮೇಲೆ ನನ್ನ ರಾಣಿಯಾಗುವೆಯೆಂದು ನಂಬಿರುವೆನು. ನಿನ್ನ ಮೃದುವಾದ ಕಪೋಲ ಗಳನ್ನು ಚುಂಬಿಸುತ್ತ ರಾಜಕಾರಣವನ್ನು ನಡೆಯಿಸುವಾಗ ನನಗೆ ಸ್ವರ್ಗೀಯವಾದ ಆನಂದವು ಲಭಿಸುವದೆಂದು ಭಾವಿಸಿರುವೆನು.

ನಿನ್ನ ಕೃಪಾಭಿಲಾಷಿಯಾದ—

ಮುಕುಂದದೇವ.''

ರಾಣಿಯು ಪತ್ರವನ್ನೋದಿದಳು. ಆಗ ಅವಳ ಹೃದಯವು ನಾನಾ ಪ್ರಕಾರದ ವಿಚಾರಗಳಿಂದ ಆಲ್ಲೋಲಕಲ್ಲೋಲವಾಗತೊಡಗಿತ್ತು. ತಾನು ವಿಜಯಸಂಪಾದನೆಯನ್ನು ಮಾಡಿದ್ದರಿಂದ ದೇಶವು ನಿಷ್ಕಂಟಕವಾಗಿಲ್ಲವೆಂ

ಬದು ಅವಳಿಗೆ ಗೊತ್ತಿದ್ದರೂ, ಬಂಡುಗಾರರು ಮತ್ತೆ ತಲೆಯೆತ್ತತೊಡ ಗಿರುವರೆಂಬ ಸಂಗತಿಯು ಅವಳ ಹೃದಯಕ್ಕೆ ಬಲವಾದ ಆಘಾತವನ್ನುಂಟು ಮಾಡಿತು. ಹರಿಕೀರ್ತನನು ಉತ್ಕಲದ ಪ್ರಜೆಯಾಗಿದ್ದರೂ, ತಂದೆ ಯಂತೆ ದೇಶವನ್ನು ಮುಳುಗಿಸಲು ಪ್ರವೃತ್ತನಾದದ್ದರಿಂದ ಅವಳು ಬಹಳೇ ವ್ಯಥೆಗೊಂಡಳು. ರಾಜನು ರಾಜಕಾರಣಕ್ಕಿಂತ ವಿಷಯೋಪಭೋಗದ ಕಡೆಗೆ ಬಹಳೇ ಲಕ್ಷ್ಯಗೊಡತೊಡಗಿದ್ದರಿಂದ ಅವಳ ಮನಸ್ಸಿನ ಪರಿತಾಪ ವು ದ್ವಿಗುಣಿತವಾಯಿತು. ಕಾಳಾಪಹಾಡನ ದಾಳಿಗೆ ಅವಳು ಅಷ್ಟೊಂದು ಮಹತ್ವಕೊಟ್ಟಿದ್ದಿಲ್ಲ. ದೇಶದೊಳಗಿನ ಒಡಕು ನಾಶವಾಗಿ ಐಕ್ಯದಿಂದ ಕಾದಿದರೆ ಗಣಧುರಂಧರನಾದ ಕಾಳಾಪಹಾಡನನ್ನು "ತ್ರಾಹಿ ಭಗವನ್" ಎಂದೆನಿಸಿ ಬಿಡುವೆನೆಂದು ಅವಳು ಎದೆಗೊಂಡಿದ್ದಳು. ಯುವರಾಜನಾದ ರಾಮಚಂದ್ರದೇವನು ಅವನ ಸೈನ್ಯಕ್ಕೆ ಪ್ರತೀಕಾರ ಮಾಡದಿರಲಾರ ನೆಂದೂ, ಅವನ ಸಹಾಯಕ್ಕೆ ತನ್ನ ಸೇನಾಪತಿಗಳನ್ನೂ ಸೈನ್ಯವನ್ನೂ ಕಳುಹಿಸಬೇಕೆಂದೂ ಅವಳು ನಿರ್ಧರಿಸಿಕೊಂಡಳು. ಅಷ್ಟರಲ್ಲಿ ಸಭೆಯು ವೇಳೆಯಾದ್ದರಿಂದ ಅವಳು ಉಷಾಸುಂದರಿಯೊಡನೆ ಚಿತ್ರಾಭುವನದಿಂದ ಹೊರಟಳು.

ರಾಜ ಸಭೆಯಲ್ಲಿ ಮಂತ್ರಿ-ಸೇನಾನಾಯಕರೂ ಸರದಾರ ಸಾಮಂ ತರೂ ಕುಳಿತಿದ್ದರು. ರಾಣಿಯು ಆಗಮನವಾದೊಡನೆಯೆ ಎಲ್ಲ ಜನರು ಆಸನದಿಂದೆದ್ದು ಅವಳಿಗೆ ವಂದನೆಗಳನ್ನರ್ಪಿಸಿದರು. ರಾಣಿಯು ಸಿಂಹಾ ಸನದ ಬಳಿಯಲ್ಲಿದ್ದ ಉಚ್ಚಾಸನದಲ್ಲಿ ಮಂಡಿಸಿದಳು. ಉಷಾಸುಂದರಿ ಯಾದರೂ ಅವಳ ಬಳಿಯಲ್ಲಿದ್ದ ಆಸನದಲ್ಲಿ ಕುಳಿತುಕೊಂಡಳು. ಅಂದು ರಾಜದ್ರೋಹಿಗಳಾದ ಜನಾರ್ದನ-ಭೃಗುರಾಮರ ಅಪರಾಧಗಳ ವಿಚಾರಣೆಯಾಗತಕ್ಕದಿದ್ದುದರಿಂದ ಪ್ರಜಾಪರಿವಾರವಾದರೂ ಓಲಗ ದಲ್ಲಿ ನೆರೆದಿತ್ತು. ರಾಣಿಯು ತೀರ್ಪು ಏನಾಗುವದೋ ಕೇಳಬೇಕೆಂದು ಎಲ್ಲರೂ ಆತುರಗೊಂಡಿದ್ದರು. ಮಂತ್ರಿದ್ವಯರ ಅಪರಾಧವು ಮಹ ತ್ತರವಿದ್ದುದರಿಂದ ರಾಣಿಯು ಅವರನ್ನು ಆನೆಯ ಕಾಲಿಗೆ ಕಟ್ಟಿಸಿ ಯಾಗಲಿ, ಶಿರಚ್ಛೇದನ ಮಾಡಿಸಿಯಾಗಲಿ ಕೊಲ್ಲಿಸುವಳೆಂದು ಜನರು ತಿಳಿ

ದಿದ್ದರು; ಅಗ್ನಿಗೋಲಕಗಳ ಯಂತ್ರದ ಬಾಯಲ್ಲಿ ಅವರನ್ನು ಕೊಡುವ ಳೆಂದು ಕೆಲವು ಜನರ ತಿಳುವಳಿಕೆಯಾಗಿತ್ತು. ಎಲ್ಲ ಜನರೂ ಇದೇ ಸುದ್ದಿಯನ್ನು ಕುಚು ಕುಚು ಮಾತಾಡತೊಡಗಿದ್ದರು. ರಾಜಧಾನಿ ಯಲ್ಲಿ ಜನಾರ್ದನನ ಪಕ್ಷದವರು ಇದ್ದಿಲ್ಲ; ಭೃಗುರಾಮನ ಪಕ್ಷ ಪಾತಿಗಳು ಮಾತ್ರ ಕೆಲವರಿದ್ದರು. ರಾಣಿಯು ವರ್ಚಸ್ಸಿಗೆ ಆ ಜನರು ಭಯಭೀತರಾಗಿ ಮೌನ ತಾಳಿದ್ದರು. ರಾಜಧಾನಿಯಲ್ಲಿ ಬಹು ಜನರು ರಾಣಿಯಲ್ಲಿ ಭಕ್ತಿವಿಶ್ವಾಸವುಳ್ಳವರಾಗಿದ್ದರಿಂದ ಅಲ್ಪಸಂಖ್ಯಾಕರಾದ ಭೃಗು ರಾಮನ ಪಕ್ಷದ ಜನರ ಆಟವೇನೂ ನಡೆಯುದಾಗಿತ್ತು. ಅವರು ಮನಸ್ಸಿ ನೊಳಗೆ ಕುದಿಯುತೊಡಗಿದ್ದರು. ಭೃಗುರಾಮ-ಜನಾರ್ದನರು ಅರಸನ ವಿರುದ್ಧವಾಗಿ ಕಾರಸ್ಥಾನವನ್ನು ನಡೆಯಿಸಿದ ಸಂಗತಿಯು ಬಹಳ ದಿನಗಳ ಪೂರ್ವದಲ್ಲಿಯೇ ಎಲ್ಲ ಜನರಿಗೆ ಗೊತ್ತಾಗಿತ್ತು. ಜನಾರ್ದನನು ತನ್ನ ಸಿಂಹಾಸನವನ್ನು ವಶಪಡಿಸಿಕೊಳ್ಳುವ ಸಾಹಸವುಳ್ಳವನಿರುವನೆಂಬದನ್ನು ಅರಸನು ತಿಳಿದಿದ್ದನು. ರಾಜದ್ರೋಹಿಗಳು ಪ್ರತಿಷ್ಠಿತರಿದ್ದುದರಿಂದ ಅವರನ್ನು ದಂಡಿಸಿದರೆ ರಾಜ್ಯದಲ್ಲಿ ಬಂಡಾಯವೇಳಬಹುದೆಂಬ ಅಂಜಿಕೆ ಯಿಂದ ಅರಸನು ಅವರ ಅಪರಾಧಗಳನ್ನು ನುಂಗಿಕೊಂಡಿದ್ದನು. ರಾಣಿಯು ದೇಶದ್ರೋಹಿಗಳಿಗೆ ಯೋಗ್ಯ ದಂಡನೆ ವಿಧಿಸಲಿಕ್ಕೆ ಸಿದ್ಧಳಾದ ದ್ದನ್ನು ನೋಡಿ ರಾಜಪರಿವಾರದವರೂ ಪ್ರಜಾಜನರೂ ಅವಳ ಧೈರ್ಯ ವನ್ನು ಬಹುಪರಿಯಾಗಿ ಬಣ್ಣಿಸತೊಡಗಿದ್ದರು.

ದೂತರು ಭೃಗುರಾಮ-ಜನಾರ್ದನರನ್ನು ತಂದು ಓಲಗದಲ್ಲಿ ನಿಲ್ಲಿಸಿದರು. ಅವರ ಎಡಬಲಗಳಲ್ಲಿ ಬಿಚ್ಚುಗತ್ತಿಯ ಕಾವಲುಗಾರರು ನಿಂತುಕೊಂಡಿದ್ದರು. ಅಪರಾಧ ವಿಚಾರಣೆಯ ಕಾರ್ಯವು ನಗರ ಪಾಲನ ಅಧಿಕಾರದೊಳಗಿನದಾದ್ದರಿಂದ ಅವನು ಅಪರಾಧಿಗಳ ನ್ಯಾಯ ವಿಚಾರಣೆಗೆ ಪ್ರಾರಂಭಿಸಿದನು. ಆಗ ಅವನು ಜನಾರ್ದನನನ್ನು ಕರೆದು: "ನೀವು ಜಗನ್ನಾಥನನ್ನು ಸ್ಮರಿಸಿ, ನಿಜವನ್ನು ಹೇಳುವಿರಾ?"

"ಜಗನ್ನಾಥನ ಸಾಕ್ಷಿಯಾಗಿ ನಿಜವನ್ನು ಹೇಳುವೆನು." ಎಂದು ಜನಾರ್ದನನು ಪ್ರತಿಜ್ಞೆ ಮಾಡಿದನು.

"ಮಹಾರಾಜರು ಎಲ್ಲ ಸೇನಾಪತಿಗಳನ್ನು ರಾಜಧಾನಿಯಲ್ಲಿರಿಸಿ ಕೊಂಡು ನಿಮ್ಮನ್ನೇ ತ್ರಿವೇಣಿಯ ಸಂಗ್ರಾಮಕ್ಕೆ ಕಳುಹಿಸಿದ ಕಾರಣ ವೇನು?"

"ಅದನ್ನು ನಾನರಿಯೆನು."

"ಈ ವಿಷಯದಲ್ಲಿ ನಿಮ್ಮ ಕರ್ತವ್ಯವೇನಿರುವದು?"

"ನನ್ನ ಬುದ್ಧಿಗೆ ತೋಚಲೊಲ್ಲದು."

"ನೀವು ತ್ರಿವೇಣಿಯ ಸಂಗ್ರಾಮದಲ್ಲಿ ತಟಸ್ಥವೃತ್ತಿಯಿಂದ ಹೊರಟು ಹೋದ ಕಾರಣವೇನು?"

"ಯುದ್ಧ ಮಾಡಲು ಮನಸ್ಸಿಲ್ಲದ್ದರಿಂದ ಹೋದೆನು."

"ನೀವು ಬಂಡಾಯವೆಬ್ಬಿಸಿದ ಕಾರಣವೇನು?"

"ಮುಕುಂದದೇವ ಮಹಾರಾಜರು ಅತ್ಯಂತ ವಿಲಾಸಿಗಳಾಗಿ, ಅವರು ರಾಜಕಾರಣವನ್ನು ತೀರ ದುರ್ಲಕ್ಷಿಸಿದ್ದರಿಂದ ಪ್ರಜಾಜನರಲ್ಲಿ ಅಸಂತೋಷವು ನೆಲೆಗೊಂಡಿರುವದು. ಅರಸನು ಕರ್ತವ್ಯರತನೂ ಪ್ರಜಾ ಪಾಲನ ತತ್ಪರನೂ ಆಗಿರದಿದ್ದರೆ, ಅವನು ಪ್ರಜಾಜನರ ಕ್ಷೋಭೆಗೆ ಈಡಾಗುವನು. ಪ್ರಜಾಜನರು ಮುಕುಂದದೇವ ಮಹಾರಾಜರನ್ನು ಪಟ್ಟದಿಂದ ತಳ್ಳಬೇಕೆಂಬ ಯತ್ನವುಳ್ಳವರಾಗಿದ್ದುದರಿಂದ ನಾನು ಅವರ ಇಚ್ಛೆಯನ್ನು ಈಡೇರಿಸಲಿಕ್ಕೆ ಅವರಿಗೆ ನೆರವಾದೆನು."

"ಮಹಾರಾಜರು ಪ್ರಜಾರಂಜನರತರಿರುವರು. ಅವರು ಪ್ರಜಾ ಜನರ ಕ್ಷೋಭೆಗೀಡಾಗಿಲ್ಲ. ಮಹಾರಾಜರು ವಿಲಾಸಿಗಳಿರುವರೆಂಬ ನಿಮಿತ್ತವನ್ನು ಮುಂದೆ ಮಾಡಿ ನೀವು ಓರಿಸಾದ ಸ್ವಾತಂತ್ರ್ಯ ಸಿಂಹಾ ಸನವನ್ನು ವಶಪಡಿಸಿಕೊಳ್ಳಬೇಕೆಂಬ ಮಹತ್ವಾಕಾಂಕ್ಷೆಯುಳ್ಳವರಾಗಿದ್ದಿರಿ. ನೀವು ಜಡಸ್ವಾರ್ಥಿಗಳಾಗಿ ರಾಜದ್ರೋಹ ಮಾಡಲುಪಕ್ರಮಿಸಿದ್ದರಿಂದ ನಿಮಗೆ ದೇಹಾಂತ ಶಾಸನೆಯನ್ನು ವಿಧಿಸಿರುವೆನು."

ನಗರಪಾಲನ ತೀರ್ಪು ಕೇಳಿ ಓಲಗದ ಜನರು ವಿಸ್ಮಿತರಾದರು. ಅಪರಾಧಿಗೆ ಯೋಗ್ಯವಾದ ದಂಡನೆಯು ವಿಧಿಸಲ್ಪಟ್ಟಿತೆಂದು ಆನಂದದಿಂದ ಕರತಾಡನ ಮಾಡಿದರು. ಅನಂತರದಲ್ಲಿ ನಗರಪಾಲನು ಭೃಗುರಾಮ

ನನ್ನು ಕುರಿತು:—"ನೀವು ಮಹಾರಾಜರ ವಿರುದ್ಧವಾಗಿ ಕಾರಸ್ಥಾನವನ್ನು ನಡೆಯಿಸಿದ ಕಾರಣವೇನು?"

"ಛೇ! ನಾನು ಮಹಾರಾಜರ ವಿರುದ್ಧವಾಗಿ ಕಾರಸ್ಥಾನವನ್ನೆಲ್ಲಿ ನಡೆಯಿಸಿರುವೆನು? ಓರಿಸಾದ ಸ್ವಾತಂತ್ರ್ಯ ಸಿಂಹಾಸನದ ವಿಷಯವಾಗಿ ನಾನು ಅತ್ಯಂತ ನಿಷ್ಠೆಯುಳ್ಳವನಾಗಿರುವೆನು. ರಾಣಿಯವರು ನಿಷ್ಕಾರಣ ವಾಗಿ ನನ್ನನ್ನು ಬಂಧನೆಯಲ್ಲಿರಿಸಿರುವರು."

"ನ್ಯಾಯಾಸ್ಥಾನದಲ್ಲಿ ಅನೃತವಾಡುವದು ನಿಮ್ಮಂತಹ ಪ್ರತಿಷ್ಠಿತ ಗೃಹಸ್ಥರ ಶೀಲಕ್ಕೆ ಶೋಭಿಸುವದಿಲ್ಲ. ರಾಣಿಯವರು ನಿರಾಪರಾಧಿ ಗಳಾದ ನಿಮ್ಮನ್ನು ಸೆರೆಯಲ್ಲಿರಿಸಿರುವರೆಂಬ ಮಾತು ಹಾಸ್ಯಾಸ್ಪದವಿರು ವದು. ನೀವು ಕಣ್ಣು ಮುಚ್ಚಿಕೊಂಡು ಅಪರಾಧ ಮಾಡುತ್ತಿರುವಿ ರೆಂದು, ಜಗತ್ತೂ ಕುರುಡಾಗಿರುವದಿಲ್ಲ. ನಿಮ್ಮ ಅಪರಾಧವು ಸರ್ವಶ್ರುತ ವಿರುವದು. ನೀವು ಸುಳ್ಳು ಮಾತನಾಡಿ ಹೊಸ ಪಾಪವನ್ನು ಗಳಿಸ ಬೇಡಿರಿ."

"ನಾನು ರಾಜದ್ರೋಹಿಯಿರುವೆನೆಂಬದಕ್ಕೆ ಆಧಾರಗಳೇನಾದರೂ ದೊರೆಯುವವೇನು?"

"ನೀವು ಜನಾರ್ದನ ಮಂತ್ರಿಗಳೊಡನೆ ಗುಪ್ತ ಕಾರಸ್ಥಾನ ನಡೆ ಯಿಸಿದ್ದಿಲ್ಲವೆ? ನಿಮ್ಮ ಅನೇಕ ಪತ್ರಗಳು ನಮ್ಮ ಕಡೆಗಿರುವವು. ಇಗೊ ಳ್ಳಿರಿ, ಇದು ಯಾರ ಹಸ್ತಾಕ್ಷರದ ಪತ್ರವು?" ಎಂದು ನಗರಪಾಲನು ನುಡಿದು ತನ್ನ ಬಳಿಯಲ್ಲಿದ್ದ ಪತ್ರಗಳಲ್ಲಿ ಒಂದನ್ನು ಭೃಗುರಾಮನ ಕೈ- ಯಲ್ಲಿ ಕೊಟ್ಟನು. ಪತ್ರವನ್ನು ನೋಡಿದ ಕೂಡಲೆ ಭೃಗುರಾಮನ ಮುಖವು ಕಪ್ಪಿಟ್ಟಿತು. ಆಗ ಅವನು ಧೈರ್ಯ ತಂದುಕೊಂಡು— "ಈ ಪತ್ರವು ನನ್ನ ಹಸ್ತಾಕ್ಷರದ್ದೆಂದು ಕಂಡು ಬರುತ್ತಿದ್ದರೂ ಇದನ್ನು ನಾನು ಬರೆದಿಲ್ಲ. ಯಾರೋ ದುಷ್ಟರು ಈ ಕಾರಸ್ಥಾನ ರಚಿಸಿದಂತೆ ತೋರುವದು."

"ಹೀಗೇನು?" ಎಂದು ನಗರಪಾಲನು ತಿರಸ್ಕಾರದಿಂದ ನುಡಿದು: "ನೀವು ಜನಾರ್ದನ ಮಂತ್ರಿಗಳಿಗೆ ಮೊನ್ನೆ ಮೊನ್ನೆ ಬರೆದ ಪತ್ರವು ಈ

ಮಂತ್ರಿಗಳ ಕಾಗದ-ಪತ್ರಗಳನ್ನು ಶೋಧಿಸುವಾಗ ನನಗೆ ದೊರೆತಿದೆ. ಈ ಪತ್ರವನ್ನು ನೀವು ನಿಮ್ಮ ಸ್ವಂತ ಸೇವಕನಿಂದ ಜನಾರ್ದನ ಮಂತ್ರಿಗಳ ಬಳಿಗೆ ಕಳಿಸಿದ್ದಿರಲ್ಲವೆ? ನಿಮ್ಮ ಸೇವಕನು ಈ ವಿಷಯದಲ್ಲಿ ನಿಜ ಸ್ಥಿತಿಯನ್ನು ನಮಗೆ ತಿಳಿಸಿರುವನು. ನೀವು ಈ ಪತ್ರದ ಕೆಳಗೆ ಬರೆದ ಹೊಸ ಸಂಗತಿಯನ್ನು ರಾಣಿಯವರು ಹರಿದು ನಾಶ ಪಡಿಸಿರುವರು. 'ರಾಜ್ಯವು ನಿಮ್ಮದು; ಆದರೆ ಬಂಗಾಲೀ ತರುಣಿಯು ನನ್ನವಳು' ಎಂದು ನೀವು ಪತ್ರದಲ್ಲಿ ಬರೆದಿದ್ದಿಲ್ಲವೆ? ಜನಾರ್ದನನಿಂದ ಅರಸನನ್ನು ಕೊಲ್ಲಿಸಿ, ರಾಜ್ಯದ ಕೆಲವು ಭಾಗವನ್ನು ನೀವು ಗಳಿಸಿಕೊಳ್ಳಬೇಕೆಂದು ಸಾಹಸ ನಡೆಯಿಸಿದ್ದಿಲ್ಲವೆ? ರಾಣಿಯವರನ್ನು ಸ್ವಾಧೀನಕ್ಕೆ ತೆಗೆದುಕೊಳ್ಳಬೇಕೆಂದು ನೀವು ದುರಾಶೆ ತಾಳಿದ್ದಿಲ್ಲವೆ? ನಿಮ್ಮ ಪತ್ರಗಳಲ್ಲಿ ಆರು ಪತ್ರಗಳು ನಮಗೆ ದೊರೆತಿರುವವು. ಇನ್ನೆಲ್ಲ ಕೃತ್ರಿಮ ಪತ್ರಗಳಿಂದು ಸಾಧಿಸ ಹೋದರೆ ನಿಮ್ಮ ಯತ್ನಕ್ಕೆ ಯಶವು ದೊರೆಯಲಾರದು. ನೀವು ಸ್ವಾ-ತಂತ್ರ್ಯ ಸಿಂಹಾಸನವನ್ನು ಹಾಳುಮಾಡಲುದ್ಯುಕ್ತರಾಗಿದ್ದಿರಲ್ಲದೆ, ಮಹಾರಾಜರ ಪ್ರತಿನಿಧಿಗಳಿಂದು ರಾಜ್ಯಸೂತ್ರಗಳನ್ನು ಕೈಯಲ್ಲಿ ತೆಗೆದುಕೊಂಡು ಓರಿಸಾದ ಹಿತಕ್ಕಾಗಿ ವ್ಯಾಹತಿಯಿಲ್ಲದೆ ಯತ್ನಿಸುವ ರಾಣಿಯವರ ಮೇಲೆ ಪಾಪವೃಷ್ಟಿಯನ್ನಿಟ್ಟು ಮಾತೃಗಮನದಂತಹ ಮಹಾಪಾತಕ ಮಾಡಲುದ್ಯುಕ್ತರಾಗಿದ್ದಿರಿ. ನಿಮಗೆ ಕ್ಷಮೆಯು ದೊರೆಯಲಿಕ್ಕೆ ಮಾರ್ಗವಿಲ್ಲ. ಜನಾರ್ದನರಂತೆ ನಿಮಗಾದರೂ ಮೃತ್ಯುದಂಡನೆಯನ್ನು ವಿಧಿಸಿರುವೆನು.''

ತಮಗೆ ಮೃತ್ಯುದಂಡನೆಯು ವಿಧಿಸಲ್ಪಡುವದೆಂಬದು ಜನಾರ್ದನ-ಭೃಗುರಾಮರಿಗೆ ಗೊತ್ತೆ ಇತ್ತು. ತಮ್ಮ ಅಪರಾಧವನ್ನು ಕ್ಷಮಿಸಬೇಕೆಂದು ರಾಣಿಯನ್ನು ಪ್ರಾರ್ಥಿಸುವದರಿಂದ ಫಲವು ದೊರೆಯಲಿಕ್ಕಿಲ್ಲವೆಂದು ಅವರ ತಿಳುವಳಿಕೆಯಾಗಿತ್ತು. ಹೇಗಾದರೂ ಜೀವವು ಮನುಷ್ಯನಿಗೆ ಅತ್ಯಂತ ಪ್ರಿಯವಲ್ಲವೆ? ಜೀವವನ್ನುಳಿಸಿಕೊಳ್ಳುವದಕ್ಕೆ ಮಾನಾಭಿಮಾನಗಳನ್ನು ಮರೆತು ಪ್ರಯತ್ನಿಸಬೇಕೆಂದು ಅವರ ಮನಸ್ಸಿನಲ್ಲಿ ವಿಚಾರೋದಯವಾಯಿತು. ಆಗ ಭೃಗುರಾಮನು ಗಟ್ಟಿ ಮನಸ್ಸು ಮಾಡಿ:

"ರಾಣಿಯವರೆ, ನಮ್ಮಿಂದ ಅಪರಾಧವು ಘಟಿಸಿದ್ದು ನಿಜವು. ನಿಗ್ರಹಾನುಗ್ರಹ ಶಕ್ತಿಯುಳ್ಳವರಾದ ನೀವು ನಮ್ಮನ್ನು ಕ್ಷಮಿಸಬೇಕು. ನಮ್ಮಲ್ಲಿ ಕೃತಕರ್ಮದ ಬಗ್ಗೆ ಪಶ್ಚಾತ್ತಾಪವು ಹುಟ್ಟಿದೆ. ನಮ್ಮ ಮರಣದಿಂದ ರಾಜ್ಯಕ್ಕೆ ಲಾಭವೇನಿರುವದು? ಮರಣದಂಡನೆಯನ್ನುಳಿದು ಬೇಕಾದಂತಹ ಶಿಕ್ಷೆಯನ್ನು ಹೊಂದಲಿಕ್ಕೆ ನಮ್ಮ ಸಿದ್ಧತೆಯಿರುವದು."

ಜನಾರ್ದನನಿಗೆ ಭೃಗುರಾಮನ ಮಾತುಗಳು ಸರಿಯಾಗಿ ತೋರಲಿಲ್ಲ. ಆಗ ಅವನು ರಾಣಿಗೆ ಕೈಜೋಡಿಸಿ:—"ರಾಣಿಯವರೇ ಕೃತಾಪರಾಧದ ಬಗ್ಗೆ ನಮ್ಮಲ್ಲಿ ಪಶ್ಚಾತ್ತಾಪವುಂಟಾಗಿರುವದರಿಂದ ನಮಗೆ ನೀವು ಯಾವ ವಿಧದ ಶಿಕ್ಷೆಯನ್ನೂ ವಿಧಿಸಬಾರದೆಂದು ಬೇಡಿಕೊಳ್ಳುವೆನು. ಕಾಯಾ ವಾಚಾ ಮನಸ್ಸಿನಿಂದ ಉತ್ಕಲ ಸಿಂಹಾಸನದ ಸೇವೆ ಮಾಡಬೇಕೆಂದು ನಮ್ಮ ಮನಸ್ಸು ಆತುರಗೊಂಡಿರುವದು. ಏಕನಿಷ್ಠೆಯಿಂದ ದೇಶ ಸೇವೆ ಮಾಡಿ ಹಿಂದೆ ಮಾಡಿದ ಪಾತಕವನ್ನು ತೊಳೆಯಬೇಕೆಂಬ ವಿಚಾರವು ನಮ್ಮಲ್ಲಿ ಹುಟ್ಟಿರುವದು. ರಾಜ್ಞಿಯವರು ನಮ್ಮ ಅಪರಾಧವನ್ನು ಕ್ಷಮಿಸಬೇಕು."

ಜನಾರ್ದನ-ಭೃಗುರಾಮರು ಅಧಮಾಧಮರಿರುವರೆಂಬ ಸಂಗತಿಯು ರಾಣಿಗೆ ಗೊತ್ತಿತ್ತು. ಅವಳು ಜನಾರ್ದನನ ಧೂರ್ತತನದ ಮಾತಿನ ಮರ್ಮವನ್ನು ಕಂಡುಹಿಡಿಯದಷ್ಟು ಮಂದಬುದ್ಧಿಯವಳಿರಲಿಲ್ಲ. ಆಗ ಅವಳು ಅಪರಾಧಿಗಳನ್ನು ಕುರಿತು—"ನಗರಪಾಲರ ನಿರ್ಣಯವು ಯಥಾಯೋಗ್ಯವಿರುವದು. ನಿಮ್ಮ ಅಪರಾಧವು ಅತ್ಯಂತ ನೀಚತನದ್ದಿರುವದರಿಂದ ನಿಮಗೆ ಮೃತ್ಯುದಂಡನೆಯೇ ಯೋಗ್ಯವು. ರಾಷ್ಟ್ರದ್ರೋಹಿಗಳಾಗಿ ನಡೆದ ನಿಮಗೆ ಕ್ಷಮೆಯು ದೊರೆಯಲಾರದು. ನಿಮ್ಮ ಬಣ್ಣದ ಮಾತುಗಳಿಗೆ ಮರುಳಾಗುವಂತಹ ಅದೂರದರ್ಶಿಗಳು ಈಗ ಓಲಗದಲ್ಲಿಲ್ಲ. ಆಜನ್ಮ ಕಾರಾಗೃಹವಾಸವು ಮರಣಕ್ಕಿಂತಲೂ ಕಠಿಣವಾದ ಶಿಕ್ಷೆಯೆಂದು ನನಗೆ ತಿಳಿದಿರುವದು. ನಗರಪಾಲರು ನಿಮಗೆ ಸೌಮ್ಯಶಿಕ್ಷೆಯನ್ನು ವಿಧಿಸಿದ್ದರು; ಆದರೆ ನಾನು ನಿಮಗೆ ಆಜನ್ಮ ಕಾರಾಗೃಹವಾಸದ ಶಿಕ್ಷೆಯನ್ನು ವಿಧಿಸಿರುವೆನು."

ರಾಣಿಯು ಅಪರಾಧಿಗಳಿಗೆ ಮೃತ್ಯುವಿನ ಶಿಕ್ಷೆಯನ್ನೇ ವಿಧಿಸುವ ಳೆಂದು ಜನರು ತಿಳಿದಿದ್ದರು; ಆದರೆ ಅವಳ ತೀರ್ಪಿನಿಂದ ಎಲ್ಲರೂ ವಿಸ್ಮಿತರಾದರು. ದೊಡ್ಡ ಮಂತ್ರಿಗಳೆಂದು ಪ್ರಸಿದ್ಧಿ ಹೊಂದಿದವರ ಕೊಲೆ ಮಾಡುವದಕ್ಕಿಂತ ಅವರನ್ನು ಕಾರಾಗೃಹದಲ್ಲಿರಿಸಿದ್ದು ಒಳಿತಾಯಿತೆಂದು ಸಭಿಕರು ತಿಳಿದರು. ಅವರು ರಾಣಿಯ ದೊಡ್ಡ ಮನಸ್ಸನ್ನು ಕೊಂಡಾಡ ತೊಡಗಿದರು. ಜನಾರ್ದನ-ಭೃಗುರಾಮರಿಗಂತು ರಾಣಿಯು ದೇವತೆ ಯಂತೆ ಕಾಣತೊಡಗಿದಳು. ಕಾವಲುಗಾರರು ಅಪರಾಧಿಗಳನ್ನು ಸೆರೆ ಮನೆಗೆ ಸಾಗಿಸಿದರು. ಅನಂತರದಲ್ಲಿ ಸಭೆಯು ವಿಸರ್ಜನೆಯಾಯಿತು. ಎಲ್ಲರೂ ತಮ್ಮ ತಮ್ಮ ಮನೆಗೆ ಹೋದರು.

ಓಲಗದ ವಿಸರ್ಜನೆಯಾದ ಕೂಡಲೆ ರಾಣಿಯು ಮುಖ್ಯ ಅಧಿಕಾರಿ ಗಳನ್ನು ಮಂತ್ರಣಾಗಾರದಲ್ಲಿ ಕರೆಯಿಸಿಕೊಂಡಳು. ಹಿಂದಿನ ಪರಾಜಯ ದಿಂದ ಅಪಮಾನಿತನಾದ ಕಾತಲೂಖಾನನು ಕಾಳಾಪಹಾಡನೊಡನೆ ರಾಜ ಧಾನಿಯನ್ನು ಮುತ್ತುವನೆಂಬುದು ಎಲ್ಲ ಜನರಿಗೂ ತಿಳಿದ ಮಾತಾಗಿತ್ತು. ಶತ್ರುಪ್ರತಿಕಾರಕ್ಕಾಗಿ ಯಾವ ವಿಧದಿಂದ ಯತ್ನಿಸಬೇಕೆಂಬುದರ ಬಗ್ಗೆ ರಾಣಿಯು ಮಂತ್ರಿ-ಸೇನಾಪತಿಗಳ ಅಭಿಪ್ರಾಯ ಪಡೆಯಬೇಕೆಂದು ಯೋಚಿಸಿದ್ದಳು. ಆಗ ಅವಳು ಅಧಿಕಾರಿ ಪರಿವಾರವನ್ನು ಕುರಿತು:—

"ಸಂತಪ್ತರಾದ ಶತ್ರುಗಳು ರಾಜಧಾನಿಯನ್ನು ಮುತ್ತುವರು. ಶತ್ರು ಸೇನೆಯು ಅಪಾರವಾದದ್ದಿರುವದು. ನಮ್ಮ ಸೇನೆಯ ಬಹು ಭಾಗವು ಮಹಾರಾಜರ ಹಾಗು ಯುವರಾಜರ ಕಡೆಗಿರುವದು. ಇಂತಹ ಪ್ರಸಂಗ ದಲ್ಲಿ ದಾಳಿಯು ಬಂದರೆ ಅನಿಷ್ಟ ಪ್ರಸಂಗವೊದಗುವದು. ಸದ್ಯಕ್ಕೆ ರಾಜ ಧಾನಿಯನ್ನು ರಕ್ಷಿಸುವದು ಆದ್ಯ ಕರ್ತವ್ಯವಾಗಿರುವದು. ರಾಜಧಾ ನಿಗೆ ಬರಬೇಕೆಂದು ಮಹಾರಾಜರ ಯತ್ನವಿರುವದೇನೋ ನಿಜವು; ಆದರೆ ಹರಿಕೀರ್ತನನು ಬಂಡಾಯವೆಬ್ಬಿಸಿದ್ದರಿಂದ ಅವರು ಬಂಡಾಯವನ್ನು ಶಾಂತಗೊಳಿಸಲಿಕ್ಕೆ ತೊಡಗಿರುವರೆಂದು ಸುದ್ದಿಯು ಬಂದಿತು. ರಾಮ ಚಂದ್ರದೇವ ಯುವರಾಜರು ಕಾಳಾಪಹಾಡನ ಸೈನ್ಯದೊಡನೆ ಯುದ್ಧ ವನ್ನು ಪ್ರಾರಂಭಿಸಿರುವರಂತೆ. ಅಗಣಿತವಾದ ಶತ್ರು ಸೈನ್ಯಕ್ಕೆ ಯುಕ

ರಾಜರ ಸೈನ್ಯವು ಈಡಾಗಲಾರದು. ನಮ್ಮ ಸೈನ್ಯವು ಹೊರಗಿಂದ ಹೊರಗೇ ನಾಶವಾಗಿ ಹೋಯಿತೆಂದರೆ, ಉಳಿದ ಅಲ್ಪ ಸಂಖ್ಯಾಕ ಸೈನ್ಯ ದಿಂದ ರಾಜಧಾನಿಯನ್ನು ರಕ್ಷಿಸುವ ಕಾರ್ಯವು ಸಾಧ್ಯವಾಗಲಾರದು. ಅಲ್ಲಿಯ ಯುದ್ಧವನ್ನು ನಿಲ್ಲಿಸಿ ಹೊರಟುಬರಬೇಕೆಂದು ಮಹಾರಾಜ ರಿಗೂ ಯುವರಾಜರಿಗೂ ತಿಳಿಸಬೇಕೆಂದು ನನ್ನ ಅಭಿಪ್ರಾಯವಿರುವದು. ನನ್ನ ಹಂಚಿಕೆಯು ಸರಿಯಾದದ್ದೆಂದು ನಿಮ್ಮೆಲ್ಲರಿಗೆ ತೋರಿದರೆ ಅದರಂತೆ ಮಹಾರಾಜರಿಗೂ ಯುವರಾಜರಿಗೂ ತಿಳಿಸೋಣ."

ರಾಣಿಯ ಮಾತುಗಳು ಎಲ್ಲ ಅಧಿಕಾರಿಗಳಿಗೂ ಸರಿಯಾಗಿ ತೋರಿ ದವು. ಅವರು ಮಹಾರಾಜರನ್ನೂ ಯುವರಾಜರನ್ನೂ ಕರೆಯಿಸಬೇ ಕೆಂದು ರಾಣಿಗೆ ತಿಳಿಸಿದರು. ಅಷ್ಟರಲ್ಲಿ ಗುಪ್ತಚರನು ಬಂದಿರುವ ನೆಂದು ದ್ವಾರಪಾಲಕನು ರಾಣಿಗೆ ತಿಳಿಸಿದನು. ರಾಣಿಯು ಆ ಚಾರನನ್ನು ಒಳಗೆ ಬಿಡಬೇಕೆಂದು ದ್ವಾರಪಾಲಕನಿಗೆ ಆಜ್ಞಾ ಮಾಡಿದಳು. ಸ್ವಲ್ಪ ವೇಳೆಯಲ್ಲಿ ಗುಪ್ತಚರನು ಒಳಗೆ ಬಂದು ರಾಣಿಗೆ ಅಭಿವಂದಿಸಿ:-''ಮಹಾ ರಾಣಿಯವರೆ, ಹರಿಕೀರ್ತನನು ಅಪರಿಮಿತವಾದ ಸೈನ್ಯವನ್ನು ಕೂಡಿಸಿ ಮಹಾರಾಜರ ಸೈನ್ಯವನ್ನು ಮುತ್ತಿರುವನು. ಈಗ ಒಳ್ಳೆಯ ನಿಕರದ ಕಾಳಗವು ಪ್ರಾರಂಭವಾಗಿರುವದು. ತನ್ನ ತಂದೆಯನ್ನು ಸೆರೆಹಿಡಿದ ಸೇಡನ್ನು ತೀರಿಸಿಕೊಳ್ಳಬೇಕೆಂದು ಹರಿಕೀರ್ತನನ ವಿಚಾರವಿದೆ. ಮಹಾ ರಾಜರಾದರೂ ಅದ್ಭುತವಾದ ರಣಕೌಶಲ್ಯವನ್ನು ತೋರಿಸತೊಡಗಿರುವರು. ಬಂಡುಗಾರರ ನಾಶವಾಗುವ ವರೆಗೆ ರಾಜಧಾನಿಯನ್ನು ಪ್ರವೇಶಿಸಲಿಕ್ಕೆ ಬರುವಂತಿಲ್ಲವೆಂದು ಅವರು ತಿಳಿಸಿರುವರು. ಪ್ರಸಂಗವೊದಗಿದರೆ ಸೈನ್ಯದ ಸಹಾಯವನ್ನು ಕೇಳುವೆವೆಂದು ಅವರು ತಿಳಿಸಿದ್ದಾರೆ.''

ದೂತನ ಮಾತಿನಿಂದ ರಾಣಿಯ ಮನಸ್ಸು ಕ್ಲೇಶಗೊಂಡಿತು. ಸದ್ಯದ ಪ್ರಸಂಗದಲ್ಲಿ ಅರಸನು ರಾಜಧಾನಿಯಲ್ಲಿರುವದು ಯೋಗ್ಯ ವೆಂದು ಅವಳಿಗೆ ಅನಿಸಹತ್ತಿತು. ಅರಸನು ರಾಜಧಾನಿಗೆ ಹೊರಡ ಬೇಕೆನ್ನುವಷ್ಟರಲ್ಲಿ ಬಂಡಾಯದ ಬೇಗೆಯು ಹಬ್ಬಿದ್ದರಿಂದ ಅವನು ಕಾಳ ಗಕ್ಕೆ ಅಣಿಯಾದನೆಂದು ರಾಣಿಯು ತಿಳಿದು, ನಿರುಪಾಯಳಾಗಿ ಸುಮ್ಮನೆ

ಕುಳಿತಳು. ಅಷ್ಟರಲ್ಲಿ ಮತ್ತೊಬ್ಬ ಚರನು ಮಂತ್ರಣಾಗಾರವನ್ನು ಪ್ರವೇಶಿಸಿ--"ರಾಣಿಯವರೆ, ಕಾಳಾಪಹಾಡನು ಯುವರಾಜರನ್ನು ಪೂರ್ಣ ವಾಗಿ ಪರಾಭವಗೊಳಿಸಿದನು. ಯುವರಾಜರು ಉಳಿದ ಅಲ್ಪ ಸ್ವಲ್ಪ ಸೈನ್ಯದೊಡನೆ ರಾಜಧಾನಿಯನ್ನು ಸೇರುವದಕ್ಕಾಗಿ ಹೊರಟಿರುವರು. ಕಾಳಾಪಹಾಡನು ದೊಡ್ಡ ಸೈನ್ಯದೊಡನೆ ಬೇಗನೆ ರಾಜಧಾನಿಗೆ ಮುತ್ತಿಗೆ ಹಾಕುವದಕ್ಕಾಗಿ ಹೊರಡುವನು."

ಈ ಅನಿಷ್ಟ ವಾರ್ತೆಯನ್ನು ಕೇಳಿದ ಕೂಡಲೆ ಓಲಗದ ಜನರ ಮನಸ್ಸು ಚಿಂತಾಕುಲವಾಯಿತು. ಯುವರಾಜನ ಸೈನ್ಯವೆಲ್ಲ ನಾಶವಾದ ಸಂಗತಿಯು ಅವರ ಮನಸ್ಸನ್ನು ವ್ಯಾಕುಲಗೊಳಿಸಿತು. ಮುಕುಂದ ದೇವನ ಬಳಿಯಲ್ಲಿಯ ಸೈನ್ಯವೂ ಬಂಡುಗಾರರೊಡನೆ ಯುದ್ಧಮಾಡು ವಾಗ ನಾಶವಾಗಿ ಹೋಗುವದೆಂದು ಅವರಿಗೆ ತಿಳಿದಿತ್ತು. ಹೀಗಾದ ಮೇಲೆ ಕಾಳಾಪಹಾಡನಂತಹ ಬಲಾಢ್ಯ ಶತ್ರುವಿನ ದವಡೆಯೊಳಗಿಂದ ರಾಜಧಾನಿಯನ್ನು ಹೇಗೆ ರಕ್ಷಿಸಬೇಕೆಂದು ಅವರು ವಿಚಾರಕ್ಕೊಳಗಾದ ರು. ಯುವರಾಜನು ರಾಜಧಾನಿಯನ್ನು ಪ್ರವೇಶಿಸಿದ ಮೇಲೆ ಎಲ್ಲ ವಿಷ ಯಗಳನ್ನು ನಿರ್ಣಯಿಸಬೇಕೆಂದು ಅವರು ನಿರ್ಧರಿಸಿಕೊಂಡರು.

———

## ಸರ್ವನಾಶ!

ಯುವರಾಜ ರಾಮಚಂದ್ರದೇವನು ಕಾಳಾಪಹಾಡನಿಂದ ಪರಾಜಿತ ನಾಗಿ ಕಟಕವಾರಣಾಶಿ ರಾಜಧಾನಿಯನ್ನು ಸೇರಿದನು ಯುವರಾಜನ ಅಪಜಯದಿಂದ ರಾಜಧಾನಿಯೊಳಗಿನ ಪ್ರಜಾಜನರ ಹಾಗು ಅಧಿಕಾರಿ ಪರಿ ವಾರದ ಆನಂದವು ಲಯವಾಯಿತು. ಯುವರಾಜನು ರಾಜಧಾನಿಯಿಂದ ಹೊರಡುವಾಗ ಎಪ್ಪತ್ತು ಸಾವಿರ ಸೈನ್ಯವನ್ನು ಒಯ್ದಿದ್ದನು; ತಿರುಗಿ ಬಂದಾಗ ಮೂವತ್ತುಸಾವಿರ ಸೈನ್ಯವು ಮಾತ್ರ ಅವನ ಬಳಿಯಲ್ಲಿ ಉಳಿ ದಿತ್ತು. ಈ ಅಪರಿಮಿತವಾದ ಸೈನ್ಯನಾಶದಿಂದ ಉತ್ಕಲದ ಅರ್ಧಬಲವೇ

ನಾಶವಾದಂತಾಗಿತ್ತು. ಅರಸನ ಬಳಿಯಲ್ಲಿದ್ದ ಸೈನ್ಯವಾದರೂ ಇದೇ ಸ್ಥಿತಿಯನ್ನು ಹೊಂದುವದೆಂದು ಒಡೆದು ಕಾಣತೊಡಗಿತ್ತು. ಮಹಾ ಸಂಗ್ರಾಮದ ಹಾವಳಿಯಿಂದ ಓರಿಸಾದ ಭಾಂಡರದೊಳಗಿನ ಹಣವು ತೀರಿ ಹೋಗಿತ್ತು. ಶತ್ರುಸೈನ್ಯದ ಉಪದ್ರವದಿಂದ ಬೆಳೆಗಳೆಲ್ಲ ನಾಶ ವಾದದ್ದರಿಂದ ಪ್ರಜಾಜನರು ಕಂದಾಯವನ್ನು ಕೊಡಲಿಕ್ಕೆ ಅಸಮರ್ಥ ರಾಗಿದ್ದರು. ಬೊಕ್ಕಸದಲ್ಲಿ ಹಣವಿಲ್ಲದ್ದರಿಂದಲೂ, ಹೊಸದಾಗಿ ಹಣವು ಬರುವ ಆಶೆಯಿಲ್ಲದ್ದರಿಂದಲೂ ಉತ್ಕಲದ ರಾಜಪರಿವಾರವು ಬಳ್ಳೆಯ ತೊಂದರೆಯಲ್ಲಿ ಬಿದ್ದಿತ್ತು. ಅಪರಿಮಿತವಾಗಿ ಸೈನ್ಯದ ನಾಶವಾದ್ದ ರಿಂದ ಹೊಸದಾಗಿ ಸೈನ್ಯವನ್ನು ಕೂಡಿಸುವದು ಅತ್ಯವಶ್ಯವಾಗಿತ್ತು. ಹೊಸ ಸೈನ್ಯವನ್ನು ಕೂಡಿಸಬೇಕಾದರೆ ವಿಪುಲವಾದ ಧನವು ಬೇಕಾಗಿತ್ತು. ಆಗ ರಾಣಿಯು ದೀನಕೃಷ್ಣಸೇನಾಪತಿಯನ್ನು ಕರೆಯಿಸಿ, ತನ್ನ ಮೈ ಮೇಲಿನ ಅಮೂಲ್ಯವಾದ ರತ್ನಾಲಂಕಾರಗಳನ್ನು ಅವನಿಗೆ ಕೊಟ್ಟಳು; ಹಾಗು ಈ ಅಲಂಕಾರ ವಿಕ್ರಯ ಮಾಡಿ ಸೈನ್ಯವನ್ನು ಕೂಡಿಸಬೇಕೆಂದು ಸೇನಾಪತಿಗೆ ತಿಳಿಸಿದಳು. ರಾಣಿಯ ಈ ಅದ್ಭುತವಾದ ಸ್ವಾರ್ಥತ್ಯಾಗ ವನ್ನು ನೋಡಿ ದೀನಕೃಷ್ಣನು ಸಾನಂದಾಶ್ಚರ್ಯಭರಿತನಾದನು. ರಾಜನ ರಾಣಿಯರೆನಿಸಿಕೊಳ್ಳುವವರು ಸಹ ಇಷ್ಟು ಸ್ವಾರ್ಥತ್ಯಾಗ ಮಾಡಲಾರ ರೆಂದು ತಿಳಿದು, ಅವನು ರಾಣಿಯನ್ನು ಬಹಳವಾಗಿ ಗೌರವಿಸಿದನು. ಅವನು ರಾಣಿಯ ಇಚ್ಛೆಯ ಮೇರೆಗೆ ಹೊಸ ಸೈನ್ಯವನ್ನು ಕೂಡಿಸುವದ ಕ್ಕಾಗಿ ಸಾಹಸ ಮಾಡಲುದ್ಯುಕ್ತನಾದನು.

ಯುವರಾಜನು ರಾಜಧಾನಿಗೆ ಬಂದ ಮೇಲೆ ಓಲಗದಲ್ಲಿ ಮೊದ ಲಿನ ವ್ಯವಸ್ಥೆಯು ಉಳಿಯಲಿಲ್ಲ. ಅವನು ರಾಣಿಗೂ ಅವಳಲ್ಲಿ ವಿಶ್ವಾಸ ವಿಟ್ಟಿದ್ದ ಅಧಿಕಾರಿಗಳಿಗೂ ಮಾನಮರ್ಯಾದೆಯನ್ನು ಕೊಡದಾದನು. ಪ್ರತಿಯೊಂದು ಕಾರ್ಯದಲ್ಲಿ ಅನುಭವಿಕರಾದ ಮುತ್ಸದ್ದಿಗಳ ಅಭಿ ಪ್ರಾಯವನ್ನು ಪಡೆಯುತ್ತಿದ್ದಿಲ್ಲ. ಮುಕುಂದದೇವನ ತರುವಾಯ ಅವನು ಸಿಂಹಾಸನದ ಅಧಿಕಾರಿಯಾಗಿದ್ದರೂ, ಅವನು ತನ್ನ ಕರ್ತವ್ಯ ಧರ್ಮವನ್ನು ಮರೆತು, ಸಿಂಹಾಸನಾರೂಢನಾಗಿ ರಾಜ್ಯಕಾರ್ಯವನ್ನು

ಸಾಗಿಸಲಾರಂಭಿಸಿದನು. ಪ್ರಜಸುಂದರಿಯು ತನ್ನ ಬುದ್ಧಿಕೌಶಲ್ಯದಿಂದ ಲಬ್ಧಪ್ರತಿಷ್ಠಳೂ ಕೀರ್ತಿಶಾಲಿನಿಯೂ ಆಗಿದ್ದಳು. ಓಲಗದ ಜನರೂ ಪ್ರಜಾಜನರೂ ಅವಳನ್ನು ಹಾಡಿಹರಸತೊಡಗಿದ್ದರು. ಅವಳ ಈ ಹೆಚ್ಚಳವು ಉನ್ಮತ್ತ ತರುಣನಾದ ಯುವರಾಜನಿಗೆ ಸಹನವಾಗದಾಯಿತು. ಅವನು ರಾಣಿಯನ್ನು ದ್ವೇಷಿಸಲಿಕ್ಕೆ ಪ್ರಾರಂಭಿಸಿದನು. ಎಲ್ಲಿಯವಳೋ ಒಬ್ಬ ಪರದೇಶಿಯಾದ ಹೆಂಗಳೆಯು ತನ್ನ ಲಾವಣ್ಯ ಪ್ರಭಾವದಿಂದ ವಿಲಾಸಿಯಾದ ಅರಸನನ್ನು ಒಲಿಸಿಕೊಂಡು, ರಾಜ್ಯಸೂತ್ರಗಳನ್ನೆಲ್ಲ ಕೈ-ಯಲ್ಲಿ ತೆಗೆದುಕೊಂಡಿರುವಳೆಂದು ಅವನ ಭಾವನೆಯಾಯಿತು. ಯಃಕ-ಶ್ಚಿತಳಾದ ಒಬ್ಬ ಸ್ತ್ರೀಗೆ ಪ್ರತಿಷ್ಠೆ ಕೊಟ್ಟು ಅವಳು ಹೇಳಿದಂತೆ ನಡೆಯತೊಡಗಿದರೆ ತನ್ನ ದೊಡ್ಡಸ್ತಿಕೆಗೆ ಬಾಧೆಬರುವದೆಂದೂ, ಪ್ರಸಂಗವೊದಗಿದರೆ ರಾಜ್ಯಾಧಿಕಾರವನ್ನು ಅವಳೇ ಸ್ವಾಧೀನ ಪಡಿಸಿಕೊಂಡು ತನ್ನನ್ನು ದೇಶಾಂತರಕ್ಕಟ್ಟದಿರಳೆಂದೂ ಯುವರಾಜನು ತಿಳಿದುಕೊಂಡನು.

ಯುವರಾಜನು ರಾಣಿಯನ್ನು ಮನಃಪೂರ್ವಕವಾಗಿ ದ್ವೇಷಿಸುತ್ತಿದ್ದದರಿಂದ ಅವಳ ಪ್ರತಿಯೊಂದು ಕಾರ್ಯಕ್ಕೆ ಅಸಮ್ಮತಿಯನ್ನು ವ್ಯಕ್ತಪಡಿಸತೊಡಗಿದನು. ಸುವ್ಯವಸ್ಥಿತ ಕಾರ್ಯಗಳಲ್ಲಿ ಹೆಚ್ಚು ಕಡಿಮೆ ಮಾಡಲಾರಂಭಿಸಿದನು. ರಾಜ್ಯದ ಆಧಾರಸ್ತಂಭರೂ ಸ್ವಾತಂತ್ರ್ಯಪ್ರಿಯರೂ ರಾಷ್ಟ್ರಪ್ರೇಮಿಗಳೂ ರಾಜನಿಷ್ಠರೂ ಆದ ಮಂತ್ರಿ-ಸೇನಾನಾಯಕರು ಅವನ ವರ್ತನವನ್ನು ಅಲ್ಲಗಳೆಯತೊಡಗಿದರು. ಕೆಲವು ದುಷ್ಟರು ಜಡಸ್ವಾರ್ಥಿಗಳಾಗಿ ಯುವರಾಜನ ಬಾಲ ಬಡೆಯುತ್ತ, ರಾ-ಣಿಯು ಹಾಗು ಅವಳ ಪಕ್ಷಪಾತಿಗಳ ಮೇಲೆ ದೂರ ಹೇಳುತ್ತ ಯುವರಾಜನ ಮನಸ್ಸನ್ನು ಮತ್ತಿಷ್ಟು ಕೆಡಿಸತೊಡಗಿದರು. ಅವನ ದ್ವೇಷಭಾವನೆಯು ದಿನದಿನಕ್ಕೆ ಹೆಚ್ಚಾಗತೊಡಗಿತು. ದೀನಕೃಷ್ಣ, ಗದಾಧರ ಮೊದಲಾದ ಸೇನಾಪತಿಗಳೂ ಹೊಸಮಂತ್ರಿಗಳೂ ರಾಣಿಯ ಕಾರಸ್ಥಾನದಲ್ಲಿರುವರೆಂದು ಯುವರಾಜನು ತಿಳಿದು, ರಾಣಿಯ ಕೈಯೊಳಗಿನ ಎಲ್ಲ ಅಧಿಕಾರ ಸೂತ್ರಗಳನ್ನು ತನ್ನ ಕೈಯಲ್ಲಿ ತೆಗೆದುಕೊಂಡನು. ರಾಣಿಯು ಮನಸ್ಸಿನ ಮೇಲೆ ತೆಗೆದುಕೊಂಡಿದ್ದರೆ, ಯುವರಾಜನ ಕೈಯಲ್ಲಿ ರಾಜ

ಕಾರಭಾರವನ್ನು ಕೊಡದೆ, ತನ್ನ ಕೈಯಲ್ಲಿಯೆ ಇರಿಸಿಕೊಳ್ಳಲಿಕ್ಕೆ ಬರುವಂತಿತ್ತು. ಹಾಗೆ ಮಾಡುವದು ಧರ್ಮವಲ್ಲವೆಂದು ಅವಳು ತಿಳಿದಳು. ಯುವರಾಜನು ಇಂತಹ ಮೂರ್ಖಕೋಟಿಯೊಳಗಿನವನಿರುವನೆಂದು ಅವಳು ತಿಳಿದಿರಲಿಲ್ಲ. ಅವಳು ದಿನಕ್ಕೊಮ್ಮೆ ಓಲಗಕ್ಕೆ ಹೋಗಿ ಬರುತ್ತಿದ್ದಳು. ಅವಳ ಸೂಚನೆಗಳನ್ನು ಯುವರಾಜನು ದುರ್ಲಕ್ಷಿಸುತ್ತಿದ್ದನಲ್ಲದೆ, ಅವಳನ್ನು ಮಾತು-ಮಾತಿಗೆ ಅಪಮಾನಗೊಳಿಸುತ್ತಿದ್ದನು. ರಾಣಿಯೂ ವೃದ್ಧ ಮಂತ್ರಿ ಸೇನಾಪತಿಗಳೂ ರಾಜ್ಯವನ್ನು ನುಂಗಿ ನೀರು ಕುಡಿಯಲಿಕ್ಕೆ ಸಿದ್ಧರಾಗಿರುವರೆಂದು ಯುವರಾಜನು ತಿಳಿದುಕೊಂಡನು. ಅವನು ರಾಣಿಯ ಪಕ್ಷಪಾತಿಗಳೆಂದು ತೋರುವ ಅಧಿಕಾರಿಗಳ ಮಾನಗೇಡು ಮಾಡತೊಡಗಿದನು. ದೀನಕೃಷ್ಣಾದಿ ಸ್ವಾಮಿನಿಷ್ಠರು ಯುವರಾಜನನ್ನು ಹಾದಿಗೆ ತರುವದಕ್ಕಾಗಿ ಬಹು ಪರಿಯಾಗಿ ಯತ್ನಿಸಿದರು. ಅವರ ಯತ್ನಕ್ಕೆ ಯಶವು ಲಭಿಸಲಿಲ್ಲ. ರಾಣಿಯ ಪಕ್ಷದವರೆಂದು ತಿಳಿದ ಎಷ್ಟೋ ಜನರನ್ನು ಅವನು ಓಲಗದಿಂದ ಹೊರಗೆ ಹಾಕಿಸಿದನು. ರಾಣಿಯು ಸ್ವೈರಸಂಚಾರಿಯೂ ಪೇಟಿಯ ವೇಶ್ಯೆಯೂ ಕುಲಾಂಗಾರಳೂ ಇರುವಳೆಂದು ಅವನು ಜನರ ಮುಂದೆ ಸ್ಪಷ್ಟವಾಗಿ ಆಡಿ ತೋರಿಸತೊಡಗಿದನು. ರಾಣಿಯಾದರೂ ಅವನ ಎಷ್ಟೋ ಕಟು ವಚನಗಳನ್ನು ಕಿವಿಮುಟ್ಟಿ ಕೇಳಿದ್ದಳು. ಯುವರಾಜನು ರಾಣಿಯನ್ನು ಅಪಮಾನಗೊಳಿಸುತ್ತಿದ್ದರೂ, ಅವಳನ್ನು ರಾಜಧಾನಿಯಿಂದ ಹೊರದೂಡುವದು ಅವನಿಗೆ ಅಸಾಧ್ಯವಾಗಿತ್ತು. ಯಾಕಂದರೆ, ಬಹು ಜನ ಸಮಾಜವು ರಾಣಿಯನ್ನು ಬಹಳವಾಗಿ ಪ್ರೀತಿಸುತ್ತಿತ್ತು. ಅವಳನ್ನು ಕೊಂದು ತನ್ನ ಭಯವನ್ನು ಹೋಗಲಾಡಿಸಿಕೊಳ್ಳಬೇಕೆಂಬ ಅವನ ಮನೋದಯವಾದರೂ ಸಿದ್ಧಿಸುವಂತಿದ್ದಿಲ್ಲ. ರಾಣಿಯ ವರ್ಚಸ್ಸವೇ ಆ ಪ್ರಕಾರದ್ದಿತ್ತು.

ಓರಿಸಾದೇಶದ ರಾಜ್ಯಸೂತ್ರಗಳನ್ನು ಕೈಯಲ್ಲಿ ತೆಗೆದುಕೊಂಡು ಶತ್ರುಗಳ ಕೊಬ್ಬನ್ನಡಗಿಸಬೇಕೆಂದೂ, ತದ್ವಾರಾ ಕಾಳಾಪಹಾಡನ ಮೇಲಿನ ಸೇಡು ತೀರಿಸಿಕೊಳ್ಳಬೇಕೆಂದೂ ರಾಣಿಯ ಮಹತ್ವಾಕಾಂಕ್ಷೆಯಿತ್ತು, ಆದರೆ ಯುವರಾಜನ ಮನಸ್ವಿಯಾದ ವರ್ತನದಿಂದ ಅವಳು ಭಗ್ನಮನೋರಥಳಾ

ದಳು. ರಾಜ್ಯಾಧಿಕಾರಿಯೆಂಬ ಹೆಮ್ಮೆಯಿಂದ ಯುವರಾಜನು ತನ್ನನ್ನು ಬುದ್ಧಿ ಪೂರ್ವಕವಾಗಿ ಉಪೇಕ್ಷಿಸತೊಡಗಿರುವನೆಂಬದು ರಾಣಿಗೆ ತಿಳಿಯಿತು. ಅವಳು ಅಭಿಮಾನಿಯಾದ್ದರಿಂದ ರಾಜನ ಅಪಮಾನಗಳನ್ನು ಸಹಿಸದಾದಳು. ಇನ್ನು ರಾಜ್ಯಕಾರ್ಯದಲ್ಲಿ ಕೈಹಾಕುವದು ಯುಕ್ತವಲ್ಲವೆಂದು ಅವಳಿಗೆ ತಿಳಿಯಿತು. ಉತ್ಕಲದ ಪುಣ್ಯವು ತೀರಿರುವದರಿಂದಲೆ ಯುವರಾಜನು ವಿಪರೀತ ಬುದ್ಧಿಯುಳ್ಳವನಾಗಿರುವನೆಂದು ತಿಳಿದು, ಅವಳು ರಾಜಧಾನಿಯನ್ನು ತ್ಯಜಿಸಿ ಜಗನ್ನಾಥಪುರಿಯೊಳಗಿನ ತನ್ನ ಪರ್ಣಕುಟೀರಕ್ಕೆ ಹೋಗಬೇಕೆಂದು ನಿಶ್ಚಯಿಸಿಕೊಂಡಳು.

ರಾಜದ್ರೋಹಿಗಳಾದ ಭೃಗುರಾಮ-ಜನಾರ್ದನರನ್ನು ಜೀವಂತವಾಗಿಟ್ಟದ್ದರಲ್ಲಿ ರಾಣಿಯು ದುಷ್ಟಹೇತುವಿರುವದೆಂದು ಯುವರಾಜನು ತಿಳಿದನು. ಶತ್ರುನಾಶವಾದ ಮೇಲೆ ಅವರ ಸಹಾಯದಿಂದ ತನ್ನ ವಶದಲ್ಲಿ ರಾಜ್ಯಸೂತ್ರಗಳು ಸ್ಥಿರವಾಗಿಉಳಿಯುವಂತೆ ಮಾಡಿಕೊಳ್ಳಬೇಕೆಂದು ರಾಣಿಯು ಮಹತ್ವಾಕಾಂಕ್ಷಿಯಿರಬಹುದೆಂದು ಅವನ ಗ್ರಹಿಕೆಯಾಯಿತು. ಆಗ ಅವನು ನಗರಪಾಲನನ್ನು ಕರೆಯಿಸಿ, ಆ ಅಪರಾಧಿಗಳನ್ನು ಶೂಲಕ್ಕೇರಿಸಿ ಬಿಡಬೇಕೆಂದು ಆಜ್ಞಾಪಿಸಿದನು. ಅವನ ಈ ಭೀಷಣವಾದ ಕಟ್ಟಪ್ಪಣೆಯು ಓಲಗದ ಪ್ರಮುಖ ಅಧಿಕಾರಿಗಳಿಗೆ ಸಹನವಾಗಲಿಲ್ಲ. ರಾಣೀ ವ್ರಜಸುಂದರಿಯೂ, ದೀನಕೃಷ್ಣ-ಗದಾಧರ-ನಗರಪಾಲರೂ ಅವನ ಮನಸ್ಸು ತಿರುಗಿಸುವದಕ್ಕೆ ಬಹು ಪರಿಯಾಗಿ ಯತ್ನಿಸಿದರು. ಮಂತ್ರಿ ಸೇನಾಪತಿಗಳೂ ರಾಣಿಯೂ ಜನಾರ್ದನ-ಭೃಗುರಾಮರ ಜೀವವನ್ನುಳಿಸುವದಕ್ಕಾಗಿ ಯತ್ನಿಸುತ್ತಿದ್ದದನ್ನು ನೋಡಿ, ಯುವರಾಜನು ಮತ್ತಷ್ಟು ಖತಿಗೊಂಡನು. ಓಲಗದ ಅಧಿಕಾರಿಗಳು ರಾಣಿಯ ಪಕ್ಷವನ್ನು ಹಿಡಿದು ಅಪರಾಧಿಗಳನ್ನುಳಿಸುವದಕ್ಕಾಗಿ ಸಾಹಸ ಮಾಡತೊಡಗಿರುವರೆಂದು ಯುವರಾಜನು ತಿಳಿದನು. ಕೂಡಲೆ ಅವನು ತನ್ನ ಆಜ್ಞೆಯನ್ನು ತಿರುಗಿಸುವದಿಲ್ಲೆಂದು ಸ್ಪಷ್ಟವಾಗಿ ಹೇಳಿದನು. ಅವನು ರಾಣಿಗೂ ದೀನಕೃಷ್ಣ, ಗದಾಧರ, ಕರೀಮಶಹ, ನಗರಪಾಲ ಮೊದಲಾದ ಜನರಿಗೂ ಓಲಗದಲ್ಲಿ ಬರಕೂಡದೆಂದು ಕಟ್ಟಪ್ಪಣೆ ಮಾಡಿದನು. ಸ್ವಾತಂತ್ರ್ಯ ಸಿಂಹಾಸನ

ವನ್ನು ರಕ್ಷಿಸಬೇಕೆಂಬ ಮಹತ್ವಾಕಾಂಕ್ಷೆಯನ್ನು ತಳೆದಿದ್ದ ಆ ಸ್ವದೇಶ ನಿಷ್ಠರು ತಮ್ಮ ತಮ್ಮ ಅಧಿಕಾರಗಳನ್ನು ಕಳೆದುಕೊಂಡು ಮನೆಹಿಡಿದು ಕುಳಿತುಕೊಳ್ಳಬೇಕಾಯಿತು.

ದೀನಕೃಷ್ಣಾದಿ ಮುತ್ಸದ್ದಿಗಳು ಭೃಗುರಾಮ-ಜನಾರ್ದನರನ್ನು ಸೆರೆಮನೆಯಿಂದ ದಾಟಿಸುವ ಪ್ರಯತ್ನ ನಡೆಯಿಸಿದರು. ಅವರು ಕಾವಲುಗಾರರನ್ನು ಒಡೆಯಿಸಿಕೊಂಡು ಅಪರಾಧಿಗಳನ್ನು ಮುಕ್ತಗೊಳಿಸಿದರು. ಯುವರಾಜನು ಪ್ರತಿಷ್ಠಿತ ಮಂತ್ರಿಗಳೆನಿಸಿಕೊಂಡಿದ್ದ ಭೃಗುರಾಮ-ಜನಾರ್ದನರ ಕೊಲೆ ಮಾಡಿಸಿದರೆ, ರಾಜಧಾನಿಯಲ್ಲಿ ಬಂಡಾಯ ವೇಳುವದೆಂದು ತಿಳಿದು, ಅವರನ್ನು ದೀನಕೃಷ್ಣ-ನಗರಪಾಲರು ಬಿಡಗಡೆ ಮಾಡಿಸಿದರು. ಅಪರಾಧಿಗಳು ಓಡಿಹೋಗುವರೆಂಬ ಸಂಗತಿಯು ಯುವರಾಜನ ಕಿವಿಗೆ ಬಿದ್ದ ಕೂಡಲೆ ಅವನು ನಖಶಿಖಾಂತವಾಗಿ ಉರಿಯ ತೊಡಗಿದನು. ಇದೆಲ್ಲ ಕಾರಸ್ಥಾನವು ದೀನಕೃಷ್ಣಾದಿ ಮಂತ್ರಿ-ಸೇನಾಪತಿಗಳದಿರುವದೆಂದು ಅವನಿಗೆ ಗೊತ್ತಾಯಿತು. ಅವನು ಆ ಮಂತ್ರಿ-ಸೇನಾನಾಯಕರನ್ನು ದಂಡಿಸುವಷ್ಟು ಧೈರ್ಯಶಾಲಿಯಾಗಿದ್ದಿಲ್ಲ.

ಕಟಕವಾರಣಾಶಿ ರಾಜಧಾನಿಯಲ್ಲಿ ನೊಣ ಬಡೆಯುತ್ತ ಕುಳಿತುಕೊಳ್ಳುವದೆಂದರೆ ರಾಣಿಗೆ ಅತ್ಯಂತ ಬೇಸರವಾಗತೊಡಗಿತು. ಅವಳು ಜಗನ್ನಾಥಪುರಿಗೆ ಹೋಗಬೇಕೆಂದು ನಿರ್ಧರಿಸಿ, ತನ್ನ ಮನೋಗತವನ್ನು ದೀನಕೃಷ್ಣ-ಗದಾಧರ ಮೊದಲಾದವರಿಗೆ ತಿಳಿಸಿದಳು. ಆಗ ದೀನಕೃಷ್ಣನು ರಾಣಿಯನ್ನು ಕುರಿತು:—''ದೇವಿ, ನೀನು ಸಾಮಾನ್ಯಳಲ್ಲ. ನೀನು ಉತ್ಕಲದ ರಾಜ್ಯಲಕ್ಷ್ಮಿಯು; ಸ್ವಾತಂತ್ರ್ಯದೇವತೆಯು! ನೀನು ಹೊರಟು ಹೋದರೆ ಓರಿಸಾದೇಶವು ಅನಾಥವಾಗುವದು. ನಿನ್ನ ಹೊರತು ಅದರ ಸುಖ-ಸ್ವಾತಂತ್ರ್ಯಗಳು ಉಳಿಯಲಾರವು. ಮಹಾರಾಜರು ಬಂದ ಮೇಲೆ ಈಗಿನ ಸ್ಥಿತಿಯು ಉಳಿಯಲಾರದು. ಅಲ್ಲಿಯವರೆಗೆ ತಾಳಬೇಕು.''

''ಸೇನಾಪತಿಗಳೆ, ನನಗೆ ಹಂಗಿನರಮನೆಯು ಬೇಕಾಗಿಲ್ಲ. ದೇವತೆಗಳಿಂದ ವಿಮಾನವು ದೊರೆತರೂ ಅದು ಮಾನಹಾನಿಕರವಿದ್ದರೆ, ನಾನು

ಅದನ್ನು ಎಂದೂ ಸ್ವಿಕರಿಸಲಾರೆನು. ಉದ್ದಾಮನಾದ ಯುವರಾಜನ ಛಲನೆಹೊಂದುತ್ತ ರಾಜಧಾನಿಯಲ್ಲಿದ್ದರೆ ಸ್ವರ್ಗಲಾಭವಾಗುವದಾದರೂ ಅಷ್ಟರಲ್ಲಿಯೇ ಇದೆ. ಅವಿವೇಕಿಯಾದ ಯುವರಾಜನು ತನ್ನ ಮೈಸೊಕ್ಕಿನ ಫಲವನ್ನನುಭವಿಸುವನು. ಅವನ ಉನ್ಮತ್ತತನದ ಬಗ್ಗೆ ಉತ್ಕಲ ದೇಶವಾದರೂ ಗಂಡಾಂತರದಲ್ಲಿ ಬೀಳುವದು. ಅದಕ್ಕೆ ಉಪಾಯವಿಲ್ಲ. ರಾಜ್ಯಶಕಟ ಚಾಲಕರು ಅದೂರದರ್ಶಿಗಳೂ ಮದಾಂಧರೂ ಆಗಿ ನಡೆಯತೊಡಗಿದರೆ, ಅವರ ಅವಿಚಾರದ ಪರಿಣಾಮವು ಅತ್ಯಂತ ಅನಿಷ್ಟವಾಗುವದು. ಸೇನಾಪತಿಗಳೆ, ನನ್ನಿಂದ ಯಾವ ಬಗೆಯ ಕೆಲಸಗಳೂ ನೆರವೇರದಂತಾದ ಮೇಲೆ ನಾನು ರಾಜಧಾನಿಯಲ್ಲಿದ್ದು ಮಾಡುವ ಕತಕೃತ್ಯವೇನು?''

"ರಾಣಿಯವರೆ,'' ಕರೀಮಶಹನು ದೀನವಾಣಿಯಿಂದ:—''ನೀವು ಹೊರಟು ಹೋದರೆ ಯುವರಾಜನು ಸದ್ಗುಣಿಯಾಗುವನೆಂಬಂತಿಲ್ಲ. ಜಗನ್ನಾಥಪುರಿಯಲ್ಲಿರುವದರ ಪ್ರತಿಯಾಗಿ ಇಲ್ಲಿದ್ದರೆ ಹಾನಿಯೇನಿರುವದು? ಮುಕುಂದದೇವ ಮಹಾರಾಜರು ಬಂದ ಮೇಲೆ ನಿಮ್ಮ ಕರ್ತವ್ಯಪ್ರಭಾವದ ಸಾರ್ಥಕವಾಗುವದು.''

"ಕರೀಮಶಹರೆ, ಮಹಾರಾಜರು ಬಂಡುಗಾರರ ದವಡೆಯೊಳಗಿಂದ ಪಾರಾಗಿ ಬರುವದು ದುಸ್ತರವಿರುವದು. ಒಂದುವೇಳೆ ಬಂದರೂ ಅವರು ಮಾಡುವದೇನು? ಅವಿವೇಕಿಯಾದ ಯುವರಾಜನು ತನ್ನ ನೈಸರ್ಗಿಕ ಗುಣಧರ್ಮಕ್ಕನುಸಾರವಾಗಿ ನಡೆಯತಕ್ಕವನೇ. ಅಂದಮೇಲೆ ನಾನು ಇಲ್ಲಿದ್ದು ಮಾಡುವದೇನು?'' ಎಂದು ರಾಣಿಯು ನುಡಿದಳು.

ರಾಣಿಯು ಹೊರಡುವಳೆಂಬ ಸಂಗತಿಯು ದೀನಕೃಷ್ಣಾದಿಗಳಿಗೆ ಅತ್ಯಂತ ದುಃಖವನ್ನುಂಟು ಮಾಡಿತು. ಯುವರಾಜನು ಉತ್ಕಲದ ಸ್ವಾತಂತ್ರ್ಯತೆಯನ್ನೇ ಹೊರಗೆ ಹಾಕಕೊಡಗಿರುವನೆಂದು ಎಲ್ಲ ಜನರೂ ತಿಳಿದುಕೊಂಡರು. ಕರೀಮಶಹ-ಗದಾಧರರಾದರೂ ರಾಜಧಾನಿಯನ್ನು ತ್ಯಜಿಸುವೆವೆಂದು ಹೇಳಿದರು. ಓಲಗವು ಮುತ್ಸದ್ದಿಗಳಿಲ್ಲದೆ ಶೂನ್ಯವಾಯಿತೆಂದೂ, ರಾಜಧಾನಿಯು ವೀರಜನರಿಲ್ಲದೆ ಸ್ಮಶಾನಸದೃಶವಾಗುವದೆಂದೂ ದೀನಕೃಷ್ಣನು ತಿಳಿದನು. ರಾಜಧಾನಿಯಲ್ಲಿರಬೇಕೆಂದು ಅವನು

ಯಾರಿಗೂ ಹೇಳುವಂತಿದ್ದಿಲ್ಲ. ಕಾಲವೇ ವಿಪರೀತವಾಯಿತೆಂದು ಅವನು ಮೌನವ್ರತವನ್ನಂಗೀಕರಿಸಿದನು. ರಾಣಿಯು ತನ್ನ ಸಹಚರಿಯಾದ ಉಷಾ ಸುಂದರಿಯೊಡನೆ ಜಗನ್ನಾಥಪುರಿಯಲ್ಲಿಯ ತನ್ನ ಗುಡಿಸಲಿಗೆ ಹೋದಳು.

ಓರಿಸಾದ ಯುವರಾಜನಾದ ರಾಮಚಂದ್ರದೇವನು ಸಿಂಹಾಸನದ ಮೇಲೆ ಮಂಡಿಸಿದ್ದನು. ಓಲಗವು ಹೊಸ ಮಂತ್ರಿ ಸೇನಾನಾಯಕ ರಿಂದಲೂ, ಹೊಸ ಹೊಸ ಸಭಿಕರಿಂದಲೂ ತುಂಬಿಕೊಂಡಿತ್ತು. ಅವ ರೆಲ್ಲರೂ ಸ್ವಾರ್ಥಸಾಧಕರೇ ಆಗಿದ್ದರು. ಯುವರಾಜನು ಧೂರ್ತರೂ ಅನುಭವಿಕರೂ ಆದ ಮಂತ್ರಿ-ಸೇನಾನಾಯಕರನ್ನು ಹೊರಗೆ ಹಾಕಿಸಿ, ಓಲ ಗದ ತುಂಬ ಬರೇ ಸ್ವಾರ್ಥಿಗಳನ್ನೂ ಮುಖಸ್ತುತಿಪಾಠಕರನ್ನೂ ತುಂಬಿ ದ್ದನು. ರಾಣೀ, ದೀನಕೃಷ್ಣ ಮೊದಲಾದವರನ್ನು ಹೊರಗೆ ಹಾಕಿಸಿದ್ದು ಒಳಿತಾಯಿತೆಂದು ಅವನು ಸಂಭ್ರಮಗೊಳ್ಳತೊಡಗಿದ್ದನು. ನೂತನ ಮಂತ್ರಿಸೇನಾಯಕರು ತಂತಮ್ಮ ಆಸನಗಳಲ್ಲಿ ಕುಳಿತು, ಅರಸನಿಗೆ ರಾಜ ಕಾರಣವನ್ನು ಹೇಳತೊಡಗಿದ್ದರು. ಸಭೆಯಲ್ಲಿ ಹುರುಳಿಲ್ಲದ ವಿಷಯ ಗಳ ವಾದವಿವಾದ ನಡೆದಾಗ ಒಬ್ಬ ದೂತನು ಅಲ್ಲಿಗೆ ಆಗಮಿಸಿ:—

"ಜೀಯಾ, ಹರಿಕೀರ್ತನನು ದೊಡ್ಡ ಸೈನ್ಯದೊಡನೆ ಮಹಾರಾಜರನ್ನು ಮುತ್ತಿರುವನು. ಜನಾರ್ದನ ಮಂತ್ರಿಯೂ ಭೃಗುರಾಮನೂ ಅವ ನನ್ನು ಕೂಡಿಕೊಂಡಿರುವರು. ಹೊಸಸೈನ್ಯವು ನೆರವಿಗೆ ಬಾರದಿದ್ದರೆ ಪರಿಣಾಮವು ಒಳಿತಾಗಲಾರದೆಂದು ಮಹಾರಾಜರು ಹೇಳಿದರು. ನೀವು ಸಾಧ್ಯವಾದ ಮಟ್ಟಿಗೆ ಸೈನ್ಯವನ್ನು ಬೇಗನೆ ಕಳುಹಿಸಿರಿ."

ದೂತನ ಮಾತುಗಳನ್ನು ಕೇಳಿ ಯುವರಾಜನು ಗಹಗಹಿಸಿ ನಕ್ಕನು. ಆಗ ಅವನು ತನ್ನ ಬಳಿಯಲ್ಲಿದ್ದ ಮಂತ್ರಿಯನ್ನು ಕುರಿತು:—"ಮಂತ್ರಿ ಶ್ರೇಷ್ಠರೆ, ನೋಡಿದಿರಾ? ಮುದುಕನು ಇನ್ನೂ ಬದುಕಿಕೊಂಡಿರಬೇಕೆಂದು ಸಾಹಸ ನಡೆಯಿಸಿರುವನು. ಅವನು ಸತ್ತರೆ ಕೆಡುವಂತಹದೇನಿದ್ದೀತು? ಈ ಮಾತು ಒತ್ತಟ್ಟಿಗಿರಲಿ. ನಮ್ಮ ಬಳಿಯಲ್ಲಾದರೂ ಹೆಚ್ಚಿನ ಸೈನ್ಯ ವೆಲ್ಲಿರುವದು? ಕಾಳಾಪಹಾಡನು ರಾಜಧಾನಿಯ ಮೇಲೆ ದಂಡೆತ್ತಿ ಬರುವ ನೆಂಬ ವಾರ್ತೆಯಿದೆ. ಇಂತಹ ಪ್ರಸಂಗದಲ್ಲಿ ಸೈನ್ಯವನ್ನು ಹೊರಗೆ

ಕಳಿಸುವದು ಯೋಗ್ಯವಾಗುವದೆ?''

ಯುವರಾಜನು ಹೀಗೆ ನುಡಿದ ಕೂಡಲೆ ಒಬ್ಬ ಮಂತ್ರಿಯು:— "ಮಹಾರಾಜರಿಗೆ ಸೈನ್ಯವನ್ನು ಸರ್ವಥಾ ಕಳಿಸಿಕೊಡಬಾರದು. ಕಾಳಾಪಹಾಡನು ಸಿಂಹಾಸನದ ಪ್ರಾಪ್ತಿಗೆ ಧಾವಿಸುತ್ತಿರುವಂತೆ ಮಹಾರಾಜರಾದರೂ ಅದೇ ಸಿಂಹಾಸನಕ್ಕಾಗಿ ಧಾವಿಸುತ್ತಿರುವರು. ಮಹಾರಾಜರು ವಿಜಯಿಗಳಾಗಿ ಬಂದರೆ ನಿಮ್ಮ ವಶದಲ್ಲಿ ಈ ಸಿಂಹಾಸನವು ಉಳಿಯಲಾರದು. ಅವರು ಸಾಯುವವರೆಗೆ ನೀವು ಹುಬ್ಬುಗೈ ಹಚ್ಚಿಕೊಂಡು ನೊಣ ಬಡಿಯುತ್ತ ಕುಳಿತುಕೊಳ್ಳಬೇಕಾಗುವದು.''

ಉನ್ಮತ್ತನಾದ ಯುವರಾಜನು ಸ್ವಾರ್ಥಕ್ಕಾಗಿ ಪುತ್ರಧರ್ಮವನ್ನು ಮರೆತನು. ರಾಜಧಾನಿಯಲ್ಲಿ ಹೆಚ್ಚಿನ ಸೈನ್ಯವಿಲ್ಲವೆಂದು ಅವನು ಅರಸನಿಗೆ ತಿಳಿಸಿದನು. ಯುದ್ಧ ಮಾಡುವದಾಗದಿದ್ದರೆ, ಸಮರಾಂಗಣದಿಂದ ಹೊರಟುಬಂದು ಅರಮನೆಯಲ್ಲಿ ಜಗನ್ನಾಥನ ಸ್ತೋತ್ರ ಮಾಡುತ್ತ ಕಾಲಹರಣ ಮಾಡಬೇಕೆಂದೂ ಅವನು ಅರಸನಿಗೆ ತಿಳಿಸಿದನು.

ಬಂಡುಗಾರರಾದ ಜನಾರ್ದನ, ಹರಿಕೀರ್ತನ, ಭೃಗುರಾಮರು ಅಪಾರವಾದ ಸೈನ್ಯವನ್ನು ಕೂಡಿಸಿಕೊಂಡು ಮುಕುಂದದೇವನನ್ನು ಮುತ್ತಿದ್ದರು. ಅರಸನು ಶತ್ರುಗಳ ಮುತ್ತಿಗೆಯಲ್ಲಿ ಸಿಲುಕಿ ಹಣ್ಣುಗಾಯಿ-ನೀರುಗಾಯಿಯಾಗಿದ್ದನು. ಆದರೂ ಅವನು ಎದೆಗುಂದದೆ ಜೀವಯಿರುವ ವರೆಗೆ ಯುದ್ಧಮಾಡಬೇಕೆಂದು ನಿರ್ಧರಿಸಿಕೊಂಡಿದ್ದನು. ರಾಜಧಾನಿಯಿಂದ ನಿರಾಶಾಜನಕವಾದ ಸುದ್ದಿಯು ಬಂದದ್ದರಿಂದ ಅವನು ಬಹಳೇ ದುಃಖಿತನಾದನು. ಶತ್ರು ಸೈನ್ಯದಿಂದ ಪಾರಾಗಿ ಹೋಗುವಷ್ಟು ಅನುವು ಇದ್ದಿಲ್ಲವಾದ್ದರಿಂದ ಅವನು ಯುದ್ಧವನ್ನು ಸಾಗಿಸಲೇಬೇಕಾಗಿತ್ತು. ಶತ್ರುಗಳ ಬಿಗಿಯಾದ ಮುತ್ತಿಗೆಯಿಂದ ಅರಸನ ಸೈನ್ಯಕ್ಕೆ ಅನ್ನವಿಲ್ಲದೆ ಸಾಯತೊಡಗಿತು. ಮುಕುಂದದೇವನು ತನ್ನ ಪರಾಕ್ರಮದ ಪರಾಕಾಷ್ಠೆಯನ್ನು ತೋರಿಸಿದರೂ ಯಶವು ದೊರೆಯಲಿಲ್ಲ. ಬಂಡುಗಾರರ ಅಗ್ರಗಣ್ಯನಾದ ಜನಾರ್ದನನು ಮುಕುಂದದೇವನ ಸೈನ್ಯವನ್ನು ನಿರ್ಮೂಲಗೊಳಿಸಿ, ಅವನನ್ನು ಕೈಮುಟ್ಟಿ ಕೊಲೆಗೈದನು!

ಉತ್ಕಲದ ಸ್ವಾತಂತ್ರ್ಯಕ್ಕಾಗಿ ವ್ಯಾಹತಿಯಿಲ್ಲದೆ ಪ್ರಯತ್ನಿಸುತ್ತಿದ್ದ ಮುಕುಂದದೇವನ ಮರಣದಿಂದ ದೇಶಕ್ಕೆ ಅಪರಿಮಿತವಾದ ಹಾನಿಯಾಯಿತು!

ಮುಕುಂದದೇವನ ಮರಣದ ಶೋಚನೀಯ ಸಂಗತಿಯು ರಾಜಧಾನಿಗೆ ಮುಟ್ಟಿತು. ರಾಜನಿಷ್ಠ ಜನರು ಅರಸನ ಮರಣದಿಂದ ಕಡು ದುಃಖಿತರಾದರು. ಯುವರಾಜನೂ ಅವನ ಹಸ್ತಕರೂ ಅರಸನ ಮರಣದಿಂದ ಸಂಭ್ರಮಗೊಂಡರು. ಸಿಂಹಾಸನದ ಮಾರ್ಗವು ನಿರುಪಾಧಿಕವಾಯಿತೆಂದು ಯುವರಾಜನಿಗೆ ಬಹಳೇ ಆನಂದವಾಯಿತು. ಅವನ ಈ ಆನಂದವು ಬಹಳ ದಿನಗಳವರೆಗೆ ಸ್ಥಿರವಾಗಿ ಉಳಿಯಲಿಲ್ಲ; ಮುಂದೆ ಸ್ವಲ್ಪ ದಿನಗಳಲ್ಲಿಯೆ ನರಶಾರ್ದೂಲನಾದ ಕಾಳಾಪಹಾಡನು ಕಟಕವಾರಣಾಸಿ ರಾಜಧಾನಿಯನ್ನು ಮುತ್ತಿದನು. ಸೇಡು ತೀರಿಸಿಕೊಳ್ಳಬೇಕೆಂಬ ಭಾವನೆಯಿಂದ ಸಾಗಿ ಬಂದ ಕಾಳಾಪಹಾಡನು ರಾಜಧಾನಿಯನ್ನೂ ಸಿಂಹಾಸನವನ್ನೂ ಅವುಗಳೊಡನೆ ಓರಿಸಾದ ಸ್ವಾತಂತ್ರ್ಯವನ್ನೂ ನಾಶಮಾಡುವನೆಂಬದು ಎಲ್ಲ ಜನರಿಗೂ ಒಡೆದು ಕಾಣಲಾರಂಭಿಸಿತು. ಬಿಗಿಯಾದ ಮುತ್ತಿಗೆಯಿಂದ ಪ್ರಜಾಜನರ ಎಲ್ಲ ವ್ಯವಹಾರಗಳು ಕಟ್ಟಾದವು. ಎಲ್ಲ ಕಡೆಯಲ್ಲಿ ಹಾ ಹಾಕಾರವು ಉತ್ಪನ್ನವಾಯಿತು. ತಮ್ಮನ್ನು ಸಂಕಟದಲ್ಲಿ ಹಾಕಿ ಬಂಗಾಲೀ ರಾಣಿಯು ಎತ್ತ ಹೊರಟು ಹೋದಳೆಂದು ಪ್ರಜಾಜನರು ದುಃಖೋದ್ಗಾರ ತೆಗೆಯಲಾರಂಭಿಸಿದರು. ಇಂತಹ ಗಂಡಾಂತರ ಪ್ರಸಂಗದಲ್ಲಿ ಯುವರಾಜನಿಗೆ ಸಿಂಹಾಸನಪ್ರಾಪ್ತಿಯ ಆನಂದವು ಹೇಗೆ ಉಳಿಯುವದು?

ಕಾಳಾಪಹಾಡನ ಅಪಾರ ಸೈನ್ಯದ ಮುತ್ತಿಗೆಯಿಂದ ಯುವರಾಜನು ಎದೆಗುಂದಿದನು. ತನಗೆ ರಾಜ್ಯವು ಬೇಡ; ಸಿಂಹಾಸನವು ಬೇಡ; ಪ್ರಾಣವೊಂದುಳಿದರೆ ಸಾಕೆಂದು ಅವನು ಅನ್ನಲಾರಂಭಿಸಿದನು. ರಾಜಧಾನಿಯೊಳಗಿನ ಒಂದು ಇರುವೆ ಸಹ ನುಸುಳಿ ಹೋಗದಂತಹ ಇಕ್ಕಟ್ಟಿನ ಮುತ್ತಿಗೆಯಲ್ಲಿ ಯುವರಾಜನು ದಾಟಿ ಹೋಗುವದು ದುರಶೋಪಾಸ್ತವಾಗಿತ್ತು. ಓಡಿ ಹೋಗಲಿಕ್ಕೆ ಸಹ ಮಾರ್ಗವಿಲ್ಲದಂತಾದ್ದರಿಂದ ಅವನು

ಅಳಿದ್ದುಳಿದು ಮೊದಲಿನ ಸೇನಾಪತಿಯಾದ ದೀನಕೃಷ್ಣನನ್ನು ಕರೆಯಿಸಿ, ಓರಿಸಾದ ಮಾನವನ್ನೂ ಸ್ವಾತಂತ್ರ್ಯ-ಪ್ರಾಣವನ್ನೂ ಉಳಿಸಬೇಕೆಂದು ಬೇಡಿಕೊಂಡನು. ಕೈ ಮೀರಿ ಹೋದ ಪ್ರಸಂಗದಲ್ಲಿ ದೀನಕೃಷ್ಣನಾದರೂ ಏನು ಮಾಡುವನು? ರಾಜನಿಷ್ಠರೂ ಸ್ವಾತಂತ್ರ್ಯಾಭಿಮಾನಿಗಳೂ ಶೂರರೂ ಆದ ಗದಾಧರ-ಹರೀಮುಶಹರೂ, ಅದ್ವಿತೀಯ ರಾಜಕಾರಣಪಟುವಾದ ರಾಣಿಯೂ ಹೊರಟು ಹೋದ ಮೇಲೆ ಅವನೊಬ್ಬನಿಂದ ಆಗಬೇಕಾದುದೇನು? ಆದರೂ ಆ ಸ್ವಾಮಿನಿಷ್ಠನು ಸ್ವಾಮಿಕಾರ್ಯಕ್ಕಾಗಿಯೂ ಸ್ವದೇಶಕ್ಕಾಗಿಯೂ ಶತ್ರುಗಳೊಡನೆ ಹೋರಾಡುವೆನೆಂದು ವಚನವಿತ್ತನು.

ಓರಿಸಾದ ಓಲಗವು ಜಡಸ್ವಾರ್ಥಿಗಳೂ ಹೇಡಿಗಳೂ ಆದ ನೀಚ ಜನರಿಂದ ತುಂಬಿಕೊಂಡಿತ್ತು. ಸೈನ್ಯದಲ್ಲಿ ಅತಿಯಾಗಿ ಅವ್ಯವಸ್ಥೆಯು ನೆಲೆಗೊಂಡಿತ್ತು. ದೀನಕೃಷ್ಣನು ಸಾಧ್ಯವಾದಮಟ್ಟಿಗೆ ಸಂಗ್ರಾಮದ ಸಿದ್ಧತೆಯನ್ನು ಮಾಡಿಕೊಂಡು ಯುದ್ಧಕ್ಕೆ ಪ್ರಾರಂಭಿಸಿದನು. ರಾಜ್ಯಲಕ್ಷ್ಮಿಯೂ ಸ್ವಾತಂತ್ರ್ಯಲಕ್ಷ್ಮಿಯೂ ಹಿಂದುಗಳ ಮೇಲೆ ಕ್ರುದ್ಧರಾಗಿರುವದರಿಂದ ತನಗೆ ವಿಜಯವು ದೊರೆಯುವದಿಲ್ಲವೆಂದೇ ದೀನಕೃಷ್ಣನು ತಿಳಿದುಕೊಂಡಿದ್ದನು. ತನ್ನ ಮಾತೃಭೂಮಿಯು ಪರಕೀಯರ ದಾಸ್ಯದಲ್ಲಿ ಕೊಳೆಯಬೇಕಾಗುವ ಪ್ರಸಂಗವೊದಗುವದೆಂದು ಆ ವೃದ್ಧನ ಕಣ್ಣುಗಳು ದುಃಖಾಶ್ರುಗಳಿಂದ ತುಂಬಿದ್ದವು. ಜಗನ್ನಾಥನ ಇಚ್ಛೆಯಿದ್ದಂತಾಗುವದೆಂದು ಅವನು ಮನಸ್ಸಿನ ಸಮಾಧಾನ ಮಾಡಿಕೊಂಡು ಶತ್ರುಸೇನೆಯ ಮೇಲೆ ತುಬಾಕಿಗಳನ್ನೂ ಅಗ್ನಿಗೋಲಕ ಯಂತ್ರಗಳನ್ನೂ ಬಾಣಗಳನ್ನೂ ಪ್ರಯೋಗಿಸತೊಡಗಿದನು.

ಕಾಳಾಪಹಾಡನ ಸೇನಾಸಾಗರವು ಶತ್ರುಗಳ ಪ್ರತಿಕಾರ ಮಾಡುತಲಿತ್ತು. ಕಾಳಾಪಹಾಡನು ಅತ್ಯಂತ ಶೂರತನದಿಂದ ಹೋರಾಡಿ ರಾಜಧಾನಿಯನ್ನೂ ಕೋಟೆಯನ್ನೂ ವಶಪಡಿಸಿಕೊಂಡನು. ಯುವರಾಜ ರಾಮಚಂದ್ರದೇವನೂ, ದೀನಕೃಷ್ಣ ಸೇನಾಪತಿಯೂ ರಣದೇವತೆಗೆ ಮೈಗೊಟ್ಟರು. ಓರಿಸಾದ ಸ್ವಾತಂತ್ರ್ಯಸಿಂಹಾಸನವು ಕಾಳಾಪಹಾಡನ

ವಶವಾಯಿತು; ಉತ್ಕಲದ ಭಾಗ್ಯವು ಬಯಲಾಯಿತು!

ಕಾಳಾಪಹಾಡನು ವಿಜಯೋನ್ಮತ್ತನಾಗಿ ರಾಜಧಾನಿಯಲ್ಲಿ ಅತ್ಯಂತ ಕೋಲಾಹಲವನ್ನೆಬ್ಬಿಸಿದನು. ಕಟಕವಾರಣಾಶಿಯೊಳಗಿನ ಎಲ್ಲ ದೇವಸ್ಥಾನಗಳು ನಾಶವಾದವು. ಸುಂದರವಾದ ಅರಮನೆಯೂ, ಚಿತ್ರಾಭುವನವೂ, ಉತ್ತಮೋತ್ತಮವಾದ ವಿಲಾಸಮಂದಿರಗಳೂ, ಅಂತಃಪುರವೂ ಉಧ್ವಸ್ತಗೊಳಿಸಲ್ಪಟ್ಟವು! ಕಟಕವಾರಣಾಶಿ ರಾಜಧಾನಿಯಲ್ಲಿ ನಡೆದ ಕೋಲಾಹಲವನ್ನು ವರ್ಣಿಸಲಸಾಧ್ಯವು. ಸೇಡು ತೀರಿಸಿಕೊಳ್ಳುವ ಭಯಂಕರವಾದ ಭಾವನೆಯಿಂದ ಉನ್ಮತ್ತನಾದ ಕಾಳಾಪಹಾಡನು ಸರ್ವನಾಶ ಮಾಡಿದನು.

ಓರಿಸಾದ ಸ್ವಾತಂತ್ರ್ಯಸಿಂಹಾಸನವನ್ನು ಪಾದಾಕ್ರಾಂತಗೊಳಿಸಿದ್ದರೂ, ಓರಿಸಾದ ಅರಸನೂ ಯುವರಾಜನೂ ರಣದೇವತೆಗೆ ಬಲಿಯಾಗಿದ್ದರೂ, ಕಾಳಾಪಹಾಡನ ಸೇಡು ತೀರಿಸಿಕೊಳ್ಳಬೇಕೆಂಬ ಮನಸ್ಸಿಗೆ ತೃಪ್ತಿಯಾಗಿರಲಿಲ್ಲ. ಸರ್ವ ನಾಶ ಮಾಡಿದ ಆ ನವಾಬ ಜಾಮಾತನು ಇನ್ನೂ ಎಂಥ ಭಯಂಕರ ಕೃತ್ಯವನ್ನು ಮಾಡಬೇಕೆಂದು ಯೋಚಿಸಿದ್ದನೋ ಏನೋ!

---

## ಪೂರ್ವಾಶ್ರಮ ಪ್ರಣಯಿನಿ.

ರಾಣೀ ವ್ರಜಸುಂದರಿಯು ಮತ್ತೆ ವ್ರಜಬಾಲೆಯಾಗಿ ಜಗನ್ನಾಥಪುರಿಯ ಬಳಿಯಲ್ಲಿದ್ದ ಸಮುದ್ರತೀರದ ತನ್ನ ಗುಡಿಸಲಿಗೆ ಉಷಾಸುಂದರಿಯೊಡನೆ ಬಂದಳು. ಅವಳೀಗ ತೀರ ನಿರಾಧಾರಿಯಾಗಿದ್ದಳು. ಅವಳಿಗೆ ಉಷಾಸುಂದರಿಯು ಹೊರತು ತನ್ನವರೆಂಬವರು ಇಡೀ ಜಗತ್ತಿನಲ್ಲಿ ಯಾರೂ ಇಲ್ಲದಂತಾಗಿತ್ತು. ಕೆಲವು ದಿನ ರಾಣಿಯೆಂದೆನಿಸಿಕೊಂಡು ಉತ್ಕಲದ ರಾಜ್ಯಸೂತ್ರಗಳನ್ನು ಚಾಲನೆಗೊಳಿಸುತ್ತಿದ್ದ ವ್ರಜಬಾಲೆಗೆ ಅತ್ಯಂತ ದೈನ್ಯದಿಂದ ಕಾಲಕಳೆಯುವ ಪ್ರಸಂಗಬಂದಿತ್ತು. ಅವಳ ಕೈಯಲ್ಲಿ ರಾಜ್ಯಾಧಿಕಾರವಿದ್ದಿಲ್ಲ; ಸೇವಕ-ಸೇವಕಿಯರಿದ್ದಿಲ್ಲ; ಭಾಂಡಾರವಿದ್ದಿಲ್ಲ; ಪ್ರಸಂಗದಲ್ಲಿ ಉಪಯೋಗವಾಗಬೇಕೆಂದು ಜತನ ಮಾಡಿಕೊಂಡಿಟ್ಟ ಅವಳ್ಳ

ವಾದ ಅಲಂಕಾರಗಳು ಸಹ ಅವಳ ಕೈಬಿಟ್ಟಿದ್ದವು. ಉತ್ಕಲದ ಸ್ವಾತಂತ್ರ್ಯ ರಕ್ಷಣೆಗಾಗಿ ಸೈನ್ಯವನ್ನು ಕೂಡಿಸಬೇಕೆಂಬ ಇಚ್ಛೆಯಿಂದ ಅವಳು ತನ್ನ ಆಭರಣಗಳನ್ನೆಲ್ಲ ದೀನಕೃಷ್ಣ ಸೇನಾಪತಿಗೆ ಕೊಟ್ಟುಬಿಟ್ಟಿದ್ದಳು. ವ್ರಜ ಬಾಲೆಗೆ ಜಗತ್ತಿನಲ್ಲಿಯ ಎಲ್ಲ ಆಶಾತಂತುಗಳು ಹರಿದು ಹೋಗಿದ್ದವೆಂದು ಹೇಳಬಹುದು. ಗದಾಧರನಲ್ಲಿ ಪ್ರಣಯವುಳ್ಳವಳಾಗಿ ಅವನನ್ನೇ ವರಿಸ ಬೇಕೆಂದು ನಿರ್ಧರಿಸಿಕೊಂಡಿದ್ದ ವ್ರಜಬಾಲೆಗೆ ದುರ್ದೈವ ವಶದಿಂದ ಕಾಲಾ ಚಾಂದರಾಯನನ್ನು ವರಿಸುವ ಪ್ರಸಂಗ ಒದಗಿತು. ವಿವಾಹಾನಂತರ ದಲ್ಲಿ ಅವಳು ಕಾಲಾಚಾಂದನಿಗೆ ಸಾಕುಸಾಕೆನ್ನ ಹಚ್ಚಿ, ಗದಾಧರನನ್ನು ವರಿಸಬೇಕೆಂದು ಸಾಂತೋಡೆಗೆ ಬಂದಳು. ಗದಾಧರನು ಅವಳ ಇಚ್ಛೆ ಯನ್ನು ಈಡೇರಿಸಲಿಲ್ಲ. ಪರಂಪರ ಪದ್ಧತಿಯೂ ಸಮಾಜದ ಅಂಧಕಟ್ಟಳೆ ಗಳೂ ವ್ರಜಬಾಲೆಯ ಆತುರತೆಗೆ ಅಡ್ಡಾದವು. ಗದಾಧರನು ತನ್ನ ಪ್ರಣ ಯಿನಿಯನ್ನು ತುಂಬಾ ಉಪೇಕ್ಷಿಸಿದನು. ಕೂಡಲೆ ವ್ರಜಬಾಲೆಯ ಆಶೆ ಗಳೆಲ್ಲ ಬಯಲಾದವು ಆಗ ಅವಳು ಕಾಲಾಚಾಂದನ ಮೇಲಿನ ಸೇಡು ತೀರಿಸಿ ಕೊಳ್ಳಬೇಕೆಂಬ ಮಹತ್ವಾಕಾಂಕ್ಷೆಯುಳ್ಳವಳಾದಳು. ಕಾಳಾಪಹಾಡ ನಂತಹ ವಂಗದೇಶದ ಪ್ರಸಿದ್ಧ ಸೇನಾಪತಿಯು ಸೇಡು ತೀರಿಸಿಕೊಳ್ಳಬೇ ಕೆಂದು ಅವಳು ಕಟಕವಾರಣಾಶಿ ರಾಜಧಾನಿಗೆ ಬಂದು, ತನ್ನ ಅತುಲ ನೀಯವಾದ ಬುದ್ಧಿಸಾಮರ್ಥ್ಯದಿಂದ ರಾಜ್ಯಸೂತ್ರಗಳನ್ನು ಕೈಯಲ್ಲಿ ತೆಗೆದುಕೊಂಡಳು. ಅವಳು ಅಲೌಕಿಕವಾದ ಕಾರಸ್ಥಾನಗಳನ್ನು ರಚಿಸಿ ಮಹಾ ವಿಜಯವನ್ನು ಸಂಪಾದಿಸಿ ಕೀರ್ತಿಯನ್ನು ಪಡೆದಳು. ಕಡೆಗೆ ವಿಧಿಯು ಅವಳ ಬೆನ್ನುಬಿಡಲಿಲ್ಲ!

ಮುಕುಂದದೇವನಂತಹ ದೊಡ್ಡ ಅರಸನ ಪಟ್ಟದ ರಾಣಿಯಾಗುವ ಸುಯೋಗವು ವ್ರಜಬಾಲೆಗೆ ಒದಗಿತ್ತು; ಆದರೆ ಅವಳು ರಾಜ್ಞೀಪದದ ಅಭಿಲಾಷೆಯಿಂದ ತನ್ನ ಪಾವಿತ್ರ್ಯವನ್ನು ಮಾರಿಕೊಳ್ಳಲಿಲ್ಲ. ಯುದ್ಧದ ಗೊಂದಲವೆಲ್ಲ ಅಡಗಿ ದೇಶದಲ್ಲಿ ಸುಖ-ಶಾಂತಿಗಳು ಪ್ರಸ್ಥಾಪಿಸಲ್ಪಡುವ ವರೆಗೆ ವಿವಾಹದ ಪ್ರಸ್ತಾಪವನ್ನು ತೆಗೆಯಕೂಡದೆಂದು ಅವಳು ಅರಸನಿಗೆ ಸ್ಪಷ್ಟವಾಗಿ ಹೇಳಿದ್ದಳು. ತನ್ನ ಸೇಡು ತೀರಿಸಿಕೊಳ್ಳುವ ಹವಣಿಕೆಯು

ಪೂರ್ಣವಾದರೆ ಅದರೊಡನೆ ಓರಿಸಾದ ಹಿತವೂ ಸಾಧಿಸುವದೆಂದು ವ್ರಜ ಬಾಲೆಯು ತಿಳಿದಿದ್ದಳು. ಸ್ವಾರ್ಥಿಯಾದ ಯುವರಾಜನು ಅವಳಿಗೆ ಏನೂ ಮಹತ್ವ ಕೊಡಲಿಲ್ಲ. ಕಡೆಗೆ ವ್ರಜಬಾಲೆಯು ತನ್ನ ಗುಡಿಸಲ ವನ್ನರಸುತ್ತ ಪುರಿಗೆ ಬರಬೇಕಾಯಿತು.

ವ್ರಜಬಾಲೆಯು ಪುರಿಗೆ ಬಂದ ಸ್ವಲ್ಪ ದಿನಗಳಲ್ಲಿ ಮುಕುಂದ ದೇವನ ಮರಣದ ಸುದ್ದಿಯು ತಿಳಿಯಿತು. ಈ ಶೋಚನೀಯ ಸಂಗತಿ ಯಿಂದ ವ್ರಜಬಾಲೆಯೂ ಉಸಾಪುಂದರಿಯೂ ಪರಮ ದುಃಖಿತರಾದರು. ಮುಕುಂದದೇವನ ತರುವಾಯ ಉತ್ಕಲದ ಸ್ವಾತಂತ್ರ್ಯಸಿಂಹಾಸನವು ಬಹು ಕಾಲ ಬಾಳಲಾರದೆಂಬದು ವ್ರಜಬಾಲೆಗೆ ಗೊತ್ತಾಗಿತ್ತು. ಅವಿ ವೇಕಿಯಾದ ಯುವರಾಜನು ಹಿಂದುಗಳ ಸ್ವಾತಂತ್ರ್ಯವನ್ನು ನಷ್ಟಗೊಳಿ ಸಲಿಕ್ಕೆ ಕಾರಣೀಭೂತನಾಗುವನೆಂದು ಅವಳಿಗೆ ನಿಚ್ಚಳವಾಗಿ ಕಾಣಲಾ ರಂಭಿಸಿತು. ಘಟಿಸಿದ ಸಂಗತಿಯ ಒಗ್ಗೆ ದುಃಖವನ್ನು ವ್ಯಕ್ತಪಡಿಸು ವದಷ್ಟಲ್ಲದೆ, ಅವಳಿಂದ ಯಾವ ಕಾರ್ಯವು ನೆರವೇರುವಂತಿತ್ತು? ಕೈ ಯಲ್ಲಿ ಅಧಿಕಾರವೂ, ರಾಜ್ಯಸೂತ್ರಗಳೂ, ಬೊಕ್ಕಸವೂ, ಸೈನ್ಯವೂ ಇರುತ್ತಿದ್ದರೆ, ನಿಜವಾದ ರಾಜಕಾರಣ ಪಟುಗಳಿಗೂ ಶೂರರಿಗೂ ತಮ್ಮ ಬುದ್ಧಿಕೌಶಲ್ಯವನ್ನೂ ಶೂರತನವನ್ನೂ ವ್ಯಕ್ತಪಡಿಸಲಿಕ್ಕೆ ಮಾರ್ಗ ವಿರುತ್ತದೆ. ಸತ್ತಾಹೀನನಾದ ಮನುಷ್ಯನು ಪ್ರತಿಭಾಶಾಲಿಯಿದ್ದರೂ ಹೇಗೆ ತೇಜೋಭಂಗ ಹೊಂದುವನೆಂಬದಕ್ಕೆ ಪ್ರಜಬಾಲೆಯೇ ತಕ್ಕ ದೃಷ್ಟಾಂತವಾಗಿರುವಳು. ಓರಿಸಾದ ಸ್ವಾತಂತ್ರ್ಯವು ಸೂರೆಗೊಳಿಸ ಲ್ಪಡುವದೆಂಬದು ಸ್ಪಷ್ಟವಾಗಿ ಕಾಣುತ್ತಿದ್ದರೂ, ವ್ರಜಬಾಲೆಗೆ ಯಾವ ಕಾರ್ಯವನ್ನೂ ಮಾಡಲಿಕ್ಕೆ ಬರುವಂತಿದ್ದಿಲ್ಲ. ಯುವರಾಜನು ಜಾಣ್ಮೆಯುಳ್ಳವನಾಗಿ ರಾಜ್ಯದ ಅಧಿಕಾರವನ್ನು ವ್ರಜಬಾಲೆಗೆ ಒಪ್ಪಿಸಿ ತಾನು ತಟಸ್ಥನಾಗಿ ಕುಳಿತಿದ್ದರೆ, ಒಹಳ ಮಾಡಿ ಉತ್ಕಲದ ಸ್ವಾತಂತ್ರ್ಯವು ನಷ್ಟವಾಗುವ ಪ್ರಸಂಗವೊದಗುತ್ತಿದ್ದಿಲ್ಲ. ಒಂದು ವೇಳೆ ಕಾಳಾ ಪಹಾಡನು ವಿಜಯಿಯಾದರೂ ವ್ರಜಬಾಲೆಯು ತನ್ನ ಕೌಶಲ್ಯದಿಂದ ಆ ಶತ್ರುಗಳ ಕೊಲೆಸುಲಿಗೆ ಮೊದಲಾದವುಗಳಿಗಾದರೂ ಅಡ್ಡಿ ಮಾಡುತ್ತಿದ್ದಳು.

ವ್ರಜಬಾಲೆಯು ಉಷಾಸುಂದರಿಯೊಡನೆ ಮಾತನಾಡುತ್ತ ತನ್ನ ಗುಡಿಸಲಿನ ಮುಂದೆ ಕುಳಿತುಕೊಂಡಿದ್ದಳು. ತಮ್ಮ ಆಯುಷ್ಯವನ್ನು ಜಗನ್ನಾಥನ ಸೇವೆಯಲ್ಲಿಯೇ ಕಳೆಯಬೇಕೆಂದು ಉಷಾಸುಂದರಿಯು ತನ್ನ ಮೈತ್ರಿಣಿಗೆ ಹೇಳಲಾರಂಭಿಸಿದ್ದಳು. ವ್ರಜಬಾಲೆಯ ಹೃದಯವು ಶೂನ್ಯವತ್ತಾಗಿತ್ತು; ಮನಸ್ಸು ಉದಾಸವಾಗಿತ್ತು. ತನ್ನ ಆಯುಷ್ಯದೊಳಗಿನ ಒಂದಾದರೂ ಆಶೆಯು ಈಡೇರದ್ದರಿಂದ ಅವಳ ಉದಾತ್ತ ಭಾವನೆಗಳೆಲ್ಲವೂ ನಾಶವಾಗಿದ್ದವು. ಮುಂದೆ ಏನು ಮಾಡಬೇಕೆನ್ನುವದು ಸಹ ಅವಳಿಗೆ ತಿಳಿಯದಾಗಿತ್ತು. ಆಗ ಅವಳು ಉಷಾಸುಂದರಿಯನ್ನು ಕುರಿತು:—"ನಾವು ನಮ್ಮ ಆಯುಷ್ಯವನ್ನು ಹೇಗೆ ಕಳೆಯಬೇಕೆಂಬದನ್ನು ನಿಶ್ಚಯಿಸಲಿಕ್ಕೆ ಎಷ್ಟರವರು? ಜಗನ್ನಾಥನ ಇಚ್ಛೆಯಂತೆ ಎಲ್ಲ ಕಾರ್ಯಗಳು ಜರುಗುವವು. ನಾವು ನಿರ್ಧರಿಸಿಕೊಂಡ ಯಾವ ಕಾರ್ಯಗಳು ಈಡೇರಿರುವವೆಂದು ನಾವು ಭಾವೀ ಕಾರ್ಯಕ್ರಮಗಳನ್ನು ನಿಶ್ಚಯಿಸಿಕೊಳ್ಳಬೇಕು?"

"ಶ್ರೀಪುರಕ್ಕೆ ಹೋಗೋಣವೆ?"

"ಛೇ! ಛೇ!"

"ಕಟಕವಾರಣಾಶೀ ರಾಜಧಾನಿಗೆ?"

"ಇಷ್ಟು ಹೊತ್ತಿಗೆ ರಾಜಧಾನಿಯು ಯವನ ವೀರನಾದ ಕಾಳಾಪಹಾಡನ ಹಸ್ತಗತವಾಗಿರಬಹುದು."

"ಬಹಳೇ ನೆಟ್ಟಗಾಯಿತು. ಮೊದಲು ನೀನು ಅರ್ಧ ಹೆಸರಿನ ರಾಣಿಯಾಗಿದ್ದೆ; ಈಗ ನಿಜವಾದ ರಾಣಿಯಾಗಲಿಕ್ಕೆ ಅನುವು ದೊರೆಯಿತು."

"ಉಷೆ! ನೀನು ಕುಲಯುವತಿಯರ ಶೀಲಕ್ಕೆ ಕುಂದು ತರುವ ಮಾತುಗಳನ್ನಾಡುವೆ!"

"ಕಾಳಾಪಹಾಡನು ನಿನ್ನ ವಿವಾಹಿತಪತಿಯು."

"ನಾನು ಅವಿವಾಹಿತಳಿರುವೆನು. ಬಲಾತ್ಕಾರದ ವಿವಾಹಕ್ಕೆ ನಿಜವಾದ ವಿವಾಹವೆನ್ನಲಾರೆನು"

"ನಿನ್ನ ಹೃದಯೇಶ್ವರನಾದ ಗದಾಧರನಲ್ಲಿ ಸುಖದಿಂದ ಬಾಳುವೆಯಾ?"

'ಗದಾಧರನಲ್ಲಿ ಸುಖದಿಂದ ಬಾಳಬೇಕೆಂಬ ಆಶೆಯು ಬಯಲಾಗಿ ಬಹಳ ದಿನಗಳಾದವು. ಉಷಾಸುಂದರಿ, ನನಗೆ ಇನ್ನು ಯಾವ ಸೌಖ್ಯಗಳೂ ಬೇಕಾಗಿಲ್ಲ. ನನ್ನ ಆಯುಷ್ಯದೊಳಗಿನ ಸೌಖ್ಯವೇರುವನ್ನು ನಾಶಗೊಳಿಸಿದ ಕಾಳಾಪಹಾಡನ ಸೇಡು ತೀರಿಸಿಕೊಳ್ಳಬೇಕೆಂದು ನಾನು ಕಟಕವಾರಣಾಸಿಗೆ ಹೋಗಿದ್ದೆನು. ನನ್ನ ದುರ್ದೈವವು ಅದನ್ನೂ ಮಾಡಗೊಡಲಿಲ್ಲ. ಇನ್ನು ಜಗನ್ನಾಥನೇ ಗತಿಯೆಂದು ಪುರಿಯನ್ನು ಹಿಡಿದು ಕುಳಿತುಕೊಂಡ ಹೊರತು ನನಗೆ ಬೇರೆ ಯಾವ ಕೆಲಸವೂ ಇರುವದಿಲ್ಲ.''

"ನಾನು ನಿನಗೆ ಇದೇ ಮಾತನ್ನು ಹೇಳಿದ್ದೆನು. ಭಾವೀ ಆಯುಷ್ಯವನ್ನು ಜಗನ್ನಾಥನ ಸೇವೆಯಲ್ಲಿ ಕಳೆಯಬೇಕೆಂದು ಹೇಳಿದಾಗ ನೀನು ಜಗನ್ನಾಥನ ಇಚ್ಛೆಯಿದ್ದಂತಾಗುವದೆಂದು ಹೇಳಿದೆ. ಈಗ ಮಾತ್ರ ನಿನಗೆ ಜಗನ್ನಾಥನೇ ಗತಿಯಾದನು!''

ಉಷಾಸುಂದರಿಯು ಹೀಗೆ ನುಡಿಯುವಷ್ಟರಲ್ಲಿ ಪ್ರಜಬಾಲೆಯ ಏಕನಿಷ್ಠ ಸೇವಕನಾದ ನಟವರನು ಅಲ್ಲಿಗೆ ಬಂದು:"ರಾಣೀಸರಕಾರ!''

"ನಟವರ, ನಾನು ರಾಣಿಯೂ ಅಲ್ಲ; ಸರಕಾರವೂ ಅಲ್ಲ.''

"ನಿಮ್ಮ ಮಾತುಗಳು ಯಥಾಸ್ಥಿತವಾಗಿರುವವು. ದೈವವು ನಿಮಗೆ ಪ್ರತಿಕೂಲಿಸಿತು. ದೈವಾನುಕೂಲವಿದ್ದರೆ ನೀವು ರಾಣಿಯವರಷ್ಟೇ ಏಕೆ, ಮಹಾರಾಣಿಯವರೂ ಆಗುತ್ತಿದ್ದಿರಿ.''

"ನಟವರ, ಹಿಂದಿನ ಮಾತನ್ನು ತೆಗೆಯಬೇಡ. ಅದನ್ನು ಮರೆಯುವದೇ ಹಿತವು. ರಾಜಧಾನಿಯಲ್ಲಿ ಮತ್ತೇನು ಹೆಚ್ಚು ಕಡಿಮೆಯಾಗಿರುವದು?''

"ಅಮ್ಮಾ, ಸರ್ವಸ್ವವೂ ಘಾತವಾಗಿ ಹೋಯಿತು! ರಾಜಧಾನಿಯ ಮೇಲೆ ಯವನರ ಅರ್ಧಚಂದ್ರಾಂಕಿತವಾದ ಪತಾಕೆಯು ನಿಲ್ಲಿಸಲ್ಪಟ್ಟಿತು!''

"ಏನು? ರಾಜಧಾನಿಯು ಕಾಳಾಪಹಾಡನ ಹಸ್ತಗತವಾಯಿತೆ?''

"ಹೌದು; ರಾಜಧಾನಿಯು ಯವನರ ಕೈಸೇರಿತು. ಅಲ್ಲಿಯ ರಾಜಮಂದಿರವೂ, ವಿಲಾಸಭುವನಗಳೂ, ದೇವಸ್ಥಾನಗಳೂ ಯವನರಿಂದ

ನೆಲಸಮ ಮಾಡಲ್ಪಟ್ಟವು. ಯುವರಾಜ ರಾಮಚಂದ್ರದೇವನು ಯುದ್ಧ ದಲ್ಲಿ ಮಡಿದನು.''

''ದೀನಕೃಷ್ಣ ಸೇನಾಪತಿಗಳು ಯುದ್ಧಭೂಮಿಯಿಂದ ಓಡಿಹೋದ ರೇನು?''

''ಅಮ್ಮಾ, ಅವರೂ ಧಾರಾತೀರ್ಥದಲ್ಲಿ ಮರಣ ಹೊಂದಿದರು.''

''ಸರ್ವಸ್ವವೂ ನಾಶವಾಯಿತು!'' ಎಂದು ವ್ರಜಬಾಲೆಯು ನಿಟ್ಟು ಸಿರುಬಿಟ್ಟು ನುಡಿದು—''ನಟವರ, ಈಗ ಮಹಾರಾಜರು ಎಲ್ಲಿರುವರು?''

''ಅಮ್ಮಾ, ನೀವು ಕೇಳಿಲ್ಲವೆಂಬಂತೆ ತೋರುವದು.''

''ಅದೇನು?'' ವ್ರಜಬಾಲೆಯು ಗಾಬರಿಯಿಂದ ಕೇಳಿದಳು.

''ಮಹಾರಾಜರು ಬಂಡುಗಾರರ ಮುತ್ತಿಗೆಯಲ್ಲಿ ಸಿಲುಕಿ ಮೃತಿ ಯನ್ನೈದಿದರು.''

''ಏನು? ಮಹಾರಾಜರು ಮೃತ್ಯುವಶರಾದರೆ? ಹಾಯ! ಹಾಯ! ಸರ್ವಾನರ್ಥವಾಯಿತು! ಮಹಾರಾಜರು ಬದುಕಿದ್ದರೆ ಓರಿಸಾದ ಸ್ವಾತಂ ತ್ರ್ಯಕ್ಕಾಗಿ ಹೋರಾಡುತ್ತಿದ್ದರು. ಅವರ ಮರಣದಿಂದ ಉತ್ಕಲದೇವಿಯ ಸೌಭಾಗ್ಯವು ನಾಶವಾಗಿ, ಅವಳ ಸ್ವಾತಂತ್ರ್ಯ ತಿಲಕವು ಅಳಿಸಲ್ಪಟ್ಟಿತು. ಇನ್ನು ಉತ್ಕಲದ ಸ್ವಾತಂತ್ರ್ಯಕ್ಕಾಗಿ ಯತ್ನಿಸುವವರು ಯಾರೂ ಉಳಿ ಯಲಿಲ್ಲ. ಹರಿಕೀರ್ತನನು ಮಹಾರಾಜರ ಕೊಲೆ ಮಾಡಿ ತನ್ನ ರಾಕ್ಷಸೀ ಹೃದಯವನ್ನು ಜಗತ್ತಿನ ನಿದರ್ಶನಕ್ಕೆ ತಂದು ಕೊಟ್ಟನು! ಮಹಾರಾಜರ ಮರಣದ ಹಾರಿಕೆಯ ಸುದ್ದಿಯನ್ನು ನಾನು ಕೇಳಿದ್ದೆನು; ಆದರೂ ಈ ವಾರ್ತೆಯ ವಿಷಯಕ್ಕೆ ನಾನು ಅಷ್ಟೊಂದು ನಂಬಿಕೆ ಕೊಟ್ಟಿದ್ದಿಲ್ಲ.''

''ಅಮ್ಮಾ, ಹರಿಕೀರ್ತನನು ಮಹಾರಾಜರ ಕೊಲೆಮಾಡಲಿಲ್ಲ; ರಾಜ್ಯ ಪಿಪಾಸುವಾದ ಪಿಶಾಚಿ ಹೃದಯದ ಜನಾರ್ದನನು ತನ್ನ ಕೈಮುಟ್ಟಿ ಅವ ರನ್ನು ವಧೆ ಮಾಡಿದನು. ಕಡು ನೀಚನಾದ ಯುವರಾಜನು ಮಹಾ ರಾಜರ ಸಂದೇಶದ ಮೇರೆಗೆ ಸೈನ್ಯವನ್ನು ಕಳುಹಿಸದ್ದರಿಂದ ಅವರು ಬಂಡುಗಾರರ ಮುತ್ತಿಗೆಯಲ್ಲಿ ಸಿಲುಕಿ, ಅನೇಕ ವಿಧದ ಯಾತನೆಯನ್ನು ಹೊಂದಿದರು. ಕಡೆಗೆ ಅತ್ಯಂತ ಶೋಚನೀಯ ಸ್ಥಿತಿಯಿಂದ ಮರಣ

ಹೊಂದಿದರು ''

ವ್ರಜಬಾಲೆಯ ನೇತ್ರಗಳು ದುಃಖಾಶ್ರು ಪರಿಪೂರ್ಣವಾದವು. ಮುಕುಂದದೇವನ ಅಂತವೂ, ಅದರೊಡನೆ ಓರಿಸಾದ ಸ್ವಾತಂತ್ರ್ಯದ ಅಂತವೂ ಆದದ್ದಕ್ಕಾಗಿ ಅವಳ ಹೃದಯಕ್ಕೆ ಬರೆ ಕೊಟ್ಟಂತಾಯಿತು. ಕಟ್ಟಾ ಸ್ವಭಾವದವನಾದ ಕಾಳಾಪಹಾಡನಿಂದ ಇದಕ್ಕಿಂತ ಹೆಚ್ಚಿನ ಅನರ್ಥ ಗಳೊದಗುವವೆಂಬದು ಅವಳಿಗೆ ಒಡೆದು ಕಾಣತೊಡಗಿತ್ತು. ಅವನು ತನಗಾದ ಅಪಮಾನದ ಸೇಡನ್ನು ಭಯಂಕರವಾಗಿ ತೀರಿಸಿಕೊಳ್ಳುವ ನೆಂಬದು ಜಗನ್ನಾಥಪುರಿಯಲ್ಲಿ ಅವನು ಮಾಡಿದ ಪ್ರತಿಜ್ಞೆಯಿಂದ ವ್ರಜಬಾಲೆಯ ಸ್ಮರಣೆಯಲ್ಲಿ ಒಂದಿತು. ಜಾತಿಭ್ರಷ್ಟನಾದ ಕಾಳಾಪಹಾ ಡನು ಹಿಂದುಧರ್ಮದ ಮೇಲೆಯೂ ಹಿಂದುಗಳ ದೇವಸ್ಥಾನದ ಮೇಲೆ ಯೂ ಗಂಡಾಂತರವನ್ನು ತರುವನೆಂದೂ, ಶ್ರೀ ಕ್ಷೇತ್ರ ಪುರಿಯ ಜಗ ನ್ನಾಥನು ಅವನ ಕೈಯೊಳಗಿಂದ ಪಾರಾಗುವದು ದುಸ್ತರವೆಂತಲೂ ತಿಳಿ ದೊಡನೆ ಅವಳ ಹೃದಯಕ್ಕೆ ವಜ್ರಾಘಾತವಾದಂತಾಯಿತು. ಓರಿಸಾ ದೇಶವು ಸ್ವಾತಂತ್ರ್ಯದೊಡನೆ ಧರ್ಮಕ್ಕೂ ಹೊರತಾಗುವ ಪ್ರಸಂಗ ಒರುವದೆಂದು ಅವಳ ಮನಸ್ಸು ಅತ್ಯಂತ ಕ್ಲೇಶಗೊಂಡಿತು. ಪ್ರಭು ಮೂರ್ತಿಯ ರಕ್ಷಣೆಯು ಹೇಗಾದೀತೆಂದು ಅವಳು ನಾನಾ ವಿಧವಾಗಿ ಯೋಚಿಸಿದಳು. ಈಗ ಅವಳು ರಾಣಿಯಿದ್ದಿಲ್ಲ; ದೈನ್ಯಾವಸ್ಥೆಯ ಪರ ಮಾವಧಿಯನ್ನು ಹೊಂದಿದ ವ್ರಜಬಾಲೆಯಾಗಿದ್ದಳು. ಜನಸಹಾಯವಿಲ್ಲ; ಧನಸಹಾಯವಿಲ್ಲ; ಅಧಿಕಾರವಿಲ್ಲ. ಹೀಗಿದ್ದ ಮೇಲೆ ಅವಳ ಮನಸ್ಸಿನ ಬಯಕೆಯು ಹೇಗೆ ಈಡೇರಬೇಕು? ಆಗ ಅವಳಿಗೆ ಹಠಾತ್ತಾಗಿ ಒಂದು ವಿಚಾರವು ಹುಟ್ಟಿತು. ಕೂಡಲೆ ಅವಳು ನಟವರನನ್ನು ಕುರಿತು—

''ನಟವರ, ಗದಾಧರ-ಕರೀಮುಶಹರು ಈಗ ಎಲ್ಲಿರುವರು?''

''ಭುವನೇಶ್ವರದಲ್ಲಿ''

''ಅಲ್ಲಿ ಏನು ಮಾಡುತ್ತಿರುವರು?''

''ಕಾಳಾಪಹಾಡನೊಡನೆ ಯುದ್ಧ ಮಾಡಬೇಕೆಂದು ಸೈನ್ಯವನ್ನು ಕೂಡಿಸುತ್ತಲಿರುವರು. ಓರಿಸಾದ ಸ್ವಾತಂತ್ರ್ಯ ಸಿಂಹಾಸನವು ಯವ

ನರ ಸ್ವಾಧೀನವಾದದ್ದರಿಂದ ಗದಾಧರರ ಹೃದಯವು ತಲ್ಲಣಗೊಂಡಿರುವದು. ಅನ್ಯಾಯದಿಂದ ಅನ್ಯಾಕ್ರಾಂತವಾಡತೊಡಗಿದ ಕಾಳಾಪಹಾಡನ ಕೊಬ್ಬನ್ನಡಗಿಸಬೇಕೆಂದು ಕರೀಮಶಹನಾದರೂ ಮಹತ್ವಾಕಾಂಕ್ಷೆ ತಳೆದಿರುವನು. ಈಗಾಗಲೆ ಭುವನೇಶ್ವರಕ್ಕೆ ಹೊಸಕೋಟೆಯನ್ನು ಕಟ್ಟಿಸುವ ಕೆಲಸವು ಭರದಿಂದ ನಡೆದಿರುವದು. ಸೈನ್ಯವಾದರೂ ಕೂಡ ತೊಡಗಿದೆ. ಈ ಕಾರ್ಯದಲ್ಲಿ ಗದಾಧರರಿಗೆ ಯಶವು ದೊರೆತರೆ, ಉತ್ಕಲನಿವಾಸಿಗಳು ಗತವೈಭವವನ್ನು ಮರಳಿ ಪಡೆದಂತಾಗುವದು. ಅಮ್ಮಾ, ಎಲ್ಲವೂ ಜಗನ್ನಾಥನ ಇಚ್ಛೆಯನ್ನವಲಂಬಿಸಿರುವವಲ್ಲವೆ?''

"ಗದಾಧರರು ಅದ್ವಿತೀಯ ರಾಷ್ಟ್ರಧರ್ಮನಿರತರಿರುವರು. ವಿಕ್ರಮಶಾಲಿಗಳಾದ ಅವರಿಂದ ಒಂದು ವೇಳೆ ದೇಶಕಾರ್ಯವು ಸಾಧಿಸಬಹುದಾಗಿದೆ. ಕರಿಮಶಹರ ಸಮತಾಬುದ್ಧಿಯು ಅವರ್ಣನಿಯವಾಗಿರುವದು. ಅವರು ಸ್ವಜಾತಿಬಾಂಧವರೆಂಬ ಅಭಿಮಾನಕ್ಕೆ ಬೀಳದೆ, ಹಿಂದುಗಳ ರಾಜ್ಯವು ಹಿಂದುಗಳದಾಗಿಯೇ ಉಳಿಯಬೇಕೆಂದು ಯತ್ನಿಸುತ್ತಲಿರುವರು. ಹಿಂದುಗಳ-ಅಧಿಕಾರ ಸ್ವಾತಂತ್ರ್ಯಗಳ ರಕ್ಷಣೆಗಾಗಿ ಅವರು ಸ್ವಾರ್ಥಕ್ಕೆ ತಿಲಾಂಜಲಿಯಿತ್ತು ಸ್ವಬಾಂಧವರ ಮೇಲೆ ಶಸ್ತ್ರವೆತ್ತಿರುವರು. ಕರೀಮಶಹರಂತಹ ಉದಾತ್ತ ವಿಚಾರಿಗಳು ಸದ್ಯದ ಕಾಲದಲ್ಲಿ ದೊರೆಯುವದು ದುರ್ಲಭವಾಗಿರುವದೆಂದು ಹೇಳಲಿಕ್ಕೆ ಪ್ರತ್ಯವಾಯವಿಲ್ಲ. ಜನಾರ್ದನ-ಭೃಗುರಾಮರಂತಹ ದೇಶಹಿತ ವಿಘಾತಕರು ಅವರ ವರ್ತನವನ್ನು ನೋಡಿಯಾದರೂ ಬುದ್ಧಿಗಲಿಯಬಾರದೆ?''

"ಅಮ್ಮಾ, ದುಷ್ಟ ಸ್ವಾರ್ಥೀ ಜನರು ಸದಾಚಾರಿಗಳನ್ನು ಅನುಕರಿಸುತ್ತಿರುವದಿಲ್ಲ. ಸ್ವಾರ್ಥವನ್ನು ಬಿಟ್ಟು ಅನ್ಯ ಪದಾರ್ಥಗಳ ಕಡೆಗೆ ಅವರು ಹೊರಳಿ ಸಹ ನೋಡುತ್ತಿರುವದಿಲ್ಲ. ಭೃಗುರಾಮ ಜನಾರ್ದನರು ಸ್ವಾರ್ಥೈಕ ದೃಷ್ಟಿಯವರಾಗಿರದಿದ್ದರೆ, ಉತ್ಕಲದೇಶಕ್ಕೆ ಈಗಿನಂತಹ ಗಂಡಾಂತರಕ್ಕೊಳಗಾಗುವ ಪ್ರಸಂಗವೇ ಬರುತ್ತಿದ್ದಿಲ್ಲ.''

"ನಟವರಾ, ಈಗ ಭೃಗುರಾಮ-ಜನಾರ್ದನರು ಎಲ್ಲಿರುವರು?''

"ಅವರು ಕಾಳಾಪಹಾಡನನ್ನು ಕೂಡಿಕೊಂಡಿರುವರು. ಉತ್ಕ

ಲದ ಸಿಂಹಾಸನವು ದೊರೆಯುವದೆಂಬ ದುರಾಶೆಯಿಂದ ಜನಾರ್ದನನು ಕಾಳಾಪಹಾಡನ ಪಾದಸೇವೆ ಮಾಡುತ್ತಲಿರುವನು. ಭೃಗುರಾಮನಾದರೂ ದೊಡ್ಡ ಜಹಾಗೀರನ್ನು ಪಡೆಯುವ ಹವಣಿಕೆಯಲ್ಲಿರುವನು. ಕಾಳಾಪಹಾಡನು ಅವರ ಮಾತುಗಳಿಗೆ ಮರುಳಾಗುವಂತಹನಿರುವದಿಲ್ಲ. ಕಾರ್ಯಸಾಧನೆಯಾಗುವವರೆಗೆ ಅವರಿಗೆ ಆಶೆ ಹಚ್ಚಿ ಕಡೆಗೆ ಇಬ್ಬರಿಗೂ ಅರ್ಧಚಂದ್ರ ದರ್ಶನಮಾಡಿಸುವನು. ಅಮ್ಮಾ, ಭೃಗುರಾಮನು ರಾಜ್ಯಕ್ಕಿಂತಲೂ ಮತ್ತೊಂದು ದಿವ್ಯವಾದ ವಸ್ತುವಿನಲ್ಲಿ ಪ್ರೇಮವಿಟ್ಟಂತೆ ಕಾಣುತ್ತದೆ. ಅವನು ನಿಜವಾಗಿಯೂ ಆ ವಸ್ತುವಿನ ಪ್ರಾಪ್ತಿಗಾಗಿ ಭ್ರಾಂತಿಷ್ಟನಾಗಿರುವನು.''

''ಅವನು ಇಚ್ಛಿಸುತ್ತಿರುವ ಒಡವೆ ಯಾವದು?''

''ಅವನು ಲಾವಣ್ಯಭ್ರಾಂತನಾಗಿರುವನು.''

''ಯಾರ ಲಾವಣ್ಯಕ್ಕೆ ಅವನು ಮನಸೋತಿರುವನು?''

''ಅಮ್ಮಾ, ಭೃಗುರಾಮನು ನಿಮ್ಮನ್ನು ವಶಪಡಿಸಿಕೊಳ್ಳುವದಕ್ಕಾಗಿ ಸಾಹಸ ನಡೆಯಿಸಿರುವನು.''

''ಹೀಗೇನು? ಬಹಳೇ ಉತ್ತಮವಾಯಿತು. ಪಾಪಭಾರವನ್ನು ಬೆಳೆಯಿಸುತ್ತ ಆದಷ್ಟು ಬೇಗನೆ ನರಕಕುಂಡದಲ್ಲಿಳಿಯಬೇಕೆಂದು ಭೃಗುರಾಮನ ಅಭಿಲಾಷೆಯಿದ್ದಂತೆ ತೋರುವದು. ಈ ವ್ರಜಸುಂದರಿಯ ಯೋಗ್ಯತೆಯೇನಿರುವದೆಂಬದನ್ನು ಆ ಮದಾಂಧನು ಇನ್ನೂ ಅರಿತಿಲ್ಲವಾಗಿ ತೋರುತ್ತದೆ. ಆ ನೀಚನ ಮನೋದಯವನ್ನು ನಾನು ಅರಿತಿದ್ದೆನು; ಆದರೆ ಈಗಿನಷ್ಟು ಸ್ಪಷ್ಟವಾಗಿ ಗೊತ್ತಾಗಿದ್ದಿಲ್ಲ. ಒಳ್ಳೇದು. ಅವನ ಕೈಯೊಳಗಿಂದ ಶೀಲರಕ್ಷಣೆ ಮಾಡಿಕೊಳ್ಳಲಿಕ್ಕೆ ನಾನು ಸಮರ್ಥಳೇ ಇರುವೆನು. ನಟವರ, ನೀನು ಇನ್ನೊಂದು ಕೆಲಸಮಾಡತಕ್ಕದ್ದು.''

''ಅದೇನು, ಅಮ್ಮನವರೆ?''

''ನಾನು ಗದಾಧರರಿಗೆ ಒಂದು ಪತ್ರವನ್ನು ಕಳಿಸಬೇಕೆಂದು ಬಹಳ ದಿನಗಳಿಂದ ಯೋಚಿಸಿಕೊಂಡಿದ್ದೆನು. ವಿಶ್ವಾಸದ ಸೇವಕರ ಅಭಾವಕ್ಕಾಗಿ ಇಷ್ಟು ದಿನ ಸುಮ್ಮನೆ ಕುಳಿತುಬಿಟ್ಟೆನು. ನೀನು ನನ್ನ ಪತ್ರವನ್ನು

ಆದಷ್ಟು ಬೇಗನೆ ಗದಾಧರರಿಗೆ ತಲುಪಿಸತಕ್ಕದ್ದು.''

''ಅವಶ್ಯವಾಗಿ ತಲುಪಿಸುವೆನು.''

ಪ್ರಜಬಾಲೆಯು ಗದಾಧರನಿಗೆ ಒಂದು ಪತ್ರಬರೆದು ನಟವರನ ಸ್ವಾಧೀನಪಡಿಸಿದಳು. ಪತ್ರದ ಸಂಗತಿಯು ಕೆಳಗೆ ಬರೆದ ಪ್ರಕಾರವಿತ್ತು:

''ಸ್ವದೇಶನಿಷ್ಠ ಗದಾಧರರೆ,

ತಮ್ಮ ಕರ್ತವ್ಯವು ಅಭಿನಂದನೀಯವಿರುವದು. ನೀವು ವಂಗಪ್ರಜೆಗಳಾದರೂ ಓರಿಸಾದ ಸ್ವಾತಂತ್ರ್ಯಕ್ಕಾಗಿ ಶಕ್ತಿಮೀರಿ ಯತ್ನಿಸ ತೊಡಗಿರುವದನ್ನು ನೋಡಿ ಮನಸ್ಸಿಗೆ ಅಪಾರವಾದ ಆನಂದವಾಗಿದೆ. ಶತ್ರುವು ಬಲಾಢ್ಯವಿರುವದರಿಂದ ಜಾಗೃತೆಯಿಂದ ಕೆಲಸಮಾಡಬೇಕೆಂದು ನಾನು ನಿಮಗೆ ಆಗ್ರಹದ ವಿನಂತಿ ಮಾಡಿಕೊಂಡಿರುವೆನು. ಕರೀಮು ಶಹರಾದರೂ ಪಟುಭಟರಿರುವರು. ಓರಿಸಾದ ಜನ್ಮಸಿದ್ಧವಾದ ಸ್ವಾತಂತ್ರ್ಯದ ರಕ್ಷಣೆಗಾಗಿ ಅವರಾದರೂ ತಮ್ಮ ದೇಹವನ್ನು ಸವೆಯಿಸಿ ಕೀರ್ತಿ ಭಾಗಿಗಳಾಗುವರೆಂಬದನ್ನು ನಾನು ಮುಂಚಿತವಾಗಿಯೇ ಅರಿತಿರುವೆನು. ದೇಶಕಾರ್ಯಕ್ಕಾಗಿ ಹೆಣಗುವ ನಿಮಗೆ ವಿಜಯವು ದೊರೆಯಬೇಕೆಂದು ನಾನು ಸದಾ ಜಗನ್ನಾಥನ ಸ್ಮರಣೆಮಾಡುತ್ತಿರುವೆನು. ಅಬಲೆಯಾದ ನಾನು ಈಗ ಇದಕ್ಕಿಂತ ಹೆಚ್ಚಿಗೆ ಇನ್ನೇನು ಮಾಡಲಿ?

ತಮ್ಮ ಪೂರ್ವಾಶ್ರಮ ಪ್ರಣಯಿನಿ—

ವ್ರಜಬಾಲೆ''

ಉಷಾಸುಂದರಿಯು ನಟವರನ ಕೈಯಲ್ಲಿದ್ದ ಪತ್ರವನ್ನು ತೆಗೆದು ಕೊಂಡು ಸಂಪೂರ್ಣವಾಗಿ ಓದಿದಳು. ಪತ್ರದ ಕೆಳಗೆ 'ಪೂರ್ವಾಶ್ರಮ ಪ್ರಣಯಿನಿ'ಯೆಂದು ಬರೆದದ್ದನ್ನು ನೋಡಿ ಅವಳು ಗಹಗಹಿಸಿ ನಕ್ಕಳು. ಆಗ ವ್ರಜಬಾಲೆಯು ''ಉಷಾಸುಂದರಿ, ನಗುವದೇತಕ್ಕೆ?''

''ನಗದೇನು ಮಾಡಲಿ?-ಅಳಲಿಯಾ? ನೀನು ಗದಾಧರರ ಪೂರ್ವಾಶ್ರಮಪ್ರಣಯಿನಿಯಲ್ಲವೆ? ನಿನ್ನ ಪ್ರಣಯದೇವತೆಗಳು ಈಗ ಸಂನ್ಯಾಸವನ್ನು ಸ್ವೀಕರಿಸಿದ್ದರೆ ಮಾತ್ರ ಹಾಗೆ ಬರೆಯಬಹುದಾಗಿತ್ತು.''

''ಅವರು ನಿಜವಾಗಿ ಸಂನ್ಯಾಸವನ್ನು ಸ್ವೀಕರಿಸಿದಂತೆಯೆ ಆಗಿರು

ವದು. ನನ್ನನ್ನು ಎಂದು ಉಪೇಕ್ಷಿಸಿದರೋ ಅಂದೇ ಅವರು ಸಂನ್ಯಾಸ ವನ್ನು ತೆಗೆದುಕೊಂಡಿರುವರೆಂದು ಹೇಳಬಹುದು. ಅಂತೆಯೆ ನಾನು ಪೂರ್ವಾಶ್ರಮಪ್ರಣಯಿನಿಯೆಂದು ಪತ್ರದಲ್ಲಿ ಬರೆದೆನು.

ಉಷಾಸುಂದರಿಯು ನಿರುತ್ತರಳಾದಳು. ನಟವರನು ಅಲ್ಲಿಂದ ತೆರಳಿದನು.

---

## ದೇಶದ್ರೋಹಿಗಳ ಅಧಃಪಾತ!

ಕಟಕವಾರಣಾಶಿಯ ಸಂಗ್ರಾಮದಲ್ಲಿ ಹಿಂದುಗಳಿಗೆ ಕಾಳಾಪಹಾಡನ ಪರಾಕ್ರಮದ ಅನುಭವವಾಯಿತು. ಎಲ್ಲ ಜನರು ಇದು ವರೆಗೆ ಕಾತಲೂ ಖಾನನನ್ನು ವರ್ಣಿಸುತ್ತಲಿದ್ದರು. ಕಟಕದ ಸಂಗ್ರಾಮದಿಂದ ಕಾಳಾ ಪಹಾಡನು ಕಾತಲೂಖಾನನಿಗಿಂತ ಹೆಚ್ಚಿನ ತೇಜಸ್ವಿಯೂ ಪರಾಕ್ರಮಿಯೂ ಎಂಬದು ಎಲ್ಲ ಜನರಿಗೆ ಗೊತ್ತಾಗಿತ್ತು. ಯುವರಾಜನೂ ಮಹಾರಾಜಾ ಮುಕುಂದದೇವನೂ ಮರಣಹೊಂದಿದ್ದರು. ಸಿಂಹಾಸನದ ಪ್ರಾಪ್ತಿ ಗಾಗಿ ಸಾಹಸ ಮಾಡುವಂತಹ ಜನರು ಯಾರೂ ಉಳಿಯಲಿಲ್ಲ. ಆದ್ದರಿಂದ ಕಾಳಾಪಹಾಡನು ಕಟಕವಾರಣಾಶಿಯಲ್ಲಿ ಸೇನಾಪತಿಯಾದ ಕಾತಲೂ ಖಾನನನ್ನು ಅಧಿಕಾರಿಯನ್ನಾಗಿ ನಿಯಮಿಸಿದನು. ಅನಂತರದಲ್ಲಿ ಅವನು ಚೌದ್ವಾರ ಬಾರೋವಾಟಿ ಮೊದಲಾದ ಊರುಗಳನ್ನು ಸುಲಿದುಕೊಂಡು ದಕ್ಷಿಣಕ್ಕೆ ಸಾಗಿದನು. ದೇಶದ್ರೋಹಿಗಳಾದ ಜನಾರ್ದನ ಭೃಗು ರಾಮರು ಕಾಳಾಪಹಾಡನ ಚರಣರಜವನ್ನು ಶಿರಸಾವಹಿಸಲಿಕ್ಕೆ ಅವನ ಬೆನ್ನ ಹಿಂದೆಯೆ ಇದ್ದರು. ತನಗೆ ಸಿಂಹಾಸನವು ದೊರೆಯುವದೆಂದು ಜನಾರ್ದ ನನು ಮನೋರಾಜ್ಯವನ್ನು ಕಲ್ಪಿಸತೊಡಗಿದ್ದನು. ತಾನಾದರೂ ಮುಕುಂದದೇವನ ವಿರುದ್ಧವಾಗಿ ಸಹಾಯಮಾಡಿದ್ದನ್ನು ಸ್ಮರಿಸಿ, ಕಾಳಾ ಪಹಾಡನು ಒಂದು ದೊಡ್ಡ ಜಹಾಗೀರನ್ನು ಕೊಡುವನೆಂದು ಭೃಗುರಾ ಮನು ಮನಸ್ಸಿನಲ್ಲಿ ಮಂಡಿಗೆ ತಿನ್ನಲಾರಂಭಿಸಿದ್ದನು. ಕಾಳಾಪಹಾಡನು ಹುಚ್ಚು ಕಂತೆಯಾಗಿರಲಿಲ್ಲ. ಅದ್ವಿತೀಯ ರಾಜಕಾರಣಪಟುವಾಗಿದ್ದನು. ಜನಾರ್ದನ-ಭೃಗುರಾಮರಂತಹ ನೀಚರ ಮನೋಗತವನ್ನು ಅರಿಯದೆ

ನಡೆಯುವಂತಹ ಅದೂರದರ್ಶಿಯು ಅವನಾಗದ್ದರಿಂದ ಕಾರ್ಯ ಸಾಧನೆ ಯಾಗುವ ವರೆಗೆ ಅವರನ್ನು ಸೌಮ್ಯಶಬ್ದಗಳಿಂದ ಸಮಾಧಾನಗೊಳಿಸಿದ್ದನು. ಚೌದ್ವಾರ ಬಾರೋವಾಟಿ ಮೊದಲಾದ ಊರುಗಳನ್ನು ಸುಲಿದು ಭುವನೇಶ್ವರಕ್ಕೆ ದಂಡೆತ್ತಿ ಹೋಗಬೇಕೆಂದು ಕಾಳಾಪಹಾಡನು ಬಾರೋವಾಟಿಯ ಬಳಿಯಲ್ಲಿ ತಳವೂರಿದ್ದನು. ರಾಜಧಾನಿಯ ಹಾಗು ಗೆದ್ದ ಸೀಮೆಯ ವ್ಯವಸ್ಥೆಗಾಗಿ ಅವನು ಕಾತಲೂಖಾನನನ್ನು ನಿಯಮಿಸಿದ್ದರಿಂದ ಜನಾರ್ದನನಿಗೆ ನೊಣತಿಂದಂತಾಗಿತ್ತು. ಕಾಳಾಪಹಾಡನು ತನ್ನ ಕರ್ತವ್ಯ ಪ್ರಭಾವವನ್ನು ಒಳಿತಾಗಿ ಬಣ್ಣಿಸಿ, ತನ್ನಿಂದಾದ ಸಹಾಯವನ್ನು ಸ್ಮರಿಸಿ, ತನಗೆ ಉತ್ಕಲದ ರಾಜಸಿಂಹಾಸನವನ್ನು ಕಾಣಿಕೆಯಾಗೀಯುವನೆಂದೂ, ತನ್ನ ತಲೆಯ ಮೇಲೆ ರಾಜಮುಕುಟವನ್ನಿರಿಸಿ ಸಿಂಹಾಸನಾರೋಹಣ ಸಮಾರಂಭವನ್ನು ಒಳ್ಳೆಯ ವಿಜೃಂಭಣೆಯಿಂದ ನೆರವೇರಿಸುವನೆಂದೂ ಜನಾರ್ದನನು ತಿಳಿದುಕೊಂಡಿದ್ದನು. ರಾಜ್ಯಾಧಿಕಾರವು ಕಾತಲೂ ಖಾನನ ಕೈಯಲ್ಲಿ ಹೋದ ಕೂಡಲೆ ಜನಾರ್ದನನ ಹೊಟ್ಟೆಯಲ್ಲಿ ಕಸ ವಿಸಿಯಾಗಕೊಡಗಿತು. ದಂಡಯಾತ್ರೆಯಲ್ಲಿ ತನ್ನಿಂದ ಉಪಯೋಗ ವಾಗಬೇಕೆಂದು ತಿಳಿದು, ಕಾಳಾಪಹಾಡನು ಕಾತಲೂಖಾನನ ಕೈಯಲ್ಲಿ ರಾಜ್ಯ ಸೂತ್ರಗಳನ್ನು ಕೊಟ್ಟಿರುವನೆಂದು ಅವನು ಮನಸ್ಸಿನ ಸಮಾಧಾನ ಮಾಡಿಕೊಂಡನು.

ವರ್ಧಮಾನ ವಿಜಯಿಯಾದ ಕಾಳಾಪಹಾಡನಿಂದ ರಾಜ್ಯಾಧಿಕಾರ ದಾನದ ಆಶ್ವಾಸನೆ ತೆಗೆದುಕೊಳ್ಳಬೇಕೆಂದು ಜನಾರ್ದನನು ಯೋಚಿಸಿಕೊಂಡಿದ್ದನು. ಚೌದ್ವಾರ ಬಾರೋವಾಟಿ ಮೊದಲಾದ ಸ್ಥಳಗಳಲ್ಲಿಯ ಹೇರಳವಾದ ಸುಲಿಗೆಯಿಂದ ಕಾಳಾಪಹಾಡನು ಆನಂದಮನಸ್ಕನಾಗಿದ್ದನು. ಈ ಸಮಯದಲ್ಲಿಯೆ ಅವನ ಅನುಗ್ರಹ ಪಡೆಯಬೇಕೆಂದು ಜನಾರ್ದನನು ಕಾಳಾಪಹಾಡನ ಶಿಬಿರಕ್ಕೆ ಬಂದನು. ಭೃಗುರಾಮನಾದರೂ ತನ್ನ ಅಭಿಪ್ರಾಯವನ್ನು ಪೂರ್ತಿಗೊಳಿಸಿಕೊಳ್ಳುವದಕ್ಕಾಗಿ ಜನಾರ್ದನನ ಬಳಿಯಲ್ಲಿ ಬಂದಿದ್ದನು. ಆಗ ಕಾಳಾಪಹಾಡನು ತನ್ನ ಶಿಬಿರದಲ್ಲಿ ಒಬ್ಬನೇ ಕುಳಿತಿದ್ದನು. ಸ್ವಾರ್ಥಸಾಧಕರಾದ ಭೃಗುರಾಮ-ಜನಾ

ದರ್ಶನರು ಅವನಿಗೆ ವಿನಯದಿಂದ ನಮಸ್ಕರಿಸಿದರು. ಕಾಳಾಪಹಾಡನು ಅವರನ್ನು ಸನ್ಮಾನಿಸಿ ತಕ್ಕಸ್ಥಳದಲ್ಲಿ ಕೂಡ್ರಹೇಳಿದನು. ಅನಂತರದಲ್ಲಿ ಜನಾರ್ದನನು ವಿಷಯಪ್ರವೇಶಕ್ಕಾರಂಭಿಸಿದನು:

"ಸೇನಾಪತಿಗಳೆ, ನಿಜವಾಗಿ ಹೇಳಬೇಕಾದರೆ, ನಿಮ್ಮಂಥಹ ವಿಕ್ರಮಶಾಲಿಗಳೂ ರಾಜಕಾರಣ ದುರಂಧರರೂ ಹಿಂದೆ ಯಾರೂ ಆಗಿ ಹೋಗಿಲ್ಲ; ಮುಂದೆಯೂ ಆಗುವದಿಲ್ಲ. ಯವನರಾಜರೆಷ್ಟೋ ಜನರು ಓರಿಸಾದ ಸ್ವಾತಂತ್ರ್ಯವನ್ನು ನಾಶಮಾಡಲಿಕ್ಕೆ ಅಪ್ರತಿಹತವಾಗಿ ಪ್ರಯತ್ನಿಸಿದ್ದರು; ಅವರಿಂದ ಉತ್ಕಲವನ್ನು ಪಾದಾಕ್ರಾಂತಗೊಳಿಸುವ ಕೆಲಸವು ಆಗಿದ್ದಿಲ್ಲ. ನಿಮ್ಮ ಪ್ರಚಂಡವಾದ ಶಕ್ತಿಗೆ ಉತ್ಕಲದ ಪ್ರಚಂಡವಾದ ಬಲವು ಉಧ್ವಸ್ತವಾಯಿತು. ನಿಮಗೆ ವಿಜಯಸಂಪಾದನೆಯಾಗಬೇಕೆಂದೇ ಜಗನ್ನಾಥನ ಇಚ್ಛೆಯಿತ್ತೆಂದು ತೋರುತ್ತದೆ. ಅಂತೆಯೆ ನಿಮಗೆ ಸಹಾಯ ಮಾಡಬೇಕೆಂಬ ಬುದ್ಧಿಯು ನನ್ನಲ್ಲಿ ಹುಟ್ಟಿತು. ಭೃಗುರಾಮ ಮಂತ್ರಿಗಳಾದರೂ ತಮ್ಮ ಯೋಗ್ಯತೆ ಮೀರಿ ನಿಮಗೆ ನೆರವಾದರು. ಇಡೀ ಉತ್ಕಲದೇಶವು ಸಲಿಮನ ನವಾಬರ ಕೈಯಲ್ಲಿ ಬರುವದೆಂಬದು ನಿಸ್ಸಂದೇಹವು. ಮುಕುಂದದೇವನು ವಿಲಾಸಿಯಿದ್ದುದರಿಂದ ಅವನ ಆಳಿಕೆಯು ಪ್ರಜಾಜನರಿಗೆ ಬೇಸರವಾಗಿತ್ತು. ಈಗ ಪ್ರತಿಯೊಬ್ಬ ಉತ್ಕಲವಾಸಿಯು ಆನಂದಭರಿತನಾಗಿರುವನು. ಎಲ್ಲ ಜನರು ನವಾಬರಲ್ಲಿ ನಿಷ್ಠೆಯನ್ನು ತಳೆದಿರುವರು. ನಾನಾದರೂ ವಂಗ ಸಿಂಹಾಸನದ ವಿಷಯವಾಗಿ ಭಕ್ತಿಯುಳ್ಳವನಾಗಿರುವೆನು ನೀವು ಹೇಳಿದಷ್ಟು ಕಾಣಿಕೆಯನ್ನು ಕೊಡುತ್ತ ರಾಜ್ಯಾಧಿಕಾರವನ್ನು ಸಾಗಿಸಲಿಕ್ಕೆ ನನ್ನ ಸಿದ್ಧತೆಯಿರುವದು. ಪ್ರಸ್ತುತದ ಯುದ್ಧದಿಂದ ಉತ್ಕಲದ ಬೊಕ್ಕಸವು ಬರಿದಾಗಿರುವದು. ಕಾಳಗದ ಕೋಲಾಹಲದಲ್ಲಿ ಪ್ರಜಾಜನರು ತ್ರಸ್ತರಾಗಿರುವರು. ಬೆಳೆಗಳೆಲ್ಲ ನಾಶವಾದದ್ದರಿಂದಲೂ ಮುಕುಂದದೇವನು ಅವರಿಂದ ಹೇರಳವಾದ ತೆರಿಗೆಯನ್ನೆತ್ತಿದ್ದರಿಂದಲೂ ಅವರು ಬಹಳೇ ತೊಂದರೆಗೊಳಗಾಗಿರುವರು. ಆದ್ದರಿಂದ ಯೋಗ್ಯತಾನುಸಾರವಾಗಿ ಕಾಣಿಕೆಯ ಹಣವನ್ನು ತೆಗೆದುಕೊಳ್ಳಬೇಕೆಂದು ನನ್ನ ಪ್ರಾರ್ಥನೆಯಿದೆ.

ವಂಗನವಾಬರ ಮೇಲೆ ನಿಷ್ಠೆಯುಳ್ಳವನಾಗಿ ಮುಕುಂದದೇವನ ನಾಶ ಮಾಡುವ ಕಾರ್ಯದಲ್ಲಿ ನಾನು ನಿಮಗೆ ಸಹಾಯ ಮಾಡಿರುವೆನು; ಮುಂದಾದರೂ ಯೋಗ್ಯತೆಗೆ ಮೀರಿ ಸಹಾಯಮಾಡುತ್ತ ಹೋಗು ವೆನು. ನಾನು ಕೇವಲ ಸ್ವಾರ್ಥಕ್ಕಾಗಿ ನಿಮಗಿಷ್ಟು ವಿನಂತಿ ಮಾಡಿ ಕೊಳ್ಳುತ್ತಿರುವದಿಲ್ಲ. ನನ್ನ ನೆರವಿನಿಂದ ಯವನರ ವರ್ಚಸ್ವವು ಓರಿಸಾ ದೇಶದ ಮೇಲೆ ಸ್ಥಿರವಾಗುಳಿಯುವ ಸಂಭವವಿರುವದು. ಸೇನಾಪತಿ ಗಳೆ, ಈ ಭೃಗುರಾಮ ಮಂತ್ರಿಗಳಾದರೂ ನಿಮಗೆ ಸಹಾಯ ಮಾಡಿರು ವರು. ಅವರಿಗಾದರೂ ಫಲವು ದೊರೆಯುವದು ಆವಶ್ಯಕವಿದೆ. ಯಾವ ದೊಂದು ಜಹಾಗಿರಿಯನ್ನು ಕೊಟ್ಟರೆ ಅವರು ಸಂತುಷ್ಟರಾಗುವರು. ಈ ಭೃಗುರಾಮರು ತಮ್ಮ ತಾರುಣ್ಯದ ವಯೋಮಾನಕ್ಕನುಗುಣವಾಗಿ ನನಗಿಂತಲೂ ಹೆಚ್ಚು ಸಾಹಸಮಾಡುವಂತಹರಿರುವರು. ಇವರು ನನ್ನಂ ತೆಯೆ ಏಕನಿಷ್ಠರು; ರಾಜಕಾರಣ ಕುಶಲರು. ಸೇನಾಪತಿಗಳವರಿಗೆ ಎಲ್ಲ ಸಂಗತಿಗಳು ಗೊತ್ತಿದ್ದರೂ, ಕರ್ತವ್ಯವೆಂದು ಅವುಗಳನ್ನು ಆಡಿ ತೋರಿಸಿರುವೆನು.''

ಕಾಳಾಪಹಾಡನು ಜನಾರ್ದನನ ಮಾತುಗಳನ್ನು ಕೇಳುತ್ತ ಸ್ವಸ್ಥ ಚಿತ್ತದಿಂದ ಕುಳಿತಿದ್ದನು. ಜನಾರ್ದನನ ಇಚ್ಛೆಯೇನಿರುವದೆಂಬದು ಅವನಿಗೆ ಅರಿಯದಿದ್ದಿಲ್ಲ. ನೀಚಸ್ವಾರ್ಥಿಯಾದ ಮಂತ್ರಿಗೆ ಏನು ಉತ್ತರ ಕೊಡಬೇಕೆಂಬದನ್ನು ಅವನು ಮುಂಚಿತವಾಗಿಯೆ ನಿಶ್ಚಯಿಸಿಟ್ಟಿದ್ದನು. ಕಾಳಾಪಹಾಡನು ಪ್ರತಿಭಾಸಂಪನ್ನನಾಗಿದ್ದನು; ನಿಸ್ಪೃಹವೃತ್ತಿಯವ ನಿದ್ದನು. ಜಡಸ್ವಾರ್ಥಿಗಳಾಗಿ ತಮ್ಮ ದೇಶದ ಸುಖಸ್ವಾತಂತ್ರ್ಯಗಳನ್ನು ಹಾಳುಮಾಡಿದ ಜನಾರ್ದನ-ಭೃಗುರಾಮರ ವಿಷಯವಾಗಿ ಅವನಲ್ಲಿ ಅತಿ ಯಾಗಿ ತಿರಸ್ಕಾರವು ನೆಲೆಗೊಂಡಿತ್ತು. ತನ್ನ ಅಭಿಪ್ರಾಯವನ್ನು ಸ್ಪಷ್ಟ ವಾಗಿ ತಿಳಿಸಿಬಿಡಬೇಕೆಂದು ಅವನು ಯತ್ನಿಸಿ—''ಮಂತ್ರಿಶ್ರೇಷ್ಠರೆ, ವಂಗ ದೇಶವನ್ನು ಆಳುವವರಿಗೆ ಓರಿಸಾದೇಶದಲ್ಲಿ ತಮ್ಮ ವರ್ಚಸ್ವವನ್ನು ಪ್ರಸ್ಥಾಪಿಸುವದು ಅಸಾಧ್ಯವಾಗುವದೇನು?''

ಕಾಳಾಪಹಾಡನ ಈ ಮಾತಿನಿಂದ ಜನಾರ್ದನನ ಎದೆಯು 'ಧಸ್'

ಎಂದಿತು. ಕೂಡಲೆ ಅವನ ಹೃದಯವು ಅಧೀರವಾಯಿತು; ಆದರೂ ಅವನು ಕೈಗಡದ ಅವಸಾನವನ್ನು ತಂದುಕೊಂಡು—"ಸೇನಾಪತಿಗಳೆ, ಪುರಾತನದಿಂದ ಹಿಂದುಗಳ ಅರಸೊತ್ತಿಗೆಯಲ್ಲಿದ್ದ ಸ್ವಾತಂತ್ರ್ಯ ಪ್ರಿಯ ಹಿಂದುಗಳು ಯವನಛತ್ರದಲ್ಲಿ ಬರುವರೆಂದು ನಿಮ್ಮ ಭಾವನೆಯಾದದ್ದು ನೋಡಿ ನನಗೆ ವಿಸ್ಮಯವಾಗುತ್ತದೆ. ಕುಶಾಗ್ರಬುದ್ಧಿಯವರೂ, ಅದ್ವಿತೀಯ ರಾಜಕಾರಣ ನಿಪುಣರೂ ಆದ ನಿಮ್ಮಲ್ಲಿ ಇಂತಹ ಅಪ್ರಬುದ್ಧ ವಿಚಾರಗಳು ತಲೆದೋರಬಾರದಾಗಿತ್ತು."

ಜನಾರ್ದನನು ಹೀಗೆ ನುಡಿದ ಕೂಡಲೆ ಭೃಗುರಾಮನು ಗಾಂಭೀರ್ಯದಿಂದ—"ಕೇವಲ ನಿಮ್ಮ ಕಲ್ಯಾಣಕ್ಕಾಗಿ ನಾವು ನಮ್ಮ ಅರಸನ ಹಾಗು ಉತ್ಕಲದ ಸ್ವಾತಂತ್ರ್ಯದ ನಾಶಗೊಳಿಸಲುದ್ಯುಕ್ತರಾಗಲಿಲ್ಲವೆಂಬದನ್ನು ಚಾಣಾಕ್ಷರಾದ ನೀವು ತಿಳಕೊಳ್ಳಬೇಕಾಗಿತ್ತು."

"ಮಂತ್ರಿವರ್ಯರೆ, ನೀವು ನನಗೆ ರಾಜನೀತಿಯನ್ನೂ ವ್ಯವಹಾರ ಧರ್ಮವನ್ನೂ ಕಲಿಸಲುಪಕ್ರಮಿಸಿದಂತೆ ತೋರುತ್ತದೆ. ನಿಮ್ಮಿಂದ ಬುದ್ಧಿಗಲಿಯಬೇಕೆಂಬಂತೆ ನನ್ನ ಸ್ಥಿತಿಯಿಲ್ಲ. ನಾನು ನಿಮ್ಮ ಸೂತ್ರದ ಗೊಂಬೆ—"

"ಛೇ! ಛೇ!" ಜನಾರ್ದನನು ನಡುವೇ ಬಾಯಿ ಹಾಕಿ ವಿನಯವನ್ನು ತೋರಿಸುತ್ತ—"ಸೇನಾಪತಿಗಳೆ, ರಾಜನೀತಿಯನ್ನೂ ವ್ಯವಹಾರ ಧರ್ಮವನ್ನೂ ಬಲ್ಲವರಾದ ನಿಮಗೆ ಬುದ್ಧಿಗಲಿಸಬೇಕೆಂದು ನಮ್ಮ ಉದ್ದೇಶವಿಲ್ಲ. ನೀವು ಸರ್ವತಂತ್ರ ಸ್ವತಂತ್ರರಿರುವಿರಿ. ಸಂಗ್ರಾಮದಲ್ಲಿ ನಮ್ಮಿಂದ ನಿಮಗೆ ಎಷ್ಟಾದರೂ ನೆರವು ದೊರೆತಿರುವದು. ಮುಂದಾದರೂ ನಾವು ನಿಮಗೆ ಸಹಾಯ ಮಾಡಲಿಕ್ಕೆ ಸಿದ್ಧರಿರುವೆವು. ನಮ್ಮ ಸೇವೆಗೆ ಲಾಭವು ದೊರೆಯಬೇಕೆಂಬ ಇಚ್ಛೆಯಿಂದಲೇ ನಿಮಗೆ ಬೇಡಿಕೊಳ್ಳತೊಡಗಿರುವೆವು. ನೀವು ಅನ್ಯಥಾ ಭಾವಿಸಕೂಡದು. ಮುಕುಂದದೇವನ ಸಿಂಹಾಸನವನ್ನು ಕೊಡುತ್ತೇನೆಂದು ಕಾತಲೂಖಾನ ಸೇನಾಪತಿಗಳು ವಚನವಿತ್ತಿರುವರು. ನೀವಾದರೂ ಅವರ ಮಾತನ್ನು ನಡೆಯಿಸಲಿಕ್ಕೆ ಹಿಂದೆ ಮುಂದೆ ನೋಡಲಾರಿರೆಂದು ನನ್ನ ನಂಬಿಗೆಯಿರುವದು.

ನಾನು ವಂಗಸುಲತಾನರ ಮಾಂಡಲಿಕನಾಗಿ ಏಕನಿಷ್ಠೆಯಿಂದ ಸಾಮ್ರಾಜ್ಯ ಸೇವೆ ಮಾಡುವೆನು. ನೀವು ಬೇಡಿದಷ್ಟು ಕಾಣಿಕೆಯನ್ನು ಕೊಡಲಿಕ್ಕೆ ನನ್ನ ಸಮ್ಮತಿಯಿರುವದು.''

"ಜನಾರ್ದನ!'' ಕಾಳಾಪಹಾಡನು ಸಂತಾಪದಿಂದ ಉರಿಯುತ್ತ:- "ನಿನಗೆ ರಾಜ್ಯದಾನ ಮಾಡುವದಕ್ಕಾಗಿ ನಾನು ಇಲ್ಲಿಗೆ ಬಂದಿಲ್ಲವೆಂಬದು ಓಲಗದ ಮುಖ್ಯ ಮಂತ್ರಿಯಾಗಿದ್ದ ನಿನಗೆ ತಿಳಿಯಬೇಕಾಗಿತ್ತು. ನೀನು ನಿನ್ನ ರಾಜನಲ್ಲಿ ಸಹ ನಿಷ್ಠೆಯುಳ್ಳವನಿರಲಿಲ್ಲ. ಅವನನ್ನು ಅತ್ಯಂತ ನೀಚತನದಿಂದ ಕೊಲೆ ಮಾಡಿ, ಸ್ವದೇಶವನ್ನೂ ಸ್ವಜನಾಂಗವನ್ನೂ ಗಂಡಾಂತರಕ್ಕೀಡುಮಾಡಿದೆ. ಸ್ವದೇಶ, ಸ್ವಜನ, ಸ್ವಧರ್ಮ ಮೊದಲಾದವುಗಳಲ್ಲಿ ನಂಬಿಗೆಯಿಲ್ಲದ ನಿನ್ನಂತಹ ಜಡಸ್ವಾರ್ಥಿಯು ಪರಕೀಯರಾದ ನಮ್ಮಲ್ಲಿ ಏಕನಿಷ್ಠೆಯುಳ್ಳವನಾಗಿರುವೆಯೆಂಬದರ ಮರ್ಮವನ್ನು ನಾನು ತಿಳಿದಿರುವೆನು. ಸ್ವಾರ್ಥಲಂಪಟ ಪಿಶಾಚಿಯೆ! ರಾಜಸಿಂಹಾಸನವು ನಿನಗೆ ಬೇಕಾಗಿರುವದು; ಅದು ನಮಗೆ ಮಾತ್ರ ಬೇಡಾಗಿರುವದೆಂದು ನಿನ್ನ ಭಾವನೆಯಿರುವದೇ? ನೀನು ಹಿಂದು ಧರ್ಮದವನಲ್ಲವೆ? ಮುಸಲಮಾನರು ನಿಮ್ಮ ಅಸ್ಥಿವೈರಿಗಳಾಗಿಲ್ಲವೆ? ನಿಮ್ಮ ದೇಶ-ಸ್ವಾತಂತ್ರ್ಯ-ಧರ್ಮಗಳ ಸುಲಿಗೆ ಮಾಡಲಿಕ್ಕೆ ಬಂದವರಿಗೆ ಸಹಾಯ ಮಾಡಿ, ಸ್ವಜನರ ರಕ್ತದಿಂದ ಮಲಿನವಾದ ಫಲವನ್ನುಣ್ಣಲಿಕ್ಕೆ ನಿನಗೆ ಹೇಸಿಕೆ ಬರಬೇಕಾಗಿತ್ತು. ಜಡಸ್ವಾರ್ಥಿಯಾದ ನಿನ್ನಲ್ಲಿ ಇಷ್ಟು ಪಾಪ-ಪುಣ್ಯಗಳ ವಿಚಾರವಿರುತ್ತಿದ್ದರೆ ಸ್ವಜನರ ಕರಳಲ್ಲಿ ಕತ್ತರಿಯನ್ನಾಡಿಸಲಿಕ್ಕೆ ಸಿದ್ಧನಾಗುತ್ತಿದ್ದಿಲ್ಲ. ಚಾಂಡಾಲಾ! ನೀನೊಬ್ಬನು ದೇಶದ್ರೋಹದ ಮಹಾ ಪಾತಕ ಮಾಡಲುದ್ಯುಕ್ತನಾದದ್ದಲ್ಲದೆ, ಜಹಾಗೀರಿಯ ಆಶೆಯನ್ನು ತೋರಿಸಿ ಈ ಭೃಗುರಾಮನನ್ನೂ ನಿನ್ನ ಅಂಕಿತನನ್ನಾಗಿ ಮಾಡಿಕೊಂಡೆ! ಈ ಉತ್ಶೃಂಖಲ ಭೃಗುರಾಮನು ಕೇವಲ ಜಹಾಗೀರಿನಿಂದ ತೃಪ್ತಿಹೊಂದತಕ್ಕವನಿಲ್ಲ; ಈ ಅಧಮಾಧಮನು ಮಾತೃಮೂರ್ತಿಯಾದ-ಉತ್ಕಲದ ಸುಖ-ಸ್ವಾತಂತ್ರ್ಯಗಳಿಗಾಗಿ ಮಿತಿಮೀರಿ ಹೆಣಗಿದ-ವ್ರಜಬಾಲೆಯ ಪ್ರಾಪ್ತಿಗಾಗಿ ಸಾಹಸ ನಡೆಯಿಸಿರುವನಂತೆ! ನೀಚ ಶಿಖಾಮಣಿಗಳೆ, ಕಲಿಯುಗದ ಕಲಿಪುರುಷರೆಂಬವರು ನಿಮ್ಮ

ಹೊರತು ಜಗತ್ತಿನಲ್ಲಿ ಮತ್ತಾರಿರುವರು? ಧಿಃಕಾರ! ಧಿಃಕಾರ! ನಿಮ್ಮ ಪೈಶಾಚ್ಯವೃತ್ತಿಗೆ!!''

ಕಾಳಾಪಹಾಡನು ಸಂತಾಪದಿಂದ ಗರ್ಜಿಸಿದ ಕೂಡಲೆ ಜನಾರ್ದನ-ಭೃಗುರಾಮರ ಎದೆಗಳು ನಡುಗಿದವು. ರಾಜ್ಯಲೋಭಾಕೃಷ್ಟರಾದ ಅವರ ಮನಸ್ಸುಗಳು ಅತಿಯಾಗಿ ವ್ಯಾಕುಲಗೊಂಡವು. ಜನಾರ್ದನನಿಗಂತು ಮೈಮೇಲೆ ಆಕಾಶವೇ ಹರಿದುಬಿದ್ದಂತಾಯಿತು. ರಾಜ್ಯಪ್ರಾಪ್ತಿಗಾಗಿ ಮಾಡಿದ ಯತ್ನಗಳೆಲ್ಲ ನಿಷ್ಫಲವಾಗಿ, ಪಾಪಕ್ಕೆ ಮಾತ್ರ ಪಾಲುಗಾರನಾದೆನೆಂದು ಅವನು ಪಶ್ಚಾತ್ತಾಪಬಡತೊಡಗಿದನು. ಆಗ ಅವನ ದೈನ್ಯಾವಸ್ಥೆಗೆ ಎಣೆಯಿಲ್ಲದಾಯಿತು. ಹೇಗಾದರೂ ಮಾಡಿ ಕಾಳಾಪಹಾಡನಲ್ಲಿ ದಯವು ಹುಟ್ಟುವಂತೆ ಮಾಡಬೇಕೆಂದು ಅವನು ಪ್ರಯತ್ನಿಸತೊಡಗಿದನು.

''ಸೇನಾಪತಿಗಳೆ, ನಾನು ದೇಶದ್ರೋಹ-ರಾಜದ್ರೋಹ ಮಾಡಿದ್ದರೂ, ನಿಮ್ಮಲ್ಲಿಯೂ-ನಿಮ್ಮ ನವಾಬರಲ್ಲಿಯೂ ನಿಷ್ಠೆಯುಳ್ಳವನಿರುವೆನು. ನಿಮ್ಮ ಮೇಲಿನ ನಿಷ್ಠೆಯೇ ನನ್ನನ್ನು ಕಟುಕರ್ತವ್ಯಕ್ಕೆ ತೊಡಗಿಸಿತು. ವಿಲಾಸಿಯಾದ ಮುಕುಂದದೇವನ ಆಳಿಕೆಯು ಪ್ರಜಾಜನರಿಗೆ ಕಷ್ಟದಾಯಕವಾಗಿತ್ತು. ಬಹು ಜನರು ವಂಗಸುಲತಾನರ ಛತ್ರದಲ್ಲಿರಬೇಕೆಂಬ ಆಕಾಂಕ್ಷೆಯುಳ್ಳವರಾಗಿರುವರು. ಅಂತೆಯೆ ನಾನು ನಿಮ್ಮ ಸಹಾಯಕ್ಕಾಗಿ ಧಾವಿಸಿದೆನು. ನೀವು ನನಗೆ ರಾಜಸಿಂಹಾಸನವನ್ನಿತ್ತರೆ ಅತ್ಯಂತ ಸ್ವಾಮಿನಿಷ್ಠೆಯಿಂದ ನಡೆದು, ವಂಗ ಸಿಂಹಾಸನದ ಅಭ್ಯುದಯಕ್ಕಾಗಿ ಸಾಹಸ ಮಾಡುವೆನು. ನೀವು ನನ್ನನ್ನು ಉಪೇಕ್ಷಿಸಬೇಡಿರಿ. ಒಮ್ಮೆ ಅರಸೊತ್ತಿಗೆಯನ್ನು ಕೊಟ್ಟು ಪರೀ............''

''ಸಾಕು! ನಿನ್ನ ವಲ್ಗನೆಯು ಇಷ್ಟಕ್ಕೇ ಸಾಕು!'' ಕಾಳಾಪಹಾಡನು ಕರ್ಕಶವಾಣಿಯಿಂದ ನುಡಿದು —''ಮೂರ್ಖಾ, ನೀನು ಎಂತಹ ನಿರುಮೆಯೆಂಬುದು ನನಗೆ ತಿಳಿದಿರುವದು. ನಿನ್ನ ದೇಶಬಾಂಧವರೇ ನಿನ್ನಲ್ಲಿ ವಿಶ್ವಾಸವಿಲ್ಲದವರಾಗಿರುವರು. ಹೀಗಿರುವಾಗ ನಾನು ನಿನ್ನಲ್ಲಿ ಹೇಗೆ ವಿಶ್ವಾಸವಿಡಲಿ? ದೇವತಾಸದೃಶನಾದ ಅರಸನ ಕೊಲೆ ಮಾಡಿದ ನರ

ಪಿಶಾಚಿಯಾದ ನಿನಗೆ ಅರಸೊತ್ತಿಗೆಯನ್ನು ಕೊಡಲಾ? ರಾಣಿಗೆ ಅರಸುತನ ಕೊಟ್ಟೇನು; ಒಂದು ವೇಳೆ ರಾಷ್ಟ್ರಕ್ಕಾಗಿ ಅನುಪಮ ಸ್ವಾರ್ಥತ್ಯಾಗ ಮಾಡಿದ ಗದಾಧರನಿಗೆ ರಾಜ್ಯದಾನ ಮಾಡೇನು; ಕೇವಲ ತತ್ವಕ್ಕಾಗಿ ಬಡಿದಾಡತೊಡಗಿದ ಕರೀಮುಶಹನಿಗೆ ಸಿಂಹಾಸನ ಕೊಟ್ಟೇನು; ಆದರೆ ನಿನ್ನಂತಹ ಸ್ವಾರ್ಥಲಂಪಟ ಶ್ವಾನನಿಗೆ ಮಾತ್ರ ರಾಜ್ಯಾಧಿಕಾರವನ್ನು ಒಪ್ಪಿಸಲಾರೆನು! ನಿನಗೆ ರಾಜ್ಯವಿತ್ತರೆ ಪರಮಾತ್ಮನ ಓಲಗದಲ್ಲಿ ನಾನು ಅಪರಾಧಿಯಾಗುವೆನು; ನಿನ್ನ ಪಾಪಕ್ಕೆ ನಾನು ಪಾಲುಗಾರನಾಗುವೆನು. ನಿನ್ನ ಯತ್ನಕ್ಕೆ ಯಶವು ದೊರೆಯಲಾರದೆಂದು ನಾನು ಖಂಡಿತವಾಗಿ ಹೇಳುವೆನು. ಜನಾರ್ದನಾ, ನೀನು ಇಲ್ಲಿಂದ ಸುಮ್ಮನೆ ಹೊರಟು ಹೋಗು; ನಿರರ್ಥಕವಾಗಿ ಮಾತು ಒಳೆಯಿಸಿದರೆ ಅದು ನನಗೆ ಸಹನ ವಾಗುವದಿಲ್ಲ. ನಿಮ್ಮಿಬ್ಬರ ಪಾಪಕ್ಕೆ ತಕ್ಕ ಫಲವೀಯಲಿಕ್ಕೆ ಪರಮಾತ್ಮನು ಸಮರ್ಥನಿರುವನು. ಜಗನ್ನಾಥನು ಅಂಧನಿರುವದಿಲ್ಲ. ಅವನು ನಿಮಗಾಗಿ ಬೇರೊಂದು ನರಕಕುಂಡವನ್ನು ನಿರ್ಮಾಣ ಮಾಡಿರುವನು."

"ಸೇನಾಪತಿಗಳೆ, ಉತ್ಕಲದ ಭಾವೀ ಮಹಾರಾಜನೆಂದು ಮಹತ್ತರವಾಗಿ ಆನಂದಗೊಂಡಿದ್ದ ನನ್ನನ್ನು ಅಧಃಪಾತಗೊಳಿಸಬೇಡಿರಿ. ರಾಜಸಿಂಹಾಸನವನ್ನೀಯದಿದ್ದರೆ ಅಷ್ಟೇಹೋಯಿತು; ಒಂದು ದೊಡ್ಡ ಜಹಾಗೀರನ್ನಾದರೂ ಕೊಟ್ಟು ನನ್ನನ್ನು ಉದ್ಧರಿಸಿರಿ. ನಾನು ಮಾಡಿದ ಉಪಕಾರವನ್ನು ನೆನಿಸಿಯಾದರೂ ದೊಡ್ಡ ಮನಸ್ಸು ಮಾಡಿರಿ. ದೇಶದ್ರೋಹ-ರಾಜದ್ರೋಹ ಮಾಡಿದ ನಾನು ಎಲ್ಲ ಪ್ರಜಾಜನರ ತಿರಸ್ಕಾರಕ್ಕೆ ಪಾತ್ರನಾಗಿರುವೆನು. ನೀವೂ ನನ್ನನ್ನು ಉಪೇಕ್ಷಿಸಿದರೆ, ಉತ್ಕಲದ ಸೀಮೆಯಲ್ಲಿ ನಿಂತು ನೀರು ಕುಡಿಯಾವದು ಸಹ ನನಗ ಕಠಿಣವಾಗುವದು. ಸಂಗ್ರಾಮದ ಬೇಗೆಯು ಇನ್ನೂ ಶಾಂತವಾಗಿಲ್ಲ. ಗದಾಧರ-ಕರೀಮುಶಹರು ಭುವನೇಶ್ವರದಲ್ಲಿ ಸ್ವಾತಂತ್ರ್ಯ ಸಂಗ್ರಾಮದ ಸಿದ್ಧತೆಯಿಂದಿರುವರು. ಉತ್ಕಲದೇಶವು ಸಂಪೂರ್ಣವಾಗಿ ನಿಮ್ಮ ಹಸ್ತಗತವಾಗುವ ವರೆಗೆ ನಾನು ನಿಮಗೆ ಸಹಾಯ ಮಾಡುವೆನು. ನನ್ನನ್ನು ಬೀದಿಯ ಭಿಕ್ಷುಕನನ್ನಾಗಿ ಮಾಡಬಾರದೆಂದು ಸೆರಗೊಡ್ಡಿ ಬೇಡಿಕೊಳ್ಳುವೆನು."

"ಜನಾರ್ದನಾ! ಲಜ್ಜಾಹೀನ ಜನಾರ್ದನಾ! ರಾಷ್ಟ್ರದ್ರೋಹದಿಂದ ಈಗ ನಿನಗೆ ಯಾವ ಬಗೆಯ ದುಃಖವನ್ನನುಭವಿಸಬೇಕಾಗಿರುವದೆಂಬದನ್ನು ನಿದರ್ಶನಕ್ಕೆ ತಂದು ಕೊಟ್ಟರೂ, ಮತ್ತೆ ಸ್ವಜನರ ಹಾಗು ಸ್ವರಾಜ್ಯದ ವಿರುದ್ಧವಾಗಿ ನನಗೆ ಸಹಾಯಮಾಡಬೇಕೆನ್ನುವೆಯಾ? ನಿನ್ನಂತಹ ದೇಶದ್ರೋಹಿಗಳು ಅಧಃಪಾತವನ್ನು ಹೊಂದದೆ ಉನ್ನತಿಯ ಶಿಖರಕ್ಕೇರಬೇಕೆಂದು ಈಶಸಂಕೇತವಿರುತ್ತಿರುವದಿಲ್ಲ. ನೀನು ನನಗೆ ಉಪಕಾರ ಮಾಡಿರುವೆಯಾ? ಸ್ವಾರ್ಥಕ್ಕಾಗಿ ಬಂಡಾಯದ ಬೇಗೆಯನ್ನೆಬ್ಬಿಸಿ, ಅದರಲ್ಲಿ ಸ್ವಜನರ ಸ್ವಾತಂತ್ರ್ಯವನ್ನು ವಿದಗ್ಧಗೊಳಿಸಿ, ಎರಡನೆಯವರ ಮೇಲೆ ಉಪಕಾರದ ಹೊರೆಯನ್ನು ಹೊರಿಸ ಬಂದಿರುವೆಯಾ! ನರಾಧಮಾ! ಭುವನೇಶ್ವರದ ಸಂಗ್ರಾಮದಲ್ಲಿ ನಿನ್ನ ಸಹಾಯವನ್ನು ಯಾಚಿಸುವಂತಹ ಕುತ್ಸಿತನೂ ಹೇಡಿಯೂ ನಾನಿಲ್ಲ. ನಾನು ಎಂದೂ ನಿನ್ನ ನೆರವನ್ನು ಬಯಸಿಲ್ಲ. ಗದಾಧರ-ಕರೀಮಶಹರಂತಹ ಉಜ್ವಲರಾಷ್ಟ್ರಧರ್ಮರತರು ಸಂಗ್ರಾಮದಲ್ಲಿ ನನ್ನನ್ನು ಸೈನ್ಯಸಹಿತವಾಗಿ ನಾಶಗೊಳಿಸುವರೆಂಬ ಲಕ್ಷಣವು ತೋರಿದರೂ ಅದು ನನಗೆ ಆನಂದವೇ ಇರುವದು. ನಿನ್ನಂತಹ ಪರಮ ಪಾತಕಿಯ ಸಹಾಯದಿಂದ ವಿಜಯಸಂಪಾದನೆಯಾದರೆ, ಆ ವಿಜಯವು ನನ್ನ ನಿರ್ಮಲವಾದ ಕೀರ್ತಿಚಂದ್ರನಿಗೆ ಕಲಂಕವನ್ನು ತರುವಂತಹದಾಗುವದು. ಹಿಂದುಗಳು ಅಜ್ಞರು; ಸಾಧುಭಾವದವರು; ನಿನ್ನ ನೆಲೆಯನ್ನು ತಿಳಿಯದೆ, ನಿನಗೆ ಸಹಾಯಮಾಡಿ ಆತ್ಮಘಾತವನ್ನು ಮಾಡಿಕೊಂಡರು. ಈಗಿನಂತೆ ಅವರು ಮೊದಲೇ ಜಾಣರಾಗಿದ್ದರೆ, ನಾನು ಬಂದ ದಾರಿಗೆ ಸುಂಕವಿಲ್ಲವೆಂಬಂತೆ ತಿರುಗಿ ಹೋಗಬೇಕಾಗುತ್ತಿತ್ತು; ಅಥವಾ ಈರ್ಷೆಯಿಂದ ಕದನ ಮಾಡಿದ್ದರೆ ಉತ್ಕಲದ ಸಂಗ್ರಾಮದೇವತೆಗೆ ನನ್ನ ಪಂಚಪ್ರಾಣಗಳನ್ನು ಬಲಿಯೊಪ್ಪಿಸಬೇಕಾಗುತ್ತಿತ್ತು. ಅತುಲನೀಯ ಶೌರ್ಯ-ಸಾಹಸಗಳಿಂದ ದೈದೀಪ್ಯಮಾನವಾದ ಉತ್ಕಲ ಸ್ವಾತಂತ್ರ್ಯ ಸೂರ್ಯನೂ ಯಶಶ್ಚಂದ್ರನೂ ರಾಹುಕೇತುಗಳಂತಿದ್ದ ನಿಮ್ಮಿಂದ ಪೂರ್ಣವಾಗಿ ಗ್ರಸ್ತನಾಗಿ ಹೋದನು. ದೇಶದ್ರೋಹಿ ರಾಹುಕೇತುಗಳು ಕ್ಷಣಿಕರಲ್ಲ. ಅವರು ಯುಗಯುಗಾಂತರವಾಗಿ ದೇಶವನ್ನು ತೇಜೋಹೀನವನ್ನಾಗಿ ಮಾಡಲು

ಕಾರಣವಾಗುವರು. ಉತ್ಕಲದ ದುರ್ದೈವಕ್ಕೆ ಯಾರು ಮಾಡುವದೇನು? ಭಯಂಕರವಾದ ರೀತಿಯಿಂದ ಸೇಡುತೀರಿಸಿಕೊಳ್ಳಬೇಕೆಂದು ಹೊರಟ ನಾನು ನನ್ನ ಹೃದಯುವನ್ನು ಕಲ್ಲಿಗಿಂತಲೂ ಕಲ್ಲು ಮಾಡಿರುವೆನು. ನಿಮಗೆ ಉತ್ಕಲದೊಳಗಿನ ಗೇಣು ಸ್ಥಳವಾದರೂ ದೊರೆಯಲಾರದು. ನಿರ್ವಿಕಾರ ಮನಸ್ಸಿನಿಂದ ವಿಚಾರಿಸಿದರೆ ನಿಮ್ಮಿಬ್ಬರಿಗೆ ಮರಣ ಶಿಕ್ಷೆಯನ್ನೇ ವಿಧಿಸ ಬೇಕಾಗಿತ್ತು; ಆದರೆ ಅದು ನನ್ನ ಕರ್ತವ್ಯವಲ್ಲ. ಇನ್ನು ಮೇಲೆ ನೀವು ನನ್ನ ಕಣ್ಣಿಗೆ ಬಿದ್ದರೆ ಆಗಿಂದಾಗ ನಿಮ್ಮ ತಲೆಯನ್ನು ಹಾರಿಸುವೆನು! ಒಂದು ಕ್ಷಣ ಸಹ ಇಲ್ಲಿ ನಿಲ್ಲದೆ, ಇಬ್ಬರೂ ಹೊರಟು ಹೋಗಿರಿ! ಒಳ್ಳೇ ಮಾತಿನಿಂದ ಹೋಗದಿದ್ದರೆ ನಿಮ್ಮನ್ನು ಸೀಳಿ ಬಿಡುವೆನು!"

ಕಾಳಾಪಹಾಡನು ಹೀಗೆ ಗರ್ಜಿಸಿದ ಕೂಡಲೆ ಜನಾರ್ದನನು ಅವನಿಗೆ ನಮಸ್ಕರಿಸಿ, ಅಲ್ಲಿಂದ ಹೊರಡಲುದ್ಯುಕ್ತನಾದನು. ಭೃಗುರಾಮನಾದರೂ ಅದೇ ವಿಚಾರದಲ್ಲಿದ್ದನು. ಆಗ ಕಾಳಾಪಹಾಡನು ಭೃಗುರಾಮನನ್ನುದ್ದೇಶಿಸಿ—"ಭೃಗುರಾಮ, ನೀನು ದೇಶದ್ರೋಹ ರಾಜದ್ರೋಹಗಳನ್ನು ಮಾಡಿದ್ದಲ್ಲದೆ, ಮಾತೃದ್ರೋಹ ಮಾಡಲುದ್ಯುಕ್ತನಾಗಿರುವೆಯೆಂದು ತಿಳಿಯುತ್ತದೆ. ನಿನ್ನ ಸಾಹಸವೇನಿರುವದೆಂಬದನ್ನು ನಾನು ಗುಪ್ತಚರರ ಮುಖಾಂತರವಾಗಿ ತಿಳಿದುಕೊಂಡಿರುವೆನು. ರಾಣಿಯೆಂದರೆ ಅವಳೊಬ್ಬ ಸಂತೆಯ ವೇಶ್ಯೆಯೆಂದು ತಿಳಿದಿರುವೆಯೇನು? ಇಡೀ ಭೂಮಂಡಲವನ್ನು ವಶಕ್ಕೆ ಕೊಟ್ಟರೂ ಅವಳು ಶೀಲಚ್ಯುತಿ ಹೊಂದುವಂಥಹಳಲ್ಲ. ಅವಳು ಪರಮ ಸಾಧ್ವಿಯಿರುವಳು. ಆ ಸತಿಶಿರೋಮಣಿಯನ್ನು ಕೆಣಕಹೋದರೆ ನೀನು ಪಾತಿವ್ರತ್ಯ ಜ್ವಾಲೆಯಿಂದ ದಹಿಸಿಹೋಗುವೆ. ಇಷ್ಟು ದಿನ ಗಳಿಸಿದ ಪಾಪದಲ್ಲಿ ಹೊಸ ಪಾಪವನ್ನು ಕೂಡಹಾಕಬೇಡವೆಂದು ನಾನು ನಿನಗೆ ಹಿತೋಕ್ತಿಯನ್ನು ಹೇಳುವೆನು. ನೀನು ರೂಪಾಂಧನಾಗಿರುವೆ. ವಿಕಾರವಶನಾದ ನಿನ್ನಲ್ಲಿಯ ವಿವೇಕವು ಪೂರ್ಣವಾಗಿ ನಾಶವಾಗಿರುವದು. ಮನಸ್ಸಿನ ಮೇಲೆ ವಿವೇಕಸಾಮ್ರಾಜ್ಯವನ್ನು ಪ್ರಸ್ಥಾಪಿಸಿದರೆ ನೀನು ಸೌಖ್ಯದಿಂದ ಬಾಳುವೆ. ಹಾಗೆ ಮಾಡದಿದ್ದರೆ ಇಹ-ಪರಗಳಲ್ಲಿ ದುರ್ಗತಿಯನ್ನು ಹೊಂದುವೆ. ಕೆಲವು ದಿನಗಳಾದರೂ ಅವಳು ನಿನ್ನ

ಸ್ವಾಮಿಯ ಸ್ಥಾನದಲ್ಲಿದ್ದಳು. ಅವಳು ನಿನ್ನ ತಾಯಿಯ ಸಮಾನಳೆಂದು ತಿಳಿದುಕೋ. ಸಾಧ್ವಿಯರಲ್ಲಿ ಯಾವನೂ ನೀಚ ದೃಷ್ಟಿಯನ್ನು ಇಡಬಾರದೆಂಬ ತತ್ವದವನು ನಾನಿರುವದರಿಂದ, ನಿನಗೆ ಎರಡು ಉಪದೇಶ ಮಾಡಿರುವೆನು. ನೀವಿಬ್ಬರೂ ಮಹಾ ಪಾತಕಿಗಳಾಗಿರುವದರಿಂದ ನಿಮ್ಮನ್ನು ಕಡಿದು ನನ್ನ ಖಡ್ಗವನ್ನು ದೂಷಿತ ಮಾಡಬಾರದೆಂಬ ವಿಚಾರದಿಂದಲೇ ನಿಮಗೆ ಜೀವದಾನ ಕೊಟ್ಟಿರುವೆನು. ಇನ್ನು ವಂಗ-ಉತ್ಕಲಗಳ ಸೀಮೆಯಲ್ಲಿ ನೀವು ನನ್ನ ಕಣ್ಣಿಗೆ ಬಿದ್ದರೆ ಅದೇ ನಿಮಿಷವು ನಿಮ್ಮ ಆಯುಷ್ಯದ ಕೊನೆಯದೆಂದು ತಿಳಿದುಕೊಳ್ಳಿರಿ!''

ಕಾಳಾಪಹಾಡನ ಮಾತುಗಳಿಂದ ಜನಾರ್ದನ-ಭೃಗುರಾಮರು ಜರ್ಜರಿತರಾದರು. 'ಅತೋಭ್ರಷ್ಟಸ್ತಥೋಭ್ರಷ್ಟಃ' ಎಂಬ ಗತಿಯನ್ನು ಹೊಂದಿ ದೇಶಾಂತರಕ್ಕೆ ತೆರಳಬೇಕಾಯಿತೆಂದು ಅವರು ಬಹಳೇ ಕ್ಲೇಶಗೊಂಡರು. ಅವರು ಕಾಳಾಪಹಾಡನಿಗೆ ಅಭಿವಂದಿಸಿ ಶಿಬಿರದಿಂದ ತೆರಳಿದರು. ಆಗ ಅವರ ಮನಸ್ಸು ದುಃಖ-ವೈರಾಗ್ಯಗಳಿಂದ ಉದ್ವಿಗ್ನವಾಗಿತ್ತು. ಅವರು ಹೇಗಾದರೂ ಮಾಡಿ ತಮ್ಮ ತಮ್ಮ ಶಿಬಿರವನ್ನು ತಲುಪಿದರು ಅಷ್ಟರಲ್ಲಿ ಡಂಗುರದವನು ಅಲ್ಲಿಗೆ ಬಂದು:—''ಜಗನ್ನಾಥ-ಭೃಗುರಾಮರು ಓರಿಸಾದ ಮಹಾರಾಜನ ಕೊಲೆ ಮಾಡಿರುವರು. ರಾಜ್ಯದಾಸೆಯಿಂದ ಅವರು ಬಂಡಾಯವನ್ನೆಬ್ಬಿಸಿ ಹಿಂದು ಜನರ ರಾಜ್ಯವನ್ನು ಬಂಗಾಲದ ನವಾಬರ ಪಾಲುಮಾಡಿದರು. ಅವರಿಗೆ ನಿಜವಾದ ಹಿಂದುಗಳೆನಿಸಿಕೊಳ್ಳುವವರು ಯಾರೂ ನೆರವಾಗಬಾರದು. ಯಾರಾದರೂ ಅವರ ನೇತೃತ್ವಕ್ಕೊಳಗಾದರೆ, ಅವರಿಗೆ ಕಾಳಾಪಹಾಡ ಸೇನಾಪತಿಗಳಿಂದ ಭಯಂಕರವಾದ ಶಾಸನವು ವಿಧಿಸಲ್ಪಡುವದು.''

ಕಾಳಾಪಹಾಡನು ಬುದ್ಧಿಪೂರ್ವಕವಾಗಿ ಡಂಗುರವನ್ನು ಹೊಡೆಯಿಸಿದ್ದನು. ಅವನ ಡಂಗುರವು ಸೈನಿಕರ ಮನಸ್ಸಿನ ಮೇಲೆ ಚನ್ನಾಗಿ ಪರಿಣಾಮವನ್ನುಂಟುಮಾಡಿತು. ಜನಾರ್ದನ ಭೃಗುರಾಮರು ಅತ್ಯಂತ ನೀಚತನ ಮಾಡಿರುವರೆಂಬದು ಮೊದಲಿಗಿಂತ ಸ್ಪಷ್ಟವಾಗಿ ತಿಳಿದ ಕೂಡಲೆ ಜನರು ಸಂತಪ್ತರಾದರು.. ಅವರು ಆ ದೇಶದ್ರೋಹಿಗಳ

ಕೊಲೆಯನ್ನು ಮಾಡಲುಪಕ್ರಮಿಸುವವರಿದ್ದರು. ಅಷ್ಟರಲ್ಲಿ ಕಾಳಾಪಹಾಡನು ಅಲ್ಲಿಗೆ ಬಂದು, ಅವರಿಬ್ಬರನ್ನು ಸುರಕ್ಷಿತವಾಗಿ ಹೋಗಗೊಟ್ಟನು. ಜನಾರ್ದನನು ರಾಜ್ಯದಾಶೆಗಾಗಿ ಬಂಡಾಯವನ್ನೆಬ್ಬಿಸಿದ್ದನೆಂಬದು ಇದುವರೆಗೆ ಅವನ ಸೈನಿಕರಿಗೆ ತಿಳಿದಿದ್ದಿಲ್ಲ. ಡಂಗುರದಿಂದ ನಿಜಸ್ಥಿತಿಯು ಗೊತ್ತಾಗಲು, ಎಲ್ಲ ಜನರೂ ಕಾಳಾಪಹಾಡನ ಸೈನ್ಯವನ್ನು ಕೂಡಿಕೊಂಡರು. ಕೆಲವು ಜನ ಸ್ವದೇಶ ಪ್ರೇಮಿಗಳು ಗುಪ್ತರೀತಿಯಿಂದ ಜಾರಿ ಹೋಗಿ, ಗದಾಧರನ ಸೈನ್ಯವನ್ನು ಕೂಡಿದರು.

ಕೈಯೊಳಗಿನ ಸೈನ್ಯವು ಹೋದ ಮೇಲೆ ಜನಾರ್ದನ-ಭೃಗುರಾಮರ ದೈನ್ಯಕ್ಕೆ ಮೇರೆದಪ್ಪಿತು. ಜನಾರ್ದನನ ಸಹವಾಸದಲ್ಲಿರುವದು ಒಳಿತಲ್ಲವೆಂದು ಭೃಗುರಾಮನಿಗೆ ತಿಳಿದದ್ದರಿಂದ, ಅವನು ತನ್ನ ಮಿತ್ರನಿಗೆ ಹೇಳದೆ ಕೇಳದೆ ಎತ್ತೋ ಹೊರಟು ಹೋದನು. ಉತ್ಕಲದ ಭಾವೀ ಮಹಾರಾಜನಾದ ಜನಾರ್ದನನು ಅನಾನ್ನದಶೆಯಿಂದ ಬೀದಿಯ ಭಿಕ್ಷುಕನಂತೆ ಅವಸ್ಥೆಯನ್ನು ಹೊಂದಿದನು. ಆಯಿತು; ಇಬ್ಬರು ದೇಶದ್ರೋಹಿಗಳ ಅಧಃಪಾತವೂ ಆಯಿತು!

---

## ದೀಪನಿರ್ವಾಣ!

ಭುವನೇಶ್ವರದಲ್ಲಿ ಗದಾಧರ ಕರೀಮುಶಹರು ಸಂಗ್ರಾಮದ ಸಿದ್ಧತೆಯನ್ನು ಬಹಳೇ ಉತ್ತಮ ರೀತಿಯಿಂದ ಮಾಡಿದ್ದರು. ಸೈನಿಕರ ಸಂಖ್ಯೆಯು ದಿನದಿನಕ್ಕೆ ಹೆಚ್ಚಾಗಲಾರಂಭಿಸಿತ್ತು. ಒಂಡುಗಾರರ ಬಂಡಾಯವು ಮುರಿದು ಹೋದದ್ದರಿಂದ ಅವರೊಳಗಿನ ಎಷ್ಟೋ ಜನರು ಗದಾಧರ-ಕರೀಮುಶಹರ ಸೈನ್ಯದಲ್ಲಿ ಕೂಡತೊಡಗಿದ್ದರು. ಸ್ವಾತಂತ್ರ್ಯಪ್ರಿಯರಾದ ಹಿಂದುಗಳು ತಂಡತಂಡವಾಗಿ ಬಂದು ಸ್ವಾತಂತ್ರ್ಯಸಂಗ್ರಾಮದಲ್ಲಿ ಭಾಗ ತೆಗೆದುಕೊಳ್ಳಲಾರಂಭಿಸಿದರು. ಗದಾಧರನಲ್ಲಿ ಎರಡು ಅಗ್ನಿಗೋಲಕ ಯಂತ್ರಗಳೂ ಹತ್ತುಸಾವಿರ ತುಬಾಕಿಗಳೂ ಇದ್ದವು. ಸೈನ್ಯದ ಸಂಖ್ಯೆಯು ಮಿತಿಮೀರಿ ತೋರಗಿದ್ದರಿಂದ ಹೊಸದಾಗಿ ಶಸ್ತ್ರಾಸ್ತ್ರಗಳನ್ನು

ಸಿದ್ಧಪಡಿಸಿಕೊಳ್ಳುವ ಆವಶ್ಯಕತೆಯಿತ್ತು. ವ್ಯಾಹತಿಯಿಲ್ಲದೆ ದುಡಿಯುವ ಗದಾಧರನು ತನ್ನ ಸೈನ್ಯದಲ್ಲಿರುವ ಕುಂದುಕೊರತೆಗಳನ್ನು ಹೋಗಲಾಡಿಸಿದನು.

ಕಾಳಾಪಹಾಡ ಸೇನಾಪತಿಯು ತನ್ನ ತಂದೆಗೆ ಗೋಪಾದದಷ್ಟು ಸಹ ಭೂಮಿ ಸೀಮೆಗಳನ್ನು ಕೊಡದೆ ಶಿಬಿರದಿಂದ ತಳ್ಳಿದನೆಂಬದನ್ನು ಹರಿಕೀರ್ತನನು ಕೇಳಿದ್ದನು. ತನ್ನ ತಂದೆಯಿಂದ ನೀಗದ ಕಾರ್ಯವನ್ನು ಈಡೇರಿಸಿಕೊಳ್ಳಬೇಕೆಂಬ ಮಹತ್ವಾಕಾಂಕ್ಷೆಯಿಂದ ಹರಿಕೀರ್ತನನು ಗದಾಧರನನ್ನು ಕೂಡಿದನು. ತಾನು ಮಾಡಿದ ಪಾಪಕೃತ್ಯದ ಕ್ಷಾಲನೆಗಾಗಿ ಯತ್ನಿಸುವೆನೆಂದು ಅವನು ಗದಾಧರನಿಗೆ ಹೇಳಿದನು. ಹರಿಕೀರ್ತನನು ಕೃತಕರ್ಮದ ಬಗ್ಗೆ ಪಶ್ಚಾತ್ತಾಪವನ್ನು ವ್ಯಕ್ತಪಡಿಸಿದ್ದರಿಂದ ಗದಾಧರನು ಅವನಿಗೆ ಆಶ್ರಯ ಕೊಡುವದಕ್ಕೆ ಒಪ್ಪಿದನು. ಸೈನಿಕರು ಪರದೇಶದವನಾದ ತನ್ನ ಕೈಕೆಳಗೆ ಇರುವದಕ್ಕಿಂತ ಸ್ವದೇಶದವನಾದ ಹರಿಕೀರ್ತನನ ಕೈಯಲ್ಲಿದ್ದರೆ, ಅವರು ಹೆಚ್ಚಾಗಿ ಶೌರ್ಯ-ಸಾಹಸಗಳನ್ನು ತೋರಿಸುವರೆಂದು ಗದಾಧರನು ತಿಳಿದುಕೊಂಡನು. ಅವನು ಒಬ್ಬ ಶೂರನಾದ ಉತ್ಕಲವಾಸಿಯ ಜೋಡನ್ನು ನಿರೀಕ್ಷಿಸುತ್ತಲಿದ್ದನು. ಹರಿಕೀರ್ತನನು ಉಚ್ಚಕುಲದವನೂ ದೊಡ್ಡ ಮನೆತನದವನೂ ಪ್ರತಿಷ್ಠಿತನೂ ಇದ್ದುದರಿಂದ ವೇಳೆಗೆ ಸರಿಯಾಗಿ ಅವನ ನೆರವು ದೊರೆದದ್ದಕ್ಕಾಗಿ ಗದಾಧರನಿಗೆ ಬಹಳೇ ಆನಂದವಾಯಿತು. ಸೈನ್ಯದ ಮುಖ್ಯ ಸೇನಾಧಿಪತ್ಯವು ಉತ್ಕಲದ ಪ್ರಜೆಯಾದ ಹರಿಕೀರ್ತನನ ಕಡೆಗಿರುವದು ಯುಕ್ತವೆಂದು ಅವನಿಗೆ ತಿಳಿಯಿತು. ಆಗ ಅವನು ಹರಿಕೀರ್ತನನನ್ನು ಮುಖ್ಯ ಸೇನಾಪತಿಯ ಸ್ಥಳದಲ್ಲಿ ನಿಯಾಮಿಸಿದನು.

ಪಠಾಣ ಸೈನ್ಯವು ಭುವನೇಶ್ವರಕ್ಕೆ ಅಭಿಮುಖವಾಗಿ ಹೊರಟಿರುವದೆಂಬ ಸಂಗತಿಯು ಗದಾಧರನಿಗೆ ತಿಳಿಯಿತು. ಆಗ ಅವನು ತನ್ನ ಸೈನ್ಯದಲ್ಲಿ ಮೂರು ಭಾಗ ಮಾಡಿದನು. ಒಂದು ಭಾಗವನ್ನು ತನ್ನ ಕಡೆಯಲ್ಲಿ ತೆಗೆದುಕೊಂಡು ಶತ್ರುಗಳು ಕೋಟೆ-ಪಟ್ಟಣಗಳ ಕಡೆಗೆ ಜಾರದಂತೆ ಅಡ್ಡಿ ಮಾಡಬೇಕೆಂದು ನಿರ್ಧರಿಸಿದನು. ಪಟ್ಟಣದ ರಕ್ಷಣೆಗಾಗಿ

ಅವನು ಕರೀಮುಶಹನನ್ನು ನಿಯಮಿಸಿದನು; ದುರ್ಗರಕ್ಷಣೆಯ ಕಾರ್ಯ ವನ್ನು ಹರಿಕೀರ್ತನನ ಕಡೆಗೆ ಒಪ್ಪಿಸಿದನು. ತನ್ನ ಕಲ್ಪನೆಗಿಂತಲೂ ಹೆಚ್ಚಾಗಿ ಸೈನ್ಯವು ಕಲೆತು ಸಂಗ್ರಾಮ ಸಿದ್ಧತೆಯು ಸರ್ವೋತ್ಕೃಷ್ಟವಾದ ರೀತಿಯಿಂದ ನೆರವೇರಿದ್ದರಿಂದ, ಕಾಳಾಪಹಾಡನ ಸೈನ್ಯವನ್ನು ಕೆಲವು ಗಳಿಗೆಗಳಲ್ಲಿ ವಿಧ್ವಂಸಗೊಳಿಸುವೆನೆಂದು ಗದಾಧರನು ಆನಂದಪಡುತ್ತೊಡ ಗಿದ್ದನು.

ರಾಜಧಾನಿಯು ವಶವಾದ ಮಾತ್ರದಿಂದ ಕಾಳಾಪಹಾಡನ ಇತಿ ಕರ್ತವ್ಯವಾಯಿತೆಂಬಂತಿದ್ದಿಲ್ಲ. ತನ್ನ ಅಪಮಾನದ ಭಯಂಕರವಾದ ಸೇಡು ತೀರಿಸಿಕೊಳ್ಳಬೇಕೆಂದು ಅವನು ಮಹತ್ವಾಕಾಂಕ್ಷೆಗೊಂಡಿದ್ದನು. ಹಿಂದುಗಳು ಶ್ರೀಕ್ಷೇತ್ರಪುರಿಯಲ್ಲಿ ತನಗೆ ದೇವದರ್ಶನ ಮಾಡಿಸದೆ ಮಾನ ಭಂಗಮಾಡಿದ್ದರಿಂದ, ಜಗನ್ನಾಥ ಕ್ಷೇತ್ರವನ್ನು ಜಗನ್ನಾಥನ ಮಂದಿರ ಸಹಿತವಾಗಿ ಉಧ್ವಸ್ತಗೊಳಿಸಿದ ಮೇಲೆಯೇ ಅವನ ತಪ್ತ ಹೃದಯವು ಶಾಂತವಾಗತಕ್ಕದಿದ್ದಿತ್ತು. ಭುವನೇಶ್ವರದಲ್ಲಿ ಗದಾಧರನು ಯುದ್ಧದ ಅಪೂರ್ವ ಸಿದ್ಧತೆ ಮಾಡಿಕೊಂಡಿರುವನೆಂಬ ಸಂಗತಿಯು ತಿಳಿದ ಕೂಡಲೆ ಕಾಳಾಪಹಾಡನು ಅವನಿಗೆ ಎದುರಾಗುವದಕ್ಕಾಗಿ ಹೊರಟನು. ಭುವ ನೇಶ್ವರಕ್ಕೆ ಹೋಗಲಿಕ್ಕೆ ಎರಡು ಮಾರ್ಗಗಳಿದ್ದವು ಒಂದು ಮಾರ್ಗವು ಪರ್ವತ ಪ್ರದೇಶದಲ್ಲಿ ಹಾಯ್ದು ಹೋಗುತ್ತಿತ್ತು. ಅಲ್ಲಿ ಗದಾಧರನು ಹೇರಳವಾದ ಸೈನ್ಯವನ್ನು ತೆಗೆದುಕೊಂಡು ಶತ್ರುಗಳ ಆಗಮನವನ್ನು ನಿರೀಕ್ಷಿಸುತ್ತಿರುವನೆಂಬದು ಕಾಳಾಪಹಾಡನಿಗೆ ಗೊತ್ತಾಯಿತು. ಆಗ ಅವನು ಮತ್ತೊಂದು ಮಾರ್ಗದಿಂದ ಹೋಗುವದನ್ನು ನಿಶ್ಚಯಿಸಿದನು. ಆ ಮಾರ್ಗದಲ್ಲಿ ಎರಡು ನದಿಗಳು ಹತ್ತುತ್ತಿದ್ದವು. ಆ ಎರಡೂ ನದಿ ಗಳ ಸೇತುವೆಗಳು ಗದಾಧರನಿಂದ ಕೆಡಹಲ್ಪಟ್ಟಿದ್ದವು. ನದಿಗಳಿಗೆ ಸೇತುವೆ ಯನ್ನು ಕಟ್ಟದೆ ಕಾಳಾಪಹಾಡನ ದೊಡ್ಡ ಸೈನ್ಯವು ದಾಟಿ ಹೋಗುವಂತಿರ ಲಿಲ್ಲ.

ಚಂದ್ರಭಾಗಾನದಿಯ ದಂಡೆಯಲ್ಲಿ ಕಾಳಾಪಹಾಡನ ಸೈನ್ಯವು ಬೀಡುಬಿಟ್ಟಿತ್ತು. ದೊಡ್ಡ ದೊಡ್ಡ ಮರಗಳನ್ನು ಕಡಿದು ಅವುಗಳ

ಜೊಡ್ಡೆಗಳನ್ನು ನದಿಯಲ್ಲಿ ಹಾಕಿ ಸೇತುವೆಯು ಕಟ್ಟಲ್ಪಡತೊಡ ಗಿತ್ತು. ಗದಾಧರನು ಸೇತುವೆಯ ಕೆಲಸಕ್ಕೆ ತನ್ನಿಂದಾದಷ್ಟು ಅಡ್ಡಿ ಮಾಡತೊಡಗಿದ್ದನು. ಅವನ ಪ್ರಯತ್ನಕ್ಕೆ ಫಲವು ಲಭಿಸಲಿಲ್ಲ. ಎರಡು ದಿನಗಳಲ್ಲಿ ಸೇತುವೆಯನ್ನು ಕಟ್ಟುವ ಕೆಲಸವು ಪೂರ್ಣವಾಯಿತು. ಕೂಡಲೆ ಕಾಳಾಪಹಾಡನು ತನ್ನ ಸೈನ್ಯವನ್ನು ತೆಗೆದುಕೊಂಡು ನದಿಯನ್ನು ದಾಟಿದನು. ಆಗ ಗದಾಧರನು ಹಿಂದೆ ಸರಿದು ವರುಣಾ ನದಿಯ ದಂಡೆಗೆ ಹೋದನು. ವರುಣಾ ನದಿಯು ಚಂದ್ರಭಾಗಾನದಿಗಿಂತ ದೊಡ್ಡ ದಾಗಿತ್ತು. ಕಾಳಾಪಹಾಡನು ತನ್ನ ಸೈನ್ಯವನ್ನು ವರುಣಾತೀರಕ್ಕೆತಂದನು. ಅದಕ್ಕಾದರೂ ಸೇತುವೆಯನ್ನು ಕಟ್ಟುವದು ಆವಶ್ಯಕವಿತ್ತು. ಕೂಡಲೆ ಕಾಳಾಪಹಾಡನು ನದಿಗೆ ಸೇತುವೆ ಕಟ್ಟುವ ಕೆಲಸವನ್ನು ಪ್ರಾರಂಭಿಸುವ ದಕ್ಕಾಗಿ ತನ್ನ ಸೈನಿಕರಿಗೆ ಆಜ್ಞಾಪಿಸಿದನು. ಸೇತುವೆಯನ್ನು ಕಟ್ಟುವ ಕೆಲಸವು ನಡೆದಾಗ ಗದಾಧರನ ಸೈನ್ಯವು ಪೈಲತೀರದಲ್ಲಿತ್ತು. ಅದು ಸೇತುವೆಯನ್ನು ಕಟ್ಟುವ ಜನರ ಮೇಲೆ ಶರವೃಷ್ಟಿಗರೆಯಲಾರಂಭಿಸಿತು. ಕೂಡಲೆ ಕೆಲಸಗಾರರು ಓಡಿಹೋಗಿ ಶಿಬಿರವನ್ನು ಸೇರಿದರು. ಶತ್ರು ಸೈನಿಕರು ಸೇತುವೆಯನ್ನು ಕಟ್ಟುವ ಕೆಲಸಕ್ಕೆ ಬಲವಾದ ಅಡ್ಡಿಯನ್ನು ಮಾಡಿದ್ದರಿಂದ ಕಾಳಾಪಹಾಡನು ತುಬಾಕಿಯ ಸೈನಿಕರಿಂದ ಅವರಿಗೆ ಪ್ರತಿಕಾರ ಮಾಡತೊಡಗಿದನು. ತುಬಾಕಿಗಳ ಗುಂಡಿನ ಮಳೆಯಿಂದ ಗದಾಧರನ ಬಿಲ್ಲುಗಾರಸೈನ್ಯವು ಹಿಂದೆ ಸರಿಯಿತು. ಅಗ್ನಿ ಗೋಲಕ ಯಂತ್ರಗಳ ಸಹಾಯದಿಂದ ತುಬಾಕಿಯ ಸೈನಿಕರನ್ನು ನಾಶಗೊಳಿಸ ಬೇಕೆಂದು ಗದಾಧರನು ಯೋಚಿಸಿ, ಭುವನೇಶ್ವರದ ಹೊಸಕೋಟೆ ಯಲ್ಲಿದ್ದ ತನ್ನ ಎರಡೂ ಯಂತ್ರಗಳನ್ನು ಕಳುಹಿಸಬೇಕೆಂದು ಹರಿಕೀರ್ತನ ನಿಗೆ ತಿಳಿಸಿದನು. ಹರಿಕೀರ್ತನನು ಅವುಗಳನ್ನು ಗದಾಧರನ ಕಡೆಗೆ ಕಳು ಹಿಸಲಿಲ್ಲ. ಶತ್ರುಗಳು ನದೀಪಾರ ಆದ ಮೇಲೆ ಕೋಟೆಯ ಹಾಗು ನಗ ರದ ರಕ್ಷಣೆಗಾಗಿ ಅಗ್ನಿಗೋಲಕ ಯಂತ್ರಗಳು ಅವಶ್ಯವಾಗಿ ಬೇಕಾಗು ವದರಿಂದ ಅವುಗಳನ್ನು ಕಳುಹಿಸಲಿಕ್ಕೆ ಸಾಧ್ಯವಿಲ್ಲೆಂದೂ, ಬಿಲ್ಲುಗಾರ ರಿಂದಲೇ ಆದಷ್ಟು ಶತ್ರುಪ್ರತಿಕಾರ ಮಾಡಬೇಕೆಂದೂ ಅವನು ಗದಾಧರ

ನಿಗೆ ತಿಳಿಸಿದನು. ಹರಿಕೀರ್ತನನ ಈ ಅಭಿಪ್ರಾಯವು ಗದಾಧರನಿಗೆ ಸಮಂಜಸವಾಗಿ ತೋರಲಿಲ್ಲ. ಶತ್ರುಗಳು ನದಿಯನ್ನು ದಾಟುವಷ್ಟರಲ್ಲಿ ಅಗ್ನಿಗೋಲಕ ಯಂತ್ರಗಳನ್ನು ಕೋಟೆಯ ಮೇಲೆ ಒಯ್ಯಲಿಕ್ಕೆ ಬರುವ ದೆಂದು ಅವನು ಹರಿಕೀರ್ತನನಿಗೆ ತಿಳಿಸಿದನು; ಆದರೂ ಅವನು ಗದಾಧ ರನ ಮಾತಿಗೆ ಮಾನ್ಯತೆ ಕೊಡಲಿಲ್ಲ. ಹರಿಕೀರ್ತನನು ಹಠಾತ್ತಾಗಿ ಮನ ಬಂದ ಹಾಗೆ ನಡೆಯ ತೊಡಗಿದ ಕಾರಣವೇನಿರಬಹುದೆಂದು ಗದಾಧರನು ಆಲೋಚನೆ ಮಾಡತೊಡಗಿದನು. ಆಗ ಕೇವಲ ವಿಚಾರ ಮಾಡುತ್ತ ಕುಳಿತುಕೊಳ್ಳುವ ಸಮಯವಿರಲಿಲ್ಲ. ಈ ವಿಷಯವಾಗಿ ಹರಿಕೀರ್ತನ ನನ್ನು ಸಮಕ್ಷ ಕೇಳಬೇಕೆಂದು ನಿರ್ಧರಿಸಿ ತನ್ನ ಕಾರ್ಯದಲ್ಲಿ ತೊಡಗಿ ದನು. ಸೇತುವೆ ಕಟ್ಟುವ ಕೆಲಸಕ್ಕೆ ಆತಂಕವನ್ನುಂಟುಮಾಡುವದು ಅವನ ಆದ್ಯಕರ್ತವ್ಯವಾಗಿತ್ತು. ಸಮ್ಮುಖದಲ್ಲಿ ತುಬಾಕಿಯ ಸೈನ್ಯವು ನಿಂತು, ತನ್ನ ಬಿಲ್ಲುಗಾರರ ಆಟವನ್ನೇನೂ ನಡೆಯದಂತೆ ಮಾಡಿದ್ದರಿಂದ ಅವನು ಗೊಂದಲದಲ್ಲಿ ಸಿಲುಕಿದನು.

ಗದಾಧರನು ದೃಢಪ್ರಯತ್ನದವನಿದ್ದನು. ಯಾವ ಹಂಚಿಕೆಯಿಂದ ತುಬಾಕಿಯ ಸೈನ್ಯವನ್ನು ನಾಶಗೊಳಿಸಬೇಕೆಂದು ಅವನು ಬಹು ವಿಧವಾಗಿ ಯೋಚಿಸಿದನು. ಕಡೆಗೆ ಅವನಿಗೆ ಒಳ್ಳೆಯ ಸುಲಭವೂ ಫಲಕಾರಿಯೂ ಆದ ಹಂಚಿಕೆಯು ತೋಚಿತು. ಕಾಳಾಪಹಾಡನ ಸೈನಿಕರು ಕಟ್ಟಿಗೆಯ ಸೇತುವೆಯನ್ನು ಕಟ್ಟುತ್ತಿದ್ದ ಸ್ಥಳದಿಂದ ಸ್ವಲ್ಪ ಅಂತರದ ಮೇಲೆ ಉಸು ಕಿನಲ್ಲಿ ಮನುಷ್ಯನು ಮರೆಯಾಗುವಂತಹ ಇನ್ನೂರು-ಮುನ್ನೂರು ತೆಗ್ಗು ತೋಡಿಸಿ, ಗದಾಧರನು ತನ್ನ ಬಿಲ್ಲುಗಾರರಿಗೆ ಆ ತೆಗ್ಗಿನಲ್ಲಿ ಕುಳಿತು ಶತ್ರುಗಳ ಮೇಲೆ ಬಾಣ ಹೊಡೆಯಲಿಕ್ಕೆ ಹೇಳಿದನು. ಅವನ ಈ ಯುಕ್ತಿಯು ಒಳ್ಳೇ ಫಲದಾಯಕವಾಯಿತು. ಬಿಲ್ಲುಗಾರರ ಬಾಣ ಗಳು ಸೇತುವೆಯನ್ನು ಕಟ್ಟುವವರ ಮೇಲೆಯೂ ತುಬಾಕಿಯ ಸೈನ್ಯದ ಮೇಲೆಯೂ ಅವಿರಲವಾಗಿ ಸುರಿಯತೊಡಗಿದವು. ತುಬಾಕಿಯ ಸೈನಿ ಕರು ಬಾಣಗಳು ಬರುವನಿಟ್ಟಿಗೆ ಎಷ್ಟು ದಿಟ್ಟಿಸಿ ನೋಡಿದರೂ ಶತ್ರು ಗಳು ಕಣ್ಣಿಗೆ ಬೀಳಲಿಲ್ಲ. ಭೂಮಿಯೊಳಗಿಂದ ಬಾಣಗಳು ಸಿಡಿಯು

ತೊಡಗಿರುವವೆಂದು ಅವರು ದಂಗು ಬಡೆದರು. ತತ್ರುಗಳ ಹೊಡತ ದಿಂದ ಎಷ್ಟೋ ಜನ ತುಬಾಕಿಯವರೂ ಸೇತುವೆಯನ್ನು ಕಟ್ಟುವವರೂ ಮೃತ್ಯುಮುಖಕ್ಕೀಡಾದರು. ಉಳಿದ ಜನರು ಜೀವವುಳಿಸಿಕೊಳ್ಳುವದ ಕ್ಕಾಗಿ ಶಿಬಿರಕ್ಕೆ ಓಡಿ ಹೋದರು. ಇಷ್ಟು ಹೊತ್ತಿಗೆ ಸೇತುವೆಯನ್ನು ಕಟ್ಟುವ ಕೆಲಸವು ಹಾಗೂ ಹೀಗೂ ಪೂರ್ಣವಾಗಿತ್ತು. ಇನ್ನು ಮೇಲೆ ಕಾಳಾಪಹಾಡನ ಸೈನ್ಯವು ಸೇತುವೆಯ ಮೇಲಿಂದ ಹಾಯ್ದು ನದಿಯನ್ನು ದಾಟುವದೆಂದು ಗದಾಧರನು ತರ್ಕಿಸಿ ತನ್ನ ಬಿಲ್ಲುಗಾರರನ್ನು ಉಸುಕಿ ನೊಳಗಿನ ತೆಗ್ಗುಗಳಲ್ಲಿಯೆ ಕುಳ್ಳಿರಿಸಿ ಬಿಟ್ಟಿದ್ದನು.

ಭೂಮಿಯೊಳಗಿಂದ ಬಾಣಗಳೆದ್ದು ತಮ್ಮ ಸೈನ್ಯವನ್ನು ನಾಶ ಮಾಡಿದವೆಂಬ ಸಂಗತಿಯನ್ನು ಪಠಾಣಸೈನಿಕರು ಕಾಳಾಪಹಾಡನಿಗೆ ತಿಳಿಸಿ ದರು. ಅವನು ಸೈನಿಕರ ಮಾತುಗಳನ್ನು ಕೇಳಿ ನಕ್ಕನು. ಗದಾಧರನು ರಚಿಸಿದ ಕಾರಸ್ಥಾನವು ಅವನಿಗೆ ತಿಳಿಯದಿರಲಿಲ್ಲ. ಕೂಡಲೆ ಅವನು ತುಬಾಕಿಯ ಸೈನ್ಯವನ್ನು ಮುಂದೆ ಹಾಕಿ, ತನ್ನ ಸೈನ್ಯದೊಡನೆ ನದಿಯನ್ನು ದಾಟಲಿಕ್ಕೆ ಸೇತುವೆಯ ಕಡೆಗೆ ಸಾಗಿದನು. ತುಬಾಕಿಯ ಸೈನ್ಯವು ಸೇತು ವೆಯ ಮೇಲೆ ಬಂದ ಕೂಡಲೆ ಬಾಣಗಳ ಮಳೆಯು ಪ್ರಾರಂಭವಾಯಿತು. ಬಾಣಗಳು ಬರುವ ನಿಟ್ಟಿಗೆ ತುಬಾಕಿಗಳನ್ನು ಹಾರಿಸಬೇಕೆಂದು ಕಾಳಾ ಪಹಾಡನು ತುಬಾಕಿಯ ಸೈನ್ಯಕ್ಕೆ ಆಜ್ಞಾಪಿಸಿದನು. ತುಬಾಕಿಯ ಗುಂಡು ಗಳು ಗದಾಧರನ ಸೈನ್ಯಕ್ಕೆ ತಾಕುವಂತಿದ್ದಿಲ್ಲ. ಎಷ್ಟು ಗುಂಡು ಹೊಡೆ ದರೂ ಶರ ವೃಷ್ಟಿಯು ಕಡಿಮೆಯಾಗಲಿಲ್ಲ. ತುಬಾಕಿಯ ಸೈನಿಕರು ಮಾತ್ರ ಬಹು ಜನರು ನಾಶವಾದರು. ಸೇತುವೆಯನ್ನು ದಾಟುವ ಧೈರ್ಯವು ಯಾವ ಪಠಾಣ ಸೈನಿಕನಿಗೂ ಆಗಲಿಲ್ಲ. ಧೈರ್ಯದಿಂದ ಮುಂದಕ್ಕೆ ಸಾಗಿದವನು ಬಾಣಗಳ ಹೊಡತಗಳಿಂದ ತಪ್ಪದ ಗತಾಸು ವಾಗುತ್ತಿದ್ದನು. ಸ್ವಲ್ಪ ವೇಳೆಯಲ್ಲಿ ಐದಾರು ನೂರು ಪಠಾಣರು ಮರಣ ಹೊಂದಿದರು. ಈ ಭಯಂಕರವಾದ ಪ್ರಸಂಗದಿಂದ ಪಠಾಣ ಸೈನಿಕರ ಎದೆಯೊಡೆದು ನೀರಾಯಿತು. ಕಾಳಾಪಹಾಡನು ಸೈನ್ಯದ ಹಿಂಭಾಗದಲ್ಲಿದ್ದನು. ಮುಂದೆ ನಡೆದ ಈ ಕೋಲಾಹಲದ ಸುದ್ದಿಯು

ಇನ್ನೂ ಅವನಿಗೆ ಹತ್ತಿರಲಿಲ್ಲ. ಸೇನಾಪತಿಗೆ ವಸ್ತುಸ್ಥಿತಿಯನ್ನು ನಿವೇದಿಸಬೇಕೆಂದು ಇಬ್ಬರು ಅಶ್ವಾರೋಹಿಗಳಾಗಿ ಕಾಳಾಪಹಾಡನ ಕಡೆಗೆ ಸಾಗಿದರು.

ಕಾಳಾಪಹಾಡನು ಸೈನ್ಯದ ಹಿಂದೆ ಕುದುರೆಯನ್ನೇರಿ ಸಾಗಿದ್ದನು. ತನ್ನ ಸೈನ್ಯವು ಬೇಗನೆ ಸೇತುವೆಯ ಮೇಲಿಂದ ನದಿಯನ್ನು ದಾಟುವದೆಂದೂ, ಅನಂತರದಲ್ಲಿ ಭುವನೇಶ್ವರವನ್ನು ನಾಶಗೊಳಿಸುವೆನೆಂದೂ ಅವನು ಎಣಿಕೆ ಹಾಕುತ್ತ ನಡೆದಿದ್ದನು. ಅಷ್ಟರಲ್ಲಿ ಒಬ್ಬ ರಾಹುತನು ಅಲ್ಲಿಗೆ ಬಂದು ಕಾಳಾಪಹಾಡನಿಗೆ ನಮಸ್ಕರಿಸಿ, ಒಂದು ಪತ್ರವನ್ನು ಅವನ ಕೈಯಲ್ಲಿ ಕೊಟ್ಟನು. ಕಾಳಾಪಹಾಡನು ಪತ್ರವನ್ನೋದಲಾರಂಭಿಸಿದನು:

"ರಣವಿಕ್ರಮ ಕಾಳಾಪಹಾಡ ಸೇನಾಪತಿಗಳಿಗೆ—

ನೀವು ಭುವನೇಶ್ವರದ ಮೇಲೆ ದಂಡೆತ್ತಿ ಹೊರಟಿರುವಿರಷ್ಟೆ? ನನ್ನ ಸಹಾಯವಿಲ್ಲದಿದ್ದರೆ ನಿಮಗೆ ಇನ್ನು ಮೇಲೆ ವಿಜಯವು ದೊರೆಯಲಾರದು. ಉತ್ಕಲದೇಶದ ದಕ್ಷಿಣಭಾಗವನ್ನು ನನ್ನ ಸ್ವಾಧೀನದಲ್ಲಿ ಕೊಡುವಂತಿದ್ದರೆ ಮಾತ್ರ ನಿಮಗೆ ಬೇಕಾದ ಹಾಗೆ ನೆರವಾಗಲಿಕ್ಕೆ ನನ್ನ ಸಿದ್ಧತೆಯಿರುವದು.

ಗದಾಧರ ಸೇನಾಪತಿಯು ನನ್ನ ವಶದಲ್ಲಿ ಸೈನ್ಯದ ಬಹು ಭಾಗವನ್ನು ಕೊಟ್ಟಿರುವನು. ಅಗ್ನಿಗೋಲಕ ಯಂತ್ರಗಳಾದರೂ ನನ್ನ ಸ್ವಾಧೀನದಲ್ಲೇ ಇರುವವು. ನೀವು ನನ್ನ ಅಭಿಲಾಷೆಯನ್ನು ಪೂರ್ತಿಗೊಳಿಸುವಂತಿದ್ದರೆ ಅದರಂತೆ ತಿಳಿಸಬೇಕು. ನಾನು ಸೈನ್ಯವನ್ನು ಯುದ್ಧಕ್ಕೆ ಹಚ್ಚದೆ, ನಿಮ್ಮನ್ನು ಭುವನೇಶ್ವರದ ಕೋಟೆಯಲ್ಲಿ ತೆಗೆದುಕೊಳ್ಳುವೆನು.

ನನ್ನ ತೀರ್ಥರೂಪರವರಿಂದ ಆಗತಕ್ಕಷ್ಟು ಸಹಾಯವಾಗದ್ದರಿಂದ ನೀವು ಅವರ ಮೇಲೆ ಸಿಟ್ಟಾಗಿ, ಅವರಿಗೆ ರಾಜ್ಯವೀಯಲಿಲ್ಲೆಂಬಂತೆ ತೋರುವದು. ನಾನು ನಿಮಗೆ ಒಳಿತಾಗಿ ನೆರವಾಗುವೆನು. ನನ್ನ ಮಾತಿನ ಅನುಭವವು ನಿಮಗೆ ಬೇಗನೆ ಕಂಡುಬರುವದು. ನೀವು ಓರಿಸಾದ ದಕ್ಷಿಣ ಭಾಗವನ್ನು ನನ್ನ ಸ್ವಾಧೀನಕ್ಕೆ ಕೊಡುವಂತಿದ್ದರೆ ಮಾತ್ರ ನಿಮಗೆ ನೆರವಾಗುವ ಇಚ್ಛೆಯುಳ್ಳವನಾಗಿರುವೆನು. ಫಲಾಪೇಕ್ಷೆಯಿಲ್ಲದೆ ಒಬ್ಬರಿಗೆ ಮತ್ತೊಬ್ಬರು ನೆರವಾಗುತ್ತಿರುವದಿಲ್ಲವೆಂಬ ನಿಯಮ

ವನ್ನು ಲಕ್ಷ್ಯದಲ್ಲಿ ತಂದು ನನ್ನ ಪತ್ರಕ್ಕೆ ಉತ್ತರವೀಯಬೇಕು.

ನೀವು ನನ್ನ ಇಚ್ಛೆಯಂತೆ ನಡೆಯದಿದ್ದರೆ ಮುಂದೆ ವಿಜಯವು ದೊರೆಯುವದೊತ್ತಟ್ಟಿಗುಳಿದು, ಹಿಂದಿನ ಗೆಲವಿನಿಂದಾದ ಪ್ರಾಪ್ತಿಗೆ ಸಹ ಎರವಾಗಿ, ಗಂಡಾಂತರದಲ್ಲಿ ಬೀಳಬೇಕಾಗುವದೆಂಬ ವಸ್ತುಸ್ಥಿತಿಯನ್ನಾದರೂ ನಿಮಗೆ ನಿವೇದಿಸದಿರಲಾರೆನು. ಸಾರಾಸಾರ ವಿಚಾರಮಾಡಿ ಪ್ರತ್ಯುತ್ತರವೀಯಬೇಕು.

ತಮ್ಮ ಸ್ನೇಹಾಭಿಲಾಷಿ,
ಹರಿಕೀರ್ತನಸೇನ''

ಹರಿಕೀರ್ತನನ ಹೃದಯವು ಎಷ್ಟು ನೀಚವಾದದ್ದಿತ್ತೆಂಬದು ಅವನ ಪತ್ರದೊಳಗಿನ ಸಂಗತಿಗಳ ಮೇಲಿಂದ ವ್ಯಕ್ತವಾಗದಿರದು. ಗದಾಧರನು ಅವನಿಂದ ಹೆಚ್ಚಿನ ನೆರವು ದೊರೆಯುವದೆಂಬಾಶೆಯಿಂದ ತನ್ನ ಸೈನ್ಯದ ಆಧಿಪತ್ಯವನ್ನು ಅವನಿಗೆ ಕೊಟ್ಟಿದ್ದಿಲ್ಲ; ಉತ್ಕಲದ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಸೇನಾಧಿಪತ್ಯವು ಉತ್ಕಲವಾಸಿಯ ಕಡೆಗೇ ಇದ್ದರೆ ಜನರಲ್ಲಿ ವಿಶ್ವಾಸವು ಹುಟ್ಟುವದೆಂದು ಯೋಚಿಸಿ, ಗದಾಧರನು ಹರಿಕೀರ್ತನನನ್ನು ಮುಖ್ಯಸ್ಥನನ್ನಾಗಿ ಮಾಡಿದ್ದನು. ಕೈಯಲ್ಲಿ ಸೈನ್ಯವೂ ಶಸ್ತ್ರಾಸ್ತ್ರಗಳೂ ದೊರೆತ ಸಮಯದಲ್ಲಿ ಶತ್ರುಗಳಿಗೆ ನೆರವಾದರೆ ಅವರಿಂದ ಚನ್ನಾಗಿ ಫಲವು ದೊರೆಯುವದೆಂದು ಹಂಚಿಕೆಮಾಡಿ, ಹರಿಕೀರ್ತನನು ಕಾಳಾಪಹಾಡನ ಕಡೆಗೆ ತನ್ನ ಅಭಿಪ್ರಾಯ ಪತ್ರಿಕೆಯನ್ನು ಕಳುಹಿಸಿದ್ದನು. ದೇಶದ್ರೋಹ-ರಾಜದ್ರೋಹಗಳ ಮಾತು ಒತ್ತಟ್ಟಿಗಿರಲಿ; ನೆರೆನಂಬಿ ತನ್ನ ಕೈಕೆಳಗಿನ ಸೈನ್ಯದ ಬಹು ಭಾಗವನ್ನು ಕೊಟ್ಟು, ಸ್ವಾತಂತ್ರ್ಯ ಸಂಗ್ರಾಮದ ಸರ್ವಭಾರವನ್ನೊಪ್ಪಿಸಿ ನಿಶ್ಚಿಂತನಾಗಿ ಬೈಲಿಗೆಬಿದ್ದು ಶತ್ರುಗಳೊಡನೆ ಹೋರಾಡತೊಡಗಿದ ಗದಾಧರನ-ಅನುಪಮ ಸ್ವಾತಂತ್ರ್ಯಪ್ರೇಮಿಯ-ಅತುಲನೀಯ ಸ್ವಾರ್ಥತ್ಯಾಗಿಯ-ಕುತ್ತಿಗೆಯನ್ನು ಕೊಯ್ಯಲುಪಕ್ರಮಿಸಿದ ಹರಿಕೀರ್ತನಿಗಿಂತ ನೀಚಶಿಖಾಮಣಿಗಳು ಜಗತ್ತಿನಲ್ಲಿ ಮತ್ತಾರಾದರೂ ಇರಬಹುದೆ?. ವಚನಭ್ರಷ್ಟತೆ ವಿಶ್ವಾಸಘಾತ ದೇಶದ್ರೋಹ ಧರ್ಮದ್ರೋಹ ಮೊದಲಾದ ಮಹಾಪಾತಕಗಳು ಒಬ್ಬಳಿಯಾಗಿ ಕೂಡಿದ ಮೇಲೆ ಆ ವ್ಯಕ್ತಿಯಿಂದ

ಎಂತಹ ಭೀಷಣ ಕೃತಿಗಳು ಘಟಿಸಲಿಕ್ಕಿಲ್ಲ?

ಕಾಳಾಪಹಾಡನು ಹರಿಕೀರ್ತನನ ಪತ್ರವನ್ನೋದಿದ ಕೂಡಲೆ ಅತಿಶಯವಾಗಿ ಸಂತಪ್ತನಾದನು. ಜನಾರ್ದನನಂತೆ ಅವನ ಮಗನಾದರೂ ಕುಲಾಂಗಾರನಿರುವನೆಂದು ಕಾಳಾಪಹಾಡನು ತಿಳಿದನು. ಹಿಂದುಗಳ ಸ್ವಾತಂತ್ರ್ಯಹರಣಕ್ಕಾಗಿ ಹಿಂದುಗಳೇ ಸಾಹಸ ಮಾಡುತ್ತಿರುವದನ್ನು ನೋಡಿ ಅವನಿಗೆ ಬಹಳೇ ಖೇದವೆನಿಸಿತು. ಸ್ವಜನಾಂಗವನ್ನೂ ಸ್ವದೇಶವನ್ನೂ ಸ್ವಧರ್ಮವನ್ನೂ ಅಧಃಪಾತಗೊಳಿಸಿ, ತಮ್ಮ ಸ್ವಾರ್ಥವನ್ನು ಸಾಧಿಸಿಕೊಳ್ಳುವ ಹರಿಕೀರ್ತನನಂತಹ ಜನರನ್ನು ಮೊದಲು ನಾಶಗೊಳಿಸಬೇಕೆಂದು ಅವನು ನಿಶ್ಚಯಿಸಿದನು. ಕಾಳಾಪಹಾಡನು ಮುಸಲಮಾನಧರ್ಮವನ್ನು ಸ್ವಿಕರಿಸಿದ್ದರೂ ಅವನ ರಕ್ತವು ಅಚ್ಚ ಹಿಂದುಧರ್ಮದ್ದಿತ್ತು. ಕಟ್ಟಾಭಿಮಾನಿಯೂ ಈರ್ಷೆಯುವನೂ ಆದ ಅವನು ತನ್ನ ಅಪಮಾನದ ಸೇಡನ್ನು ತೀರಿಸಿಕೊಳ್ಳುವದಕ್ಕಾಗಿ ಅತ್ಯಂತ ಭಯಂಕರವಾದ ಕೃತ್ಯವನ್ನು ಮಾಡಲಿಕ್ಕೆ ಸಜ್ಜಾಗಿದ್ದನು. ಸಮರಾಂಗಣದಲ್ಲಿ ಸಾವಿರಾರು ಜನರನ್ನು ಕೊಲ್ಲುವಾಗ ಅವನ ಅಂತಃಕರಣವು ದ್ರವಿಸುತ್ತಿರಲಿಲ್ಲ. ವಚನಭ್ರಷ್ಟತೆ, ವಿಶ್ವಾಸಘಾತ, ದೇಶದ್ರೋಹ, ಧರ್ಮದ್ರೋಹ ಮೊದಲಾದ ಗುಣಗಳುಳ್ಳ ಜನರನ್ನು ಕಂಡರೆ ಮಾತ್ರ ಅವನು ಸೇರುತ್ತಿದ್ದಿಲ್ಲ. ಸ್ವಾರ್ಥಸಾಧನೆಗಾಗಿ ಅಂತಹ ಜನರ ನೆರವನ್ನಾದರೂ ಅವನು ಬಯಸುತ್ತಿರಲಿಲ್ಲ. ಪತ್ರವನ್ನೋದಿದ ಮೇಲೆ ಅವನು ಹರಿಕೀರ್ತನನ ದೂತನನ್ನು ಕುರಿತು:—"ನಿನ್ನ ಒಡೆಯನು ಈಗ ಎಲ್ಲಿರುವನು?"

"ಭುವನೇಶ್ವರದಲ್ಲಿ."

"ಅವನ ಬಳಿಯಲ್ಲಿ ಎಷ್ಟು ಸೈನ್ಯವಿರುವದು?"

"ಇಪ್ಪತ್ತೈದು ಸಾವಿರ ಸೈನ್ಯವಿದೆ. ಸೇನಾಪತಿಗಳು ನಿಮ್ಮ ಮಾರ್ಗಪ್ರತೀಕ್ಷೆ ಮಾಡುತ್ತಿರುವರು."

"ಈಗ ನಾನು ಈ ಪತ್ರದ ವಿಷಯವಾಗಿ ಏನೂ ಉತ್ತರವೀಯಲಾರೆನು; ಕಾರ್ಯಾನಂತರದಲ್ಲಿ ಅದರ ಬಗ್ಗೆ ಮಾತಾಡುವೆನು. ಇಷ್ಟೇ ಸಂಗತಿಯನ್ನು ನಿನ್ನ ಒಡೆಯನಿಗೆ ತಿಳಿಸು."

ಹರಿಕೀರ್ತನನ ದೂತನು ಹೊರಟು ಹೋದ ಮೇಲೆ ಇಬ್ಬರು ರಾವುತರು ಕಾಳಾಪಹಾಡನ ಬಳಿಗೆ ಬಂದು—"ಅಸಂಖ್ಯ ಬಾಣಗಳು ಬಂದು ನಮ್ಮ ಸೈನ್ಯವನ್ನು ನಾಶಗೊಳಿಸುತ್ತಲಿರುವವು. ತುಬಾಕಿಯ ಸೈನ್ಯದವರೆಷ್ಟೋ ಜನರು ಮರಣ ಹೊಂದಿದರು. ಈ ಅಕಲ್ಪಿತವಾದ ಅಪಘಾತದಿಂದ ಎಲ್ಲ ಸೈನಿಕರು ಎದೆಯೊಡೆದಿರುವರು. ಸೇತುವೆಯ ಮೇಲೆ ಹೋಗಲಿಕ್ಕೆ ಯಾರೂ ಮುಂದಾಗಲೊಲ್ಲರು."

ರಾವುತರಲ್ಲೊಬ್ಬನು ಹೀಗೆ ನುಡಿದ ಕೂಡಲೆ ಕಾಳಾಪಹಾಡನು ತುಬಾಕಿಯ ಸೈನ್ಯವನ್ನು ಹಿಂದೆ ಕರೆಯಿಸಿಕೊಂಡು, ಗದಾಧರನ ಸೈನ್ಯವು ಮರೆಯಾಗಿದ್ದ ತೆಗ್ಗುಗಳ ಹಿಮ್ಮಗ್ಗಲಿಗೆ ಬಂದನು. ಆ ಸ್ಥಳದಲ್ಲಿ ಮರೆಯಾಗಿದ್ದ ಸೈನಿಕರೆಲ್ಲ ಚನ್ನಾಗಿ ಕಾಣುತ್ತಿದ್ದರು. ಕೂಡಲೆ ಅವನು ಶತ್ರುಸೈನ್ಯದ ಮೇಲೆ ಗುಂಡುಗಳನ್ನು ಹಾರಿಸಲಿಕ್ಕೆ ತನ್ನ ಸೈನಿಕರಿಗೆ ಆಜ್ಞಾಪಿಸಿದನು. ಈಗ ಮಾತ್ರ ಗದಾಧರನ ಹಂಚಿಕೆಯೆಲ್ಲ ಹಾಳಾಯಿತು. ಕಾಳಾಪಹಾಡನ ಗುಂಡುಗಳ ಹೊಡತದಿಂದ ಅವನ ಸೈನಿಕರು ಕುಳಿತ ತೆಗ್ಗಿನಲ್ಲಿಯೆ ಮರಣಹೊಂದತೊಡಗಿದರು. ಆಗ ಗದಾಧರನು ಉಳಿದ ಸೈನ್ಯವನ್ನು ತೆಗೆದುಕೊಂಡು ಸೇತುವೆಯ ಬಳಿಯಲ್ಲಿ ಹೋಗಿ ಶತ್ರುಗಳೊಡನೆ ಸಮರಸನ್ನದ್ಧನಾದನು. ವರುಣಾತೀರದಲ್ಲಿ ಕಾಳಾಪಹಾಡನ ಸೈನ್ಯಕ್ಕೆ ಎದುರಾಗಬೇಕಾಗಿರುವದರಿಂದ ಎರಡು ಸಾವಿರ ಶೂರ ಸೈನಿಕರನ್ನು ಕಳಿಸಬೇಕೆಂದು ಗದಾಧರನು ಹರಿಕೀರ್ತನನಿಗೆ ತಿಳಿಸಿದನು. ತನ್ನ ಆಜ್ಞೆಯಂತೆ ಸೈನ್ಯವು ಬೇಗನೆ ಬರಬಹುದೆಂದು ಅವನು ತಿಳಿದಿದ್ದನು. ಶತ್ರುಸೈನ್ಯವು ಸೇತುವೆಯ ಮೇಲೆ ಹೊರಟ ಕೂಡಲೆ ಒಬ್ಬ ಸೈನಿಕನು ಗದಾಧರನ ಬಳಿಗೆ ಬಂದು—"ಕೋಟೆಯ ಹಾಗು ನಗರದ ರಕ್ಷಣೆಗಾಗಿ ಸೈನ್ಯವು ಹೆಚ್ಚಾಗಿದ್ದಷ್ಟು ಒಳಿತು. ಆದ್ದರಿಂದ ಇದ್ದ ಸೈನ್ಯವನ್ನು ಬೇರೆ ಕಡೆಗೆ ಕಳುಹಿಸಲಿಕ್ಕೆ ಸಾಧ್ಯವಿಲ್ಲವೆಂದು ಹರಿಕೀರ್ತನ ಸೇನಾಪತಿಗಳು ಹೇಳಿದರು" ಎಂದು ತಿಳಿಸಿದನು. ಅಗ್ನಿಗೋಲಕ ಯಂತ್ರಗಳ ಸಲುವಾಗಿಯೂ ಸೈನ್ಯದ ಸಲುವಾಗಿಯೂ ಒಂದೇ ಬಗೆಯ ಉತ್ತರ ಬಂದದ್ದರಿಂದ ಹರಿಕೀರ್ತನನ ಕೃಷ್ಣಹೃದಯದ ಚಿತ್ರವು ಗದಾಧರನಿಗೆ ಸ್ಪಷ್ಟ

ವಾಗಿ ಕಾಣಲಾರಂಭಿಸಿತು. ತನ್ನ ಸಹಾಯಕ್ಕೆ ಸೈನ್ಯವು ಬರುವದೆಂಬ ನಂಬಿಗೆಯಿಂದ ಅವನು ಬಳಿಯಲ್ಲಿದ್ದ ಅಲ್ಪ ಸ್ವಲ್ಪ ಸೈನ್ಯದೊಡನೆ ಸಂಗ್ರಾಮವನ್ನು ಪ್ರಾರಂಭಿಸಬೇಕೆಂದು ಯೋಚಿಸಿದ್ದನು. ಸೈನ್ಯವು ಬರುವದಿಲ್ಲೆಂಬ ಸಂಗತಿಯು ಮೊದಲೇ ಗೊತ್ತಾಗಿದ್ದರೆ ಅವನು ಕೋಟೆಯಲ್ಲಿ ಸೇರಿ ತನ್ನ ಕಡೆಯಿಂದ ನೀಗಿದಷ್ಟು ಕಾರ್ಯವನ್ನು ಮಾಡುತ್ತಿದ್ದನು. ಕೈಗೆ ಕ್ಕೆ ಹತ್ತುವ ಸಮಯದಲ್ಲಿ ಹರಿಕೀರ್ತನನ ಸಂದೇಶ ಬಂದದ್ದರಿಂದ ಅವನು ನಿರುಪಾಯಗೊಂಡು, ತನ್ನ ಕ್ಷಾತ್ರವೃತ್ತಿಗನು ಗುಣವಾಗಿ ಶತ್ರುಗಳಿಗೆದುರಾದನು. ಮಾರ್ಗದಲ್ಲಿಯೇ ಶತ್ರುಗಳನ್ನು ಹಣ್ಣುಮಾಡಿ, ಅನಂತರದಲ್ಲಿ ಕೋಟೆಯನ್ನು ಹೊಕ್ಕು ಅದನ್ನು ನಾವು ಶೇಷಗೊಳಿಸಬೇಕೆಂದು ಅವನ ದೀರ್ಘವಾದ ಆಲೋಚನೆಯಿತ್ತು; ಆದರೆ ವಿಶ್ವಾಸಘಾತಕಿಯಾದ ಹರಿಕೀರ್ತನನು ಅವನ ಕಾರಸ್ಥಾನವನ್ನು ಹಾಳು ಮಾಡಿ ಬಿಟ್ಟನು!

ಕಾಳಾಪಹಾಡನ ಮಹಾಸಾಗರಸದೃಶವಾದ ಸೈನ್ಯವು ಗದಾಧರನ ಸೈನ್ಯವನ್ನು ಕೆಲವು ನಿಮಿಷಗಳಲ್ಲಿ ನಾಶಗೊಳಿಸಿತು. ಕಡೆಗೆ ಗದಾಧರನೊಬ್ಬನೆ ಆ ಸೈನ್ಯಕ್ಕೆ ಎದುರಾಗಿ ನಿಂತನು. ಅವನು ಕೆರಳಿದ ಕೇಸರಿಯಂತೆ ಶತ್ರುಗಳನ್ನು ನಾಶಗೊಳಿಸತೊಡಗಿದ್ದನು. ಪಠಾಣರು ಅವನನ್ನು ನಾಶಗೊಳಿಸಬೇಕೆಂದು ಯತ್ನಿಸುವಷ್ಟರಲ್ಲಿ ಕಾಳಾಪಹಾಡನು ತನ್ನ ಜನರನ್ನು ಹಿಂದೆ ಕರೆಯಿಸಿಕೊಂಡನು. ಅನಂತರದಲ್ಲಿ ಅವನು ಕುದುರೆಯನ್ನಿಳಿದು, ಕಾಲುನಡಿಗೆಯಿಂದ ಗದಾಧರನ ಬಳಿಗೆ ಹೋಗಿ ಅವನನ್ನು ಗಟ್ಟಿಯಾಗಿ ಆಲಂಗಿಸಿದನು! ಈ ದೃಶ್ಯವನ್ನು ನೋಡಿ ಕಾಳಾಪಹಾಡನ ಮೈನೆಳಲಿನಂತಿದ್ದ ಬೂನಾನು ವಿಸ್ಮಿತನಾದನು. ಈ ಸಮಯದಲ್ಲಿ ಪಠಾಣ ಸೈನಿಕರೊಬ್ಬರೂ ಅಲ್ಲಿ ಇದ್ದಿಲ್ಲ. ಅವರು ತಮ್ಮ ಸೇನಾಪತಿಯ ಆಜ್ಞೆಯ ಮೇರೆಗೆ ದೂರ ಹೊರಟು ಹೋಗಿದ್ದರು. ಕಾಳಾಪಹಾಡನು ಶತ್ರುಭಾವವನ್ನು ಮರೆತು, ಗದಾಧರನನ್ನು ಪ್ರೇಮದಿಂದ ಅಪ್ಪಿಕೊಂಡದ್ದು ಬೂನಾನಿಗೆ ಪರಮಾಶ್ಚರ್ಯವನ್ನುಂಟುಮಾಡಿತ್ತು.

“ಗದಾಧರ! ಸ್ವಜನರ ಸುಖಸ್ವಾತಂತ್ರ್ಯಗಳಿಗೆ ನೀನು ತೋರಿಸಿದ

ಶೌರ್ಯ-ಸಾಹಸಗಳು ಅವರ್ಣನೀಯವಿರುವವು. ನಿನ್ನಂತಹ ಉದಾತ್ತ ವಿಚಾರಿಗಳನ್ನು ನಾನು ಎಂದೂ ಕಂಡಿಲ್ಲ. ನಿನ್ನ ಭೆಟ್ಟಿಯಿಂದ ನನಗೆ ಪರಮಾನಂದವಾಗಿದೆ.''

''ಕಾಲಾಚಾಂದ, ಇದೇ ಕೊನೆಯ ಭೆಟ್ಟಿಯು.''

''ಅದೇಕೆ?''

''ಇನ್ನು ಜೀವಿಸಿ ಉಪಯೋಗವೇನು? ಸ್ವದೇಶದ್ರೋಹಿಗಳ ನೀಚತನದಿಂದ ನನ್ನ ಯತ್ನಗಳೆಲ್ಲವೂ ನಿರರ್ಥಕವಾದವು. ಅಂದಮೇಲೆ ಇನ್ನು ಯಾವ ಉದ್ದೇಶದಿಂದ ಬಾಳಬೇಕು?''

''ಇಷ್ಟುದಿನಗಳ ವರೆಗೆ ಬದುಕಲಿಕ್ಕೆ ಉದ್ದೇಶವಿತ್ತೇನು?''

''ಅಂತೆಯೆ ಬದುಕಿಕೊಂಡಿರುವೆನು. ಇನ್ನು ನಮ್ಮಿರ್ವರಲ್ಲಿ ಪ್ರಾಣಾಂತ್ಯದ ವರೆಗೆ ಯುದ್ಧವು ನಡೆಯುವದಿರುವದು. ಇಬ್ಬರಲ್ಲಿ ಯಾರೊಬ್ಬರಾದರೂ ಸಾಯುವದು ನಿಶ್ಚಯವು.''

''ನೀನು ಸಾಯುವಿಯೊ, ನಾನು ಸಾಯುವೆನೊ?''

''ನಾನು''

''ಗದಾಧರ'' ಕಾಳಾಪಹಾಡನು ಗದ್ಗದ ಕಂಠದಿಂದ:—''ನೀನು ಜೀವದಿಂದಿರು. ನೀನು ಬದುಕಿ ಉಳಿದರೆ ಹಿಂದುಗಳ ಧರ್ಮಸ್ವಾತಂತ್ರ್ಯದ ರಕ್ಷಣೆಯಾಗುವದು. ನೀನು ಉಜ್ವಲ ರಾಷ್ಟ್ರಧರ್ಮದ ತೇಜಸ್ವಿಯಾದ ಹಿಂದುವಿರುವದರಿಂದ ನೀನು ಜೀವದಿಂದಿರು.''

''ನೀನು ಹಿಂದುವಲ್ಲವೆ? ನೀನು ಬದುಕಿದ್ದರೆ ಹಿಂದು ಧರ್ಮದ ರಕ್ಷಣೆಯಾಗುವದಿಲ್ಲವೆ? ನೀನು ಮನಸ್ಸು ಮಾಡಿದರೆ ಯಾವದು ತಾನೆ ಅಸಾಧ್ಯವು? ನೀನು ಜಾತಿಬಾಹ್ಯನಾಗಿದ್ದರೂ ನೀನು ಹಿಂದುವಿರುವೆ. ನಿನ್ನ ಮಾತೃಭೂಮಿಯು ಹಿಂದುದೇಶವಾಗಿರುವದು. ನೀನು ನಿನ್ನ ಅಪಮಾನದ ಸೇಡುತೀರಿಸಿಕೊಳ್ಳಬೇಕೆಂದೇ ಇಷ್ಟು ದೀರ್ಘ ಸಾಹಸ ಮಾಡಿರುವೆ. ಅಂತು ಸ್ವಜನರಿಗೆ ಸ್ವಜನರೇ ಮೃತ್ಯುವಾಗಿರುವರು. ದೈವದ ಲೀಲೆಯು ಅಗಾಧವಾದದ್ದಿರುವದು!''

''ಗದಾಧರ, ನಾನು ಹಿಂದುವಲ್ಲ. ಯಜ್ಞೋಪವೀತವನ್ನು ಹರಿ

ದೊಗೆದು ಮುಹಮ್ಮದೀಯ ಧರ್ಮದ ದೀಕ್ಷೆಯನ್ನು ತೆಗೆದುಕೊಂಡ ಮೇಲೆ ನನ್ನಲ್ಲಿ ಹಿಂದುತ್ವವು ಹೇಗೆ ಉಳಿಯುವದು?''

"ನಿನ್ನ ವಿಚಾರಗಳು ಅಪ್ರಶಸ್ತವಾದವುಗಳಿರುವವು. ಮುಹಮ್ಮದೀ ಧರ್ಮದ ದೀಕ್ಷೆ ತೆಗೆದುಕೊಂಡಿದ್ದರೂ ನೀನು ಹಿಂದುವಿರುವೆ. ನಿನ್ನ ಜನ್ಮ ಭೂಮಿಯು ಹಿಂದುಸ್ತಾನವಿರುವದು. ಕಾಲಾಚಾಂದರಾಯ, ಚೆನ್ನಾಗಿ ವಿಚಾರಿಸಿ ನೋಡು''

"ಹಿಂದುಗಳು ನನ್ನನ್ನು ಭಯಂಕರವಾದ ರೀತಿಯಿಂದ ಅಪಮಾನ ಗೊಳಿಸಿ, ನನ್ನ ಆಯುಷ್ಯವನ್ನು ದುಃಖಮಯ ಮಾಡಿರುವರು. ನನ್ನ ಮನಶ್ಶಾಂತಿಯೂ ದೈವಿಕಭಾವನೆಗಳೂ ನಾಶವಾಗಲಿಕ್ಕೆ ಹಿಂದುಗಳೇ ಕಾರಣರಾಗಿರುವರು. ನಾನು ಅವರ ಸೇಡು ತೀರಿಸಿಕೊಂಡೇ ತೀರೆನು.''

"ಇನ್ನೂ ನಿನ್ನ ಸೇಡುತೀರಿಸಿಕೊಳ್ಳುವ ಭಾವನೆಗಳು ಶಾಂತ ವಾಗಿಲ್ಲವೇನು?''

"ಜಗನ್ನಾಥಪುರಿಯಲ್ಲಿ ನನ್ನ ಅಪಮಾನವಾಗಿರುವದು. ಹಿಂದು ಗಳು ಯಾವ ದೇವರ ದರ್ಶನಕ್ಕಾಗಿ ನನ್ನನ್ನು ಪ್ರತಿಬಂಧಗೊಳಿಸಿದರೋ, ಆ ದೇವಮಂದಿರಗಳನ್ನು ವಿಧ್ವಂಸಗೊಳಿಸುವದು ನನ್ನ ಕರ್ತವ್ಯವಾಗಿರು ವದು. ನಾನು ಈಗ ಎಷ್ಟೋ ದೇವ ಮಂದಿರಗಳನ್ನೂ, ಮೂರ್ತಿ ಗಳನ್ನೂ ನಾಶಗೊಳಿಸಿರುವೆನು. ಭುವನೇಶ್ವರ ಜಗನ್ನಾಥಪುರಿಯೊಳ ಗಿನ ದೇವಮೂರ್ತಿಗಳನ್ನು ನಾಶಗೊಳಿಸಿ, ಅಲ್ಲಿಯ ಹಿಂದುಗಳಿಗೆ ಬಲಾ ತ್ಕಾರದಿಂದ ಇಸ್ಲಾಮಿಯ ಧರ್ಮದೀಕ್ಷೆ ಕೊಡಿಸಬೇಕೆಂದು ನನ್ನ ಮಹತ್ವಾಕಾಂಕ್ಷೆಯಿರುವದು. ಹಿಂದುಗಳ ಪವಿತ್ರ ಕ್ಷೇತ್ರವಾದ ಪುರಿ ಯೊಳಗಿನ ಎಲ್ಲ ದೇವಮೂರ್ತಿಗಳನ್ನೂ ಒಡೆದು, ಜಗನ್ನಾಥ ಪ್ರಭು ವನ್ನು ಸಮುದ್ರದಲ್ಲಿ ಹಾಕಿದೆನೆಂದರೆ ನನ್ನ ಭಯಂಕರ ಸೇಡಿನ ಪರ್ಯವ ಸಾನವಾಯಿತು.''

"ನಾನು ಜೀವದಿಂದಿರುವವರೆಗೆ ನಿನ್ನ ಈ ದುರಾಕಾಂಕ್ಷೆಯು ಪೂರ್ಣವಾಗಲಾರದು.'' ಹೀಗೆಂದು ಗದಾಧರನು ತನ್ನ ಖಡ್ಗವನ್ನು ಒರೆ ಯಿಂದ ಹಿರಿದು:—"ಕಾಲಾಚಾಂದರಾಯ, ಯುದ್ಧಕ್ಕೆ ಅಣಿಯಾಗು.

ಇಂದು ನಮ್ಮಿಬ್ಬರಲ್ಲಿ ಯಾರೊಬ್ಬರ ಕೊಲೆಯಾಗಿ ಹೋಗಲಿ!"

ಕಾಲಾಚಾಂದ-ಗದಾಧರರಲ್ಲಿ ನಿಕರವಾದ ಕಾಳಗವು ಪ್ರಾರಂಭವಾಯಿತು. ಇಬ್ಬರೂ ನಾಮಾಂಕಿತ ಕಲಿಗಳು. ಬೂನಾನು ಅವರ ಯುದ್ಧ ಚಾಪಲ್ಯವನ್ನು ನೋಡಿ ದಂಗು ಬಡೆದು ನಿಂತಿದ್ದನು. ಯುದ್ಧವು ಒಳ್ಳೆಯ ಭರಕ್ಕೆ ಬಂದಾಗ ಕಾಲಾಚಾಂದನ ಲಕ್ಷ್ಯವು ಬೇರೆ ಕಡೆಗೆ ಹೋಯಿತು. ಈ ಸಂಧಿಯನ್ನು ಸಾಧಿಸಿ, ಗದಾಧರನು ಅವನ ಮೇಲೆ ಖಡ್ಗಪ್ರಹಾರ ಮಾಡುವದಕ್ಕೆ ಕೈ ಎತ್ತಿದನು. ಬೂನಾನು ಚಿಟ್ಟನೆ ಚೀರಿದನು. ಅಷ್ಟರಲ್ಲಿ ನದಿಯ ಕಡೆಯಿಂದ ಒಂದು ತುಬಾಕಿಯ ಗುಂಡು ಸುಯ್ಗುಡುತ್ತ ಬಂದು ಗದಾಧರನ ಹೃದಯವನ್ನು ಪ್ರವೇಶಿಸಿತು! ಕೂಡಲೆ ಅವನ ಕೈಯೊಳಗಿನ ಖಡ್ಗವು ನೆಲಕ್ಕೆ ಬಿತ್ತು. ಅವನಾದರೂ ಬೀಳತಕ್ಕವನು; ಆದರೆ ಕಾಲಾಚಾಂದನು ಸಾವಧಗೊಂಡು ಅವನನ್ನು ಹಿಡಿದು ನೆಲದ ಮೇಲೆ ಮಲಗಿಸಿದನು ಅನಂತರದಲ್ಲಿ ಅವನು ತನ್ನ ಮಿತ್ರನ ಮೇಲೆ ಗುಂಡು ಹಾರಿಸಿದವನನ್ನು ಪಾರಿಪತ್ಯಗೊಳಿಸಬೇಕೆಂದು ನದಿಯ ಕಡೆಗೆ ಹೋದನು. ತನ್ನ ಸೈನಿಕನಿಂದ ಈ ಕೃತಿಯು ಘಟಿಸಿತೆಂಬದು ಅವನಿಗೆ ಗೊತ್ತಾಯಿತು. ಕೂಡಲೆ ಅವನು ಕ್ರೋಧಸಂತಪ್ತನಾಗಿ ಆ ಪಠಾಣನನ್ನು ಕಡಿದು ಚಲ್ಲಿದನು! ತರುವಾಯ ಅವನು ಗದಾಧರನ ಬಳಿಗೆ ಬಂದು—"ಗದಾಧರ!"

"ಕಾಲಾಚಾಂದರಾಯ, ನನ್ನ ಕೆಲಸವಾಯಿತು. ನಮ್ಮಿಬ್ಬರ ಸಲುವಾಗಿ ವ್ರಜಬಾಲೆಯ ಆಯುಷ್ಯವು ದುಃಖಮಯವಾಯಿತು. ಅವಳು ಸಮುದ್ರತೀರದಲ್ಲಿ ಉಷಾಸುಂದರಿಯೊಡನೆ ವಾಸವಾಗಿರುವಳು. ತನ್ನ ಪ್ರಯತ್ನಗಳು ನಿಷ್ಫಲವಾದದ್ದರಿಂದ ಅವಳು ಔದಾಸೀನ್ಯದಿಂದ ಕಾಲಹರಣ ಮಾಡುತ್ತಿರುವಳು. ನನ್ನ ಮರಣದ ಸಂಗತಿಯನ್ನು ನೀನು

ಅವಳ ಕಿವಿಯ ಮೇಲೆ ಹಾಕು. ಕಾಲಾಚಾಂದರಾಯ, ಪರಮೇಶ್ವರನ ಇಚ್ಛೆಯಿದ್ದಂತಾಗುವದು. ನೀನು ಹಿಂದುಗಳ ಅಸ್ಥಿವೈರಿಯಾಗಿ ಅನರ್ಥಗಳನ್ನು ಮಾಡಲುದ್ಯುಕ್ತನಾದದ್ದು ನೋಡಿದರೆ, ಪರಮಾತ್ಮನೇ ಕ್ಷೋಭೆಗೊಂಡಿರುವನೆನ್ನಬೇಕಾಗುವದು. ಒಳ್ಳೇದು; ನಾನು ಬರುತ್ತೇನೆ. ಬಾಲ್ಯಮಿತ್ರನಾದ ನಿನ್ನ ತೊಡೆಯ ಮೇಲೆ ಮರಣ ಹೊಂದುವ ಪ್ರಸಂಗ ಬಂದದ್ದರಿಂದ ನನಗೆ ಆನಂದವಾಗಿದೆ.''

''ಗದಾಧರ! ಗದಾಧರ!'' ಗದ್ಗದಕಂಠದಿಂದ ಕಾಲಾಚಾಂದನು ಮಾತಾಡಿಸಿದನು.

''ಜಯ ಜಗನ್ನಾಥ! ಜಯ ಜಗನ್ನಾಥ!!'' ಗದಾಧರನ ಮುಖದಿಂದ ದೇವತಾನಾಮವು ಹೊರಟ ಕೂಡಲೆ, ಅದರ ಹಿಂದೆ ಅವನ ಪ್ರಾಣಜ್ಯೋತಿಯೂ ಹೊರಟು ಹೋಯಿತು! ಉತ್ಕಲದ ಸ್ವಾತಂತ್ರ್ಯಜ್ಯೋತಿಯು ಈಗ ಪೂರ್ಣವಾಗಿ ನೊಂದಿತು! ದೀಪ ನಿರ್ವಾಣವಾಯಿತು!

ಕಾಲಾಚಾಂದನು ಮಿತ್ರನ ಮರಣದಿಂದ ಬಹು ಪರಿಯಾಗಿ ದುಃಖಿಸಿದನು. ಶೋಕಾವೇಗವು ಕಡಿಮೆಯಾದ ಮೇಲೆ ಅವನು ತನ್ನ ಕೈ-ಯಿಂದ ಚಿತೆಯನ್ನು ರಚಿಸಿ, ಗದಾಧರನ ಪ್ರೇತಕ್ಕೆ ಅಗ್ನಿಸಂಸ್ಕಾರ ಮಾಡಿದನು.



# ಪಾಪಕ್ಕೆ ಪ್ರಾಯಶ್ಚಿತ್ತ!

ಉತ್ಕಲದ ಸ್ವಾತಂತ್ರ್ಯಸಂಗ್ರಾಮದಲ್ಲಿ ಗದಾಧರನು ಮರಣಹೊಂದಿದ ಕೂಡಲೆ ದೇಶದ್ರೋಹಿಯಾದ ಹರಿಕೀರ್ತನನು ರಾಜ್ಯದಾಶೆಗಾಗಿ ಕಾಳಾಪಹಾಡನಿಗೆ ಸಹಾಯ ಮಾಡತೊಡಗಿದನು. ಶತ್ರುಗಳು ವರುಣಾನದಿಯನ್ನು ದಾಟಿ ಭುವನೇಶ್ವರವನ್ನು ಸಮೀಪಿಸಿದ್ದರೂ, ಹರಿಕೀರ್ತನನು ತಟಸ್ಥವೃತ್ತಿಯಿಂದಿದ್ದದ್ದನ್ನು ನೋಡಿ ಸತ್ಪಕ್ಷಪಾತಿಯಾದ ಕರೀಮಶಹನಿಗೆ ಅವನ ವಿಷಯದಲ್ಲಿ ಸಂದೇಹವುಂಟಾಯಿತು. ತರುವಾಯ ಅವನು ಯುದ್ಧದ ಸಿದ್ಧತೆಯಲ್ಲಿರಬೇಕೆಂದು ಹರಿಕೀರ್ತನನಿಗೆ ತಿಳಿಸಿದನು. ಕಾಳಾಪಹಾಡನಂತಹ ಬಲಾಢ್ಯ ಸೇನಾಪತಿಯೊಡನೆ ಯುದ್ಧ ಮಾಡಿ ವಿಜಯ ಸಂಪಾದನೆ ಮಾಡುವದು ಅಸಾಧ್ಯವಿದ್ದುದರಿಂದ ಅವನೊಡನೆ ಸ್ನೇಹ ಬಳೆಯಿಸುವದೇ ಯುಕ್ತವೆಂದೂ, ತಾನು ನಿಷ್ಕಾರಣವಾಗಿ ಸೈನ್ಯವನ್ನು ನಾಶಪಡಿಸಲಾರೆನೆಂದೂ ಹರಿಕೀರ್ತನನು ಕರೀಮಶಹನಿಗೆ ತಿಳಿಸಿದನು. ಕಾಳಾಪಹಾಡನ ಅಪಾರವಾದ ಸೈನ್ಯವು ಭುವನೇಶ್ವರದ ಮೇಲೆ ಬಿದ್ದಿತೆಂದರೆ ಅದು ಉಧ್ವಸ್ತವಾಗಿ ಹೋಗುವದೆಂದೂ, ಮಾರ್ಗದಲ್ಲಿಯೆ ಅವನಿಗೆ ಎದುರಾಗಿ ಕಾಳಗಮಾಡಬೇಕೆಂದೂ ಕರೀಮಶಹನು ನಿರ್ಧರಿಸಿ ನಗರದಿಂದ ಹೊರಬಿದ್ದನು. ಉತ್ಕಲದ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಅನುಕೂಲವಾಗುವದೆಂದು ತಿಳಿದು ಗದಾಧರನು ಹರಿಕೀರ್ತನನನ್ನು ಗೌರವಿಸಿ, ಅವನನ್ನು ಮುಖ್ಯ ಸೇನಾಪತಿಯನ್ನಾಗಿ ಮಾಡಿದ್ದು ಒಳಿತಾಗಲಿಲ್ಲವೆಂದು ಕರೀಮಶಹನು ತಿಳಿದುಕೊಂಡನು. ಅವನು ಗತಗೋಷ್ಠಿಯ ಬಗ್ಗೆ ಪಶ್ಚಾತ್ತಾಪಬಡುತ್ತ ಕುಳಿತುಕೊಳ್ಳುವ ಹೇಡಿಯಾಗಿರದ್ದರಿಂದ, ತನ್ನ ಕರ್ತವ್ಯವನ್ನು ಕೊನೆಗಾಣಿಸಬೇಕೆಂದು ಕಾಳಾಪಹಾಡನ ಸೈನ್ಯಕ್ಕೆ ಎದುರಾದನು.

ಕರೀಮಶಹನಲ್ಲಿ ಐದು ಸಾವಿರ ಸೈನಿಕರಿದ್ದರು. ತನ್ನ ಅಪಾರವಾದ ಸೈನ್ಯಕ್ಕೆ ಆ ಸೈನ್ಯವು ಈಡಾಗಲಾರದೆಂದೂ, ಸುಮ್ಮನೆ ಪ್ರಾಣಹಾನಿಮಾಡುವದು ಯೋಗ್ಯವಲ್ಲವೆಂದೂ ತಿಳಿದು, ಕಾಳಾಪಹಾಡನು

ಕರೀಮುಶಹನಿಗೆ ಭೆಟ್ಟಿಯಾಗಿ ಯುದ್ಧವನ್ನು ಪ್ರಾರಂಭಿಸಬಾರದೆಂದು ತಿಳಿಸಿದನು. ಕರೀಮುಶಹನು ಅವನ ಮಾತಿಗೆ ಸಮ್ಮತಿಸಲಿಲ್ಲ. ಫಲಾಪೇಕ್ಷೆಯಿಲ್ಲದೆ ಕರ್ತವ್ಯವನ್ನು ಮಾಡುವದೇ ಮನುಷ್ಯನ ನಿಜವಾದ ಧರ್ಮವೆಂದು ಅವನು ಕಾಳಾಪಹಾಡನಿಗೆ ಸ್ಪಷ್ಟವಾಗಿ ಹೇಳಿದನು. ಕರೀಮುಶಹನ ಮಾತುಗಳಿಂದ ಕಾಳಾಪಹಾಡನು ವಿಸ್ಮಿತನಾಗಿ:—"ಶಹಾಜಾದಾ ಕರೀಮುಶಹರೆ, ಉತ್ಕಲವಾಸಿಗಳಿಗೆ ಸುಖ-ಸ್ವಾತಂತ್ರ್ಯಗಳು ಬೇಸರವಾಗಿರುವಾಗ ಪರಕೀಯರಾದ ನೀವು ಅವುಗಳಿಗಾಗಿ ಏಕೆ ಯತ್ನಿಸಬೇಕು? ವಿದೇಶದವನಾದ ಗದಾಧರನು ಓರಿಸಾದ ಸೌಖ್ಯಕ್ಕಾಗಿ ಹೋರಾಡಿ ಕಡೆಗೆ ಪ್ರಾಣಕ್ಕೆ ಎರವಾದನು. ನಿಮ್ಮ ಅವಸ್ಥೆಯಾದರೂ ಅದರಂತೆಯೇ ಆಗಬಾರದೆಂಬ ಉದ್ದೇಶದಿಂದ ನಾನು ನಿಮಗೆ ಭೆಟ್ಟಿಯಾದೆನು. ಓರಿಸಾದ ಪ್ರಜೆಗಳಲ್ಲಿ ನಿಜವಾದ ದೇಶಾಭಿಮಾನವಿರುತ್ತಿದ್ದರೆ, ರಾಜ್ಯಪಿಪಾಸುವಾದ ಜನಾರ್ದನನ ಬೆನ್ನು ಹತ್ತಿ ಅವರು ಬಂಡಾಯವನ್ನೆಬ್ಬಿಸುತ್ತಿದ್ದಿಲ್ಲ. ಅಧಿಕಾರಿವರ್ಗವು ಸ್ವಾಮಿನಿಷ್ಠೆಯಿಂದಿದ್ದರೆ ಪಠಾಣಸೇನೆಯು ಉತ್ಕಲದ ಆಶೆಯನ್ನು ಬಿಟ್ಟು ಸ್ವದೇಶವನ್ನು ಸೇರಬೇಕಾಗುತ್ತಿತ್ತು. ಜನಾರ್ದನ-ಭೃಗುರಾಮ-ಹರಿಕೀರ್ತನರಂತಹ ನೀಚ ಮನೋವೃತ್ತಿಯ ಅಧಿಕಾರಿಗಳಿಂದ ದೇಶವು ಮುಳುಗುತ್ತಿರುವಾಗ, ನಿಮ್ಮಂತಹ ಒಬ್ಬಿಬ್ಬರ ಪ್ರಯತ್ನಗಳಿಗೆ ಫಲವು ದೊರೆಯುವ ಬಗೆ ಹೇಗೆ? ಹರಿಕೀರ್ತನನು ಈ ಸಂಧಿಯಲ್ಲಿ ನಿಮ್ಮನ್ನು ವಂಚಿಸದಿದ್ದರೆ ಭುವನೇಶ್ವರದ ಸಂಗ್ರಾಮದಲ್ಲಿ ವಿಜಯಸಂಪಾದನೆಯಾಗುವದೆಂದು ಹೇಳುವ ಧೈರ್ಯವು ನನಗಾಗುತ್ತಿದ್ದಿಲ್ಲ. ಈಗ ಪಠಾಣ ಸೈನ್ಯದ ಗತಿಯನ್ನು ಕುಂಠಿತಗೊಳಿಸುವ ಸಾಮರ್ಥ್ಯವು ರಾಷ್ಟ್ರಧರ್ಮಕ್ಕೆ ಹೊರತಾದ ಉತ್ಕಲವಾಸಿಗಳಲ್ಲಿಲ್ಲ. ಓರಿಸಾದ ಸ್ವಾತಂತ್ರ್ಯದೇವಿಯು ವಂಗಸುಲತಾನನಾದ ಸಲಿಮನಶಹನ ಹಸ್ತಗತವಾದಳೆಂದು ತಿಳಿಯಿರಿ. ನನ್ನ ಲಕ್ಷಾವಧಿಯಾದ ಸೈನ್ಯಕ್ಕೆ ಎದುರಾಗುವ ಸಾಹಸವನ್ನು ಮಾಡದೆ ಇಲ್ಲಿಂದ ಹೊರಟು ಹೋಗುವದು ಯೋಗ್ಯವೆಂದು ನನಗೆ ತೋರುವದು. ಸ್ವಲ್ಪ ವಿಚಾರಿಸಿ ನೋಡಿದರೆ ನಿಮಗಾದರೂ ನನ್ನ ಮಾತಿನ ಸತ್ಯತೆಯು ಕಂಡುಬರುವದು."

"ಸೇನಾಪತಿಗಳೇ, ನಿಮ್ಮ ಸೈನ್ಯವು ದೊಡ್ಡದಿರುವದೆಂಬದು ನಿಜವು. ನಿಮ್ಮೊಡನೆ ಯುದ್ಧಮಾಡಿದರೆ ನಾನು ನನ್ನ ಸೈನ್ಯ ಸಹಿತವಾಗಿ ನಾಶಹೊಂದುವೆನೆಂಬದೂ ನಿಚ್ಚಳವಾಗಿ ಕಾಣತೊಡಗಿರುವದು; ಆದರೂ ಪ್ರಾಣದಾಶೆಗಾಗಿ ನಾನು ನನ್ನ ಕರ್ತವ್ಯಕರ್ಮವನ್ನು ಬಿಡಲಾರೆನು. ಉತ್ಕಲವಾಸಿಗಳೂ ಉತ್ಕಲದ ಓಲಗದಲ್ಲಿಯ ಅಧಿಕಾರಿಗಳೂ ದೇಶದ್ರೋಹಿಗಳಾದರೆ ಅದಕ್ಕೆ ನಾನೇನು ಮಾಡಲಿ? ಅವರು ನೀಚ ಕೃತಿ ಮಾಡಿರುವರೆಂದು ನಾನೂ ಅವರ ಮಾರ್ಗವನ್ನನುಸರಿಸಲಾ? ಸಲಿಮನ ಸುಲತಾನನು ರಾಕ್ಷಸೀ ರಾಜ್ಯತೃಷ್ಣೆಯುವನಿರುವನು. ಅವನು ನನ್ನ ತಂದೆಯನ್ನು ಯುದ್ಧದಲ್ಲಿ ಕೊಂದು ಅವನ ರಾಜ್ಯವನ್ನು ಪಾದಾಕ್ರಾಂತಗೊಳಿಸಿದನು. ಅವನು ಯುವರಾಜನಾಗಿದ್ದ ನನ್ನನ್ನು ಎಂದು ಅಡವೀಪಾಲು ಮಾಡಿದನೋ, ಅಂದಿನಿಂದ ನನ್ನಲ್ಲಿ ಪಠಾಣರ ವಿಷಯವಾಗಿ ತಿರಸ್ಕಾರವು ಉತ್ಪನ್ನವಾಯಿತು. ಸ್ವಜಾತಿ-ಬಂಧುಗಳ ಕಡೆಗೆ ಲಕ್ಷ್ಯಗೊಡದವರಾದ ಮುಹಮ್ಮದೀಯರು ಪರಧರ್ಮದವರ ಕಡೆಗೆ ಯಾವ ಬಗೆಯ ದೃಷ್ಟಿಯನ್ನಿಟ್ಟಿರುತ್ತಾರೆಂಬದನ್ನು ನಿಮಗೆ ಹೇಳುವ ಕಾರಣವಿಲ್ಲ. ಸಲಿಮನಶಹನ ಮೇಲಿನ ಸೇಡು ತೀರಿಸಿಕೊಳ್ಳಬೇಕೆಂಬ ಬುದ್ಧಿಯಿಂದಲೆ ನಾನು ಮುಕುಂದದೇವ ಮಹಾರಾಜರ ಆಶ್ರಯವನ್ನು ಹೊಂದಿದೆನು. ದೈವದುರ್ವಿಲಾಸದಿಂದ ನನ್ನ ಪ್ರಯತ್ನಕ್ಕೆ ಯಶವು ದೊರೆಯಲಿಲ್ಲವೆಂಬದು ಸೂರ್ಯಪ್ರಕಾಶದಷ್ಟು ನಿಚ್ಚಳವಾಗಿ ಕಾಣತೊಡಗಿದೆ. ಸ್ವೀಕೃತಕಾರ್ಯದಲ್ಲಿ ಯಶೋಲಾಭವಾಗಲಿಲ್ಲೆಂದು ಕರ್ತವ್ಯವಿಮುಖನಾಗಲಿಕ್ಕೆ ನಾನು ಸಿದ್ಧನಿಲ್ಲ. ನೀವೇ ವಿಚಾರಿಸಿ ನೋಡಿರಿ. ನಾನೂ ನನ್ನ ತಂದೆಯವರಾದ ಇಬ್ರಾಹಿಮಶಹರೂ ಸಲಿಮನನ ಹಾನಿಯನ್ನೇನು ಮಾಡಿದ್ದೆವು? ಉತ್ಕಲವು ಯಾವ ಅಪರಾಧವನ್ನು ಮಾಡಿರುವದು? ಸ್ವಾರ್ಥಕ್ಕಾಗಿ ಅನ್ಯದೇಶಗಳ ಸುಖ-ಸ್ವಾತಂತ್ರ್ಯಗಳನ್ನು ಸೂರೆಗೊಳಿಸುವದು ಎಲ್ಲಿಯ ಧರ್ಮವು? ಹಿಂದುಗಳು ಜಾಣರಾಗಿದ್ದರೆ ನಿಮ್ಮ ಹೆಜ್ಜೆಗಳನ್ನು ಭರತಭೂಮಿಯಲ್ಲಿಡಗೊಡುತ್ತಿದ್ದಿಲ್ಲ. ಏನೋ ಪೂರ್ವಪುಣ್ಯದಿಂದ ರಾಜ್ಯಲಾಭವಾಯಿತೆಂದು ತಿಳಿದು ಹಿಂದುಗಳ ಸುಖಸ್ವಾತಂತ್ರ್ಯಗಳ ಕಡೆಗೆ ಲಕ್ಷ್ಯಗೊಡುವದು ರಾಜ್ಯಕರ್ತರ

ಕರ್ತವ್ಯವಲ್ಲವೇನು? ಇದ್ದ ರಾಜ್ಯದಿಂದ ತೃಪ್ತಿಹೊಂದಲಿಕ್ಕೆ ಇವರಿಗೆ ಬರುವದಿಲ್ಲವೇನು? ನಿಮ್ಮ ನೀಚ ಕೃತಿಗಳು ಎಲ್ಲರಿಗೂ ಗೊತ್ತಿರುವವು. ಪ್ರಜಾಕ್ಷೋಭೆಯಾದರೆ ಯವನರ ರಾಜ್ಯವು ಮುಕ್ಕಾಲುಗಳಿಗೆಯಾದರೂ ಇಲ್ಲಿ ಬಾಳುವದೆ? ಸ್ವಾರ್ಥಲಾಲಸೆಯ ಲಹರಿಗೆ ಸಿಲುಕಿ ಸ್ವೈರಸಂಚಾರಿಗಳಾದರೆ ಹಿಂದುಪದಪಾತಶಾಹಿಯು ಪ್ರಸ್ಥಾಪಿಸಲ್ಪಟ್ಟು, ಯವನರಿಗೆ ಹಿಂದುಸ್ತಾನದಲ್ಲಿ ನಿಂತು ನೀರುಕುಡಿಯಲಿಕ್ಕೆ ಸಹ ಅನುವು ದೊರೆಯಲಿಕ್ಕಿಲ್ಲ ಸ್ವಾರ್ಥಕ್ಕಾಗಿ ಪರಪೀಡೆ ಮಾಡಿದರೆ ಅಲ್ಲಾನು ಮೆಚ್ಚುವನೆ? ನೀವು ಹಿಂದುಗಳ ಮೇಲಿನ ಸೇಡು ತೀರಿಸಿಕೊಳ್ಳಬೇಕೆಂದು ಇಷ್ಟು ಸಾಹಸ ಮಾಡಲುದ್ಯುಕ್ತರಾಗಿರುವಿರಲ್ಲವೆ? ಸೇಡು ತೀರಿಸಿಕೊಳ್ಳುವ ಭರದಲ್ಲಿ ಇಡೀ ಉತ್ಕಲ ದೇಶವನ್ನು ಸಲಿಮುನ ಸುಲತಾನನ ಗಂಟಲಲ್ಲಿಳಿಸಬೇಕೆಂದು ಮಾಡಿರುವಿರಲ್ಲವೆ? ನಿಮ್ಮ ಕಾರ್ಯಕ್ಕೆ ವಿಘ್ನವನ್ನುಂಟು ಮಾಡಬೇಕೆಂದು ಕಾರ್ಯಾರಂಭ ಮಾಡಿ, ಪ್ರಾಣಹಾನಿಯಾಗುವದೆಂಬ ಭಯದಿಂದ ಜೀವಗಳ್ಳನಂತೆ ಓಡಿಹೋಗುವದು ಧರ್ಮವಾಗುವದೆಂದು ನೀವು ಹೇಳಿದರೆ ಈಗಲೆ ಶಸ್ತ್ರವನ್ನು ಕೆಳಗಿಡುತ್ತೇನೆ.''

''ಶಹಾಜಾದಾ, ನಿಮ್ಮ ತತ್ವಗಳು ಉದಾತ್ತವಾದವುಗಳಿರುವವು. ಕೇವಲ ಜೀವಿಸಿರುವದರಲ್ಲಿಯೇ ಆನಂದವಿರುವದೆಂದು ತಿಳಿಯುವಂತಹ ಸಾಮಾನ್ಯ ಕೋಟಿಯವರು ನೀವಲ್ಲ. ನಿಮ್ಮ ಸೈನ್ಯವು ಅತ್ಯಲ್ಪವಾಗಿರುವದರಿಂದ ಯುದ್ಧ ಮಾಡುವದು ಯೋಗ್ಯವಲ್ಲೆಂದು ತಿಳಿಸಿದೆನು.''

''ಕಾಳಾಪಹಾಡ ಸೇನಾಪತಿಗಳೇ, ನಮ್ಮ ನಿಮ್ಮ ಸೈನ್ಯಗಳು ಒತ್ತಟ್ಟಿಗಿರಲಿ. ನಾವೀರ್ವರೂ ಯುದ್ಧಮಾಡಿ ಪರಸ್ಪರರ ಶಕ್ತಿಗಳನ್ನು ಪರೀಕ್ಷಿಸೋಣ.''

''ಬಹಳೇ ಉತ್ತಮವಾದ ದಾರಿಯನ್ನು ತೆಗೆದಿರಿ. ಅಲ್ಪಸಂಖ್ಯಾಕವಾದ ನಿಮ್ಮ ಸೇನೆಯೊಡನೆ ಕಾದಲಿಕ್ಕೆ ನನ್ನ ಮನಸ್ಸು ಹಿಂಜರಿಯತೊಡಗಿತ್ತು. ಗದಾಧರನೊಡನೆ ನಾನು ಇದೇ ಬಗೆಯಾಗಿ ಕಾದಿದೆನು.''

''ಸೇನಾಪತಿಗಳೆ, ನೀವು ನನಗೆ ಜೀವದಾನ ಮಾಡಿದ್ದಿರಲ್ಲವೆ? ಜೀವದಾನ ಮಾಡಿದವರೊಡನೆ ಕಾದುವ ಪ್ರಸಂಗವೊದಗಿದ್ದಕ್ಕಾಗಿ ಛಿಛಿ!

ಖೇದವೆನಿಸತೊಡಗಿದೆ.''

" ಏನೂ ಅಡ್ಡಿಯಿಲ್ಲ. ಕರ್ತವ್ಯಧರ್ಮದ ಮುಂದೆ ಮಿಕ್ಕ ಎಲ್ಲ ಧರ್ಮಗಳೂ ಬೆಲೆಯಿಲ್ಲದವುಗಳಾಗಿರುವವು. ಇನ್ನೇಕೆ ತಡವು? ಬೇಗನೆ ಖಡ್ಗವನ್ನು ಹಿರಿಯಿರಿ.''

ಕಾಳಾಪಹಾಡ-ಕರೀಮುಶಹರಲ್ಲಿ ಕಾಳಗವು ಪ್ರಾರಂಭವಾಯಿತು. ಇಬ್ಬರೂ ಶಸ್ತ್ರವಿಶಾರದರು; ಶೂರರು; ಧೀರರು. ಕೆಲವು ವೇಳೆ ಯುದ್ಧವು ನಡೆದ ಮೇಲೆ ಕರೀಮುಶಹನ ಖಡ್ಗವು ಕಾಳಾಪಹಾಡನ ಖಡ್ಗಾಘಾತದಿಂದ ತುಂಡಾಯಿತು. ಕೂಡಲೆ ಕಾಳಾಪಹಾಡನು ಮತ್ತೊಂದು ಖಡ್ಗವನ್ನು ಅವನ ಕೈಯಲ್ಲಿ ಕೊಟ್ಟು—"ಕರೀಮುಶಹರೆ, ಒಳ್ಳೆಯ ಸಾಮರ್ಥ್ಯ ದಿಂದ ಯುದ್ಧ ಮಾಡಿರಿ. ನಿಮ್ಮ ಶಸ್ತ್ರಕೌಶಲ್ಯವು ಇಂದು ಸರಿಯಾಗಿ ಪ್ರಕಟವಾಗಲಿ. ನನಗೆ ಜೀವನವು ಬೇಸರವಾಗಿದೆ. ನಿಮ್ಮ ಕೈಯಿಂದ ನನಗೆ ಮರಣವೊದಗಿದರೆ ಉತ್ಕಲದೇಶದ ಮೇಲೆ ದೊಡ್ಡ ಕಲ್ಯಾಣ ವಾಗುವಂತಿದೆ. ಹೂಂ! ಖಡ್ಗಪ್ರಹಾರವನ್ನು ಪ್ರಾರಂಭಿಸಿರಿ!''

ರಣಪಂಡಿತರಾದ ಕಾಳಾಪಹಾಡ-ಕರೀಮುಶಹರು ಒಳ್ಳೇ ಸಾಹಸ ದಿಂದ ಕಾದತೊಡಗಿದರು. ಕೆಲವು ವೇಳೆಯ ಮೇಲೆ ಕರೀಮುಶಹನ ಕಸುವು ಕುಂದುತ್ತ ನಡೆದಂತೆ ಕಾಳಾಪಹಾಡನಿಗೆ ತಿಳಿದು ಬಂದಿತು. ಆಗ ಅವನು—

"ಶಹಾಜಾದಾ, ದಣಿದಿದ್ದರೆ ಸ್ವಲ್ಪ ವೇಳೆ ವಿಶ್ರಾಂತಿ ಪಡೆಯಿರಿ.'' ಎಂದು ಶಸ್ತ್ರ ಪ್ರಹಾರ ಮಾಡುತ್ತಲೆ ಹೇಳಿದನು. ಕರೀಮುಶಹನಾದರೂ ತನ್ನ ಖಡ್ಗವನ್ನು ಅವನ ಮೇಲೆ ಪ್ರಯೋಗಿಸುತ್ತಲೆ, ಯುದ್ಧವನ್ನು ನಿಲ್ಲಿ ಸುವ ಬಗ್ಗೆ ಅಸಮ್ಮತಿಯನ್ನು ವ್ಯಕ್ತಪಡಿಸಿದನು. ಮುಂದೆ ಒಂದು ಗಳಿಗೆಯವರೆಗೆ ಯುದ್ಧವು ನಡೆಯಿತು. ಕಾಳಾಪಹಾಡನು ಅದ್ವಿತೀಯ ಕುಶಲತೆಯಿಂದ ಕರೀಮುಶಹನ ಶಿರವನ್ನು ಹಾರಿಸಿದನು! ತಮ್ಮ ಸೇನಾ ಪತಿಯು ಬಿದ್ದನೆಂಬದು ಕರಿಮುಶಹನ ಸೈನಿಕರಿಗೆ ತಿಳಿದ ಕೂಡಲೆ ಅವರು ದಿಕ್ಕಾಪಾಲಾಗಿ ಓಡಿಹೋದರು.

ಕಾಳಾಪಹಾಡನ ಮಾರ್ಗವು ನಿರುಪಾಧಿಕವಾಯಿತು. ಅವನು

ತನ್ನ ಸೈನ್ಯದೊಡನೆ ಭುವನೇಶ್ವರದ ಅಗಸಿಯ ಬಳಿಗೆ ಬಂದನು. ಅಷ್ಟ ರಲ್ಲಿ ದೇಶದ್ರೋಹಿಯಾದ ಹರಿಕೀರ್ತನನು ಆನೆಯ ಮೇಲೆ ಕುಳಿತು ಕೊಂಡು ಕಾಳಾಪಹಾಡನನ್ನು ಎದುಗೊಳ್ಳಲಿಕ್ಕೆ ಬಂದನು. ಅವನು ಆನೆಯಿಂದಿಳಿದು ಕಾಳಾಪಹಾಡನಿಗೆ ಬಾಗಿ ನಮಸ್ಕಾರ ಮಾಡಿ: "ಸೇನಾ ಪತಿ ಸಾಹೇಬರೆ, ನಾನು ನಿಮ್ಮ ಸ್ವಾಗತಕ್ಕಾಗಿ ನಗರವನ್ನು ಶೃಂಗರಿಸಿ ನಿಮ್ಮ ದಾರಿಯನ್ನೇ ನೋಡುತ್ತಿದ್ದೆನು. ನೀವು ಅದ್ವಿತೀಯ ವಿಕ್ರಮ ಶಾಲಿಗಳು. ಓರಿಸಾದೇಶವನ್ನು ಪಾದಾಕ್ರಾಂತಗೊಳಿಸುವದು ಸಾಮಾನ್ಯ ರಿಗೆ ಸಾಧ್ಯವಾಗುವಂತಹದಿದ್ದಿಲ್ಲ."

ಕಾಳಾಪಹಾಡನು ಹರಿಕೀರ್ತನನ ಮುಜುರೆಯನ್ನು ಸ್ವೀಕರಿಸಲಿಲ್ಲ; ಕುದುರೆಯ ಮೇಲಿಂದ ಕೆಳಗೆ ಇಳಿಯಲಿಲ್ಲ. ಅವನು ಕರ್ಕಶ ವಾಣಿ ಯಿಂದ:—"ನೀನೇ ಹರಿಕೀರ್ತನನೇನು?"

"ಹೌದು; ಸೇನಾಪತಿಗಳೇ, ನಾನೇ ಹರಿಕೀರ್ತನಸೇನ ಸೇನಾ ಪತಿಯು. ಸ್ನೇಹಾಭಿಲಾಷೆಯಿಂದ ತಮಗೆ ನೆರವಾದ ಸೇನಾಪತಿಯು ನಾನೇ!"

"ನಿನಗೆ ಉತ್ಕಲದ ರಾಜಸಿಂಹಾಸನವು ಬೇಕಾಗಿರುವದಲ್ಲವೆ?"

"ಹೌದು ಖಾವಿಂದ"

"ನೀನು ನಿಮ್ಮಪ್ಪನ ಮಗನೇ ಹೌದು! ನಿಮ್ಮಪ್ಪನು ತನ್ನ ಬಾಹು ಬಲದಿಂದ ದಂಡು ಕೂಡಿಸಿ ಬಂಡು ಮಾಡಿದನು; ನೀನು ಮಾತ್ರ ಮಂದಿ ಕೂಡಿಸಿದ ದಂಡನ್ನು ಸ್ವಾಧೀನದಲ್ಲಿಟ್ಟುಕೊಂಡು ಅವರ ಕುತ್ತಿಗೆಯನ್ನೇ ಕೊಯ್ದೆ! ನಿಮ್ಮಪ್ಪನು ಗುಡಿಯನ್ನು ಕಟ್ಟಿದರೆ ನೀನು ಶಿಖರವನ್ನಿಟ್ಟೆ! ನಿನ್ನನ್ನು ಸಿಂಹಾಸನದ ಮೇಲೆ ಕುಳ್ಳಿರಿಸಿಯೆ ನಾನು ಮುಂದಿನ ಕಾರ್ಯ ಮಾಡುವೆನು. ನಿನ್ನ ತಂದೆಯು ದೇಶದ್ರೋಹ ಮಾಡಿದ್ದರೂ ನಾನು ಅವನಿಗೆ ಜೀವದಾನ ಕೊಟ್ಟೆನು; ನೀನು ಅವನಿಗಿಂತ ಹೆಚ್ಚಿನ ನೀಚ ವೃತ್ತಿಯನ್ನು ಪ್ರಕಟಿಸಿದೆ. ನಿನ್ನನ್ನು ಜೀವಂತವಾಗಿ ಉಳಿಸಿ ಪ್ರಯೋ ಜನವಿಲ್ಲ."

ಕಾಳಾಪಹಾಡನು ಹೀಗೆ ನುಡಿಯುವಷ್ಟರಲ್ಲಿ ಅವನ ಸೈನಿಕರು ಹರಿ

ಕೀರ್ತನನನ್ನು ಚತುರ್ಭುಜನನ್ನಾಗಿ ಮಾಡಿದರು. ತನ್ನ ಅವಸ್ಥೆಯೇನಾಗುವದೆಂಬದು ಹರಿಕೀರ್ತನನಿಗೆ ಹೊಳೆಯಿತು. ಆಗ ಅವನು ದೈನ್ಯದಿಂದ:—"ಜಹಾಂಪನಾಹ, ನಾನು ಎಲ್ಲ ರಾಜ್ಯವನ್ನು ಇಚ್ಛಿಸುವದಿಲ್ಲ; ಅರ್ಧರಾಜ್ಯವನ್ನು ಮಾತ್ರ ಬೇಡುವೆನು."

"ಈ ನರಪಿಶಾಚಿಯನ್ನು ಈಗಲೆ ಶೂಲಕ್ಕೇರಿಸಿರಿ! ಪಾಪಕ್ಕೆ ಪ್ರಾಯಶ್ಚಿತ್ತವು ದೊರೆಯಲೇ ಬೇಕು!"

ಕಾಳಾಪಹಾಡನು ಹೀಗೆ ಗರ್ಜಿಸಿದ ಕೂಡಲೆ ಸೈನಿಕರು ಹರಿಕೀರ್ತನನನ್ನು ತೆಗೆದುಕೊಂಡು ಹೋದರು. ಮುಂದೆ ಸ್ವಲ್ಪವೇಳೆಯಲ್ಲಿಯೆ ಅವನ ಶಿರವು ಹಾರಿಸಲ್ಪಟ್ಟಿತು. ಉತ್ಕಲದೇಶದ ಭಾವೀ ಮಹಾರಾಜರು ಯಮಸದನವನ್ನು ಸೇರಿದರು. ತಮ್ಮ ಒಡೆಯನು ಮರಣಹೊಂದಿದ ಕೂಡಲೆ ಭುವನೇಶ್ವರದಲ್ಲಿದ್ದ ಸೈನಿಕರು ಪಲಾಯನ ಮಾಡಿದರು. ಕಾಳಾಪಹಾಡನು ಸೈನ್ಯಸಹಿತವಾಗಿ ಭುವನೇಶ್ವರವನ್ನು ಪ್ರವೇಶಿಸಿದನು. ಕೋಟೆಯ ಮೇಲೆ ಅರ್ಧ ಚಂದ್ರಾಂಕಿತಧ್ವಜವು ಮೆರೆಯತೊಡಗಿತು. ಮುಂದೆ ತಮ್ಮ ಗತಿಯೇನಾಗುವದೋ ಎಂದು ಭುವನೇಶ್ವರದ ನಾಗರಿಕರು ಭಯಗೊಂಡರು; ಓಡಿ ಹೋಗಲಿಕ್ಕೆ ಅನುವು ದೊರೆತವರು ಓಡಿ ಹೋದರು.

ಮಹಾಶಯ, ಅಪಮಾನದ ಸೇಡನ್ನು ಭಯಂಕರವಾದ ರೀತಿಯಿಂದ ತೀರಿಸಿಕೊಳ್ಳಬೇಕೆಂಬ ರಾಕ್ಷಸೀ ಮಹತ್ವಾಕಾಂಕ್ಷೆಯನ್ನು ತಳೆದ ಕಾಳಾಪಹಾಡನು ಭುವನೇಶ್ವರವನ್ನು ಪ್ರವೇಶಿಸಿದ ಮೇಲೆ ಏನು ಮಾಡಿರಬಹುದು?



# ಭಯಂಕರ ಸೇಡು!!

ಕಾಳಾಪಹಾಡನು ಹರಿಕೀರ್ತನನ ಕೊಲೆ ಮಾಡಿಸಿದ್ದರಿಂದ ಭುವನೇಶ್ವರದ ಪ್ರಜಾಜನರೂ ಸೈನಿಕರೂ ಭಯಭೀತರಾದರು. ಮುಂದೆ ತಮ್ಮ ಅವಸ್ಥೆಯೇನಾಗುವದೋ ಏನೋ ಎಂದು ಅವರು ಚಿಂತಾಕ್ರಾಂತರಾದರು. ಕಾಳಾಪಹಾಡನು ತನ್ನ ಸೈನ್ಯದೊಡನೆ ನಗರ ಪ್ರವೇಶ ಮಾಡಿದನು. ಅವನನ್ನು ನಿರೋಧಿಸುವವರು ಯಾರೂ ಉಳಿಯದ್ದರಿಂದ ಅವನು ತನ್ನ ಸೈನಿಕರಿಗೆ ಕೊಲೆ ಸುಲಿಗೆಯನ್ನು ಮಾಡಲಿಕ್ಕೆ ಆಜ್ಞೆ ಮಾಡಿದನು. ಉತ್ಕಲದೇಶದಲ್ಲಿ ಭುವನೇಶ್ವರದಷ್ಟು ದೇವ-ಮಂದಿರಗಳು ಮತ್ತೆ ಎಲ್ಲಿಯೂ ಇದ್ದಿಲ್ಲ. ಕಾಳಾಪಹಾಡನು ಅಲ್ಲಿಯ ದೇವಾಲಯಗಳನ್ನು ಕೆಡಹಿಸಿ, ಮೂರ್ತಿಗಳನ್ನು ಒಡೆದು ಚೆಲ್ಲಬೇಕೆಂದು ತನ್ನ ಸೈನಿಕರಿಗೆ ಅಪ್ಪಣೆ ಕೊಟ್ಟನು. ಮೂರ್ತಿಗಳನ್ನೊಡೆಯುವದರಲ್ಲಿ ಗಿಝನಿ ಮಹಮ್ಮದನು ಹೇಗೆ ಪ್ರಸಿದ್ಧನೆನಿಸಿಕೊಂಡನೊ, ಅದರಂತೆ ಕಾಳಾಪಹಾಡನಾದರೂ ನಾಮಾಂಕಿತನಾದನು. ಈ ಕಾಳಾಪಹಾಡನ ಹೆಸರು ಇತಿಹಾಸ ಪ್ರಸಿದ್ಧವಿರುವದು. ಓರಿಸಾ, ಬಂಗಾಲ, ಆಸಾಮ, ಕಾಶಿ ಮೊದಲಾದ ಕಡೆಯಲ್ಲಿಯ ಅಸಂಖ್ಯ ಮೂರ್ತಿಗಳನ್ನು ಇವನು ನಾಶಮಾಡಿರುವನು. ಮೊದಲು ಮೂರ್ತಿಪೂಜಕನಾಗಿದ್ದ ಕಾಲಾಚಾಂದನು ಮೂರ್ತಿಭಂಜಕ ಕಾಳಾಪಹಾಡನಾದ ಸಂಗತಿಯು ಉತ್ತರ ಹಿಂದುಸ್ತಾನದ ಜನರ ಸ್ಮೃತಿಪಥದಿಂದ ಎಂದೂ ಹೋಗುವಂತಿಲ್ಲ.

ಕಾಳಾಪಹಾಡನು ಭುವನೇಶ್ವರದೊಳಗಿನ ಅಗಣಿತವಾದ ದೇವಾಲಯಗಳನ್ನು ನೆಲಸಮ ಮಾಡಿದನು. ಮೂರ್ತಿಗಳೆಲ್ಲ ಶತಚೂರ್ಣವಾದವು. ಎಷ್ಟೋ ಹಿಂದುಗಳಿಗೆ ಮಹಮ್ಮದೀಯ ಧರ್ಮವನ್ನು ಸ್ವೀಕರಿಸುವ ಪ್ರಸಂಗವೊದಗಿತು. ಇಷ್ಟರಿಂದಲೆ ಕಾಳಾಪಹಾಡನ ಸೇಡು ತೀರಿಸಿಕೊಳ್ಳುವ ಭಾವನೆಯು ಶಾಂತವಾಗಲಿಲ್ಲ. ತನಗೆ ಅಪಮಾನವಾಗಿದ್ದ ಸ್ಥಳವಾದ ಜಗನ್ನಾಥಪುರಿಯೊಳಗಿನ ಜಗನ್ನಾಥನ ಮೂರ್ತಿಯನ್ನು ನಾಶಗೊಳಿಸಬೇಕೆಂದು ಅವನ ಮಹತ್ವಾಕಾಂಕ್ಷೆ

ಯಿತ್ತು. ಭುವನೇಶ್ವರದಲ್ಲಿ ಇಸ್ಲಾಮಿಯ ಧ್ವಜವು ನೆಲೆಗೊಳಿಸಲ್ಪಟ್ಟ ಕೂಡಲೆ ಕಾಳಾಪಹಾಡನು ಜಗನ್ನಾಥಪುರಿಯ ಹಾದೀ ಹಿಡಿದನು. ಪ್ರಸಿದ್ಧ ಕ್ಷೇತ್ರವಾದ ಪುರಿಯೊಳಗಿನ ಜಗನ್ನಾಥನ ಮೂರ್ತಿಯು ಕಾಳಾಪಹಾಡನಿಂದ ವಿಧ್ವಂಸಗೊಳಿಸಲ್ಪಡುವದೆಂಬ ಸಂಗತಿಯು ಹಿಂದುಗಳಿಗೆ ತಿಳಿದೊಡನೆಯೆ ಅವರ ಹೃದಯವು ಉದ್ವಿಗ್ನತೆಯನ್ನು ಹೊಂದಿತು. ಪವಿತ್ರದೇವಾಲಯದ ನಾಶವಾಗುವದೆಂಬದು ತಿಳಿದೊಡನೆಯೇ ದೇವಸ್ಥಾನದ ರಕ್ಷಣೆಗಾಗಿ ಹಿಂದು ಜನರು ಪುರಿಯ ಕಡೆಗೆ ಧಾವಿಸತೊಡಗಿದರು.

ಹಿಂದುಗಳ ರಾಷ್ಟ್ರಭಾವನೆಗಿಂತ ಧಾರ್ಮಿಕ ಭಾವನೆಯು ಅತ್ಯಂತ ಉಜ್ವಲವಿರುವದೆಂಬದಕ್ಕೆ ಭಾರತ ವರ್ಷದ ಇತಿಹಾಸದಲ್ಲಿ ಅಸಂಖ್ಯಗಳಾದ ಉದಾಹರಣೆಗಳು ದೊರೆಯುವವು. ಇಷ್ಟು ದಿನಗಳ ಸಂಗ್ರಾಮವು ರಾಜಕೀಯವಾಗಿತ್ತು. ಭಾವೀಯುದ್ಧಕ್ಕೆ ಮಾತ್ರ ಧಾರ್ಮಿಕ ಸ್ವರೂಪವು ಪ್ರಾಪ್ತವಾಯಿತು. ಧಾರ್ಮಿಕ ಭಾವನೆಗಳಿಗೆ ಆಘಾತವುಂಟಾದ ಪ್ರಸಂಗದಲ್ಲಿ ಹಿಂದುಗಳು ಜೀವದ ಪರಿವೆಯನ್ನು ಬಿಟ್ಟು, ಶತ್ರುಗಳ ಪ್ರತೀಕಾರ ಮಾಡುತ್ತಿದ್ದರು. ಬೇಕಾದಂತಹ ಆಪತ್ತುಗಳನ್ನು ಸಹನಮಾಡಿಕೊಳ್ಳಲಿಕ್ಕೆ ಮನುಷ್ಯನು ಸಿದ್ಧನಾಗುವನು; ಆದರೆ ಧಾರ್ಮಿಕ ಸಂಕಟಗಳನ್ನು ಅನುಭವಿಸಲಿಕ್ಕೆ ಅವನ ಮನಸ್ಸು ಎಂದೂ ಒಪ್ಪುವದಿಲ್ಲ. ಜಗತ್ತಿನೊಳಗಿನ ಎಲ್ಲ ಧರ್ಮಗಳ ಜನರ ಸ್ವಭಾವವು ಇದೇ ಮೇರೆಗೆ ಇರುತ್ತದೆ. ಅದರಲ್ಲಿ ಹಿಂದುಗಳ ಧಾರ್ಮಿಕ ಭಾವನೆಗಳು ಮಿಕ್ಕ ಧರ್ಮದವರಿಗಿಂತ ಹೆಚ್ಚು ಜಾಗ್ರತವಿರುತ್ತವೆಂಬ ಮಾತಿನಲ್ಲಿ ಸಂದೇಹವಿಲ್ಲ. ಹಿಂದುಗಳು ಧರ್ಮ-ಸ್ವಾತಂತ್ರ್ಯವನ್ನು ಕಳೆದುಕೊಳ್ಳಲಿಕ್ಕೆ ಎಂದೂ ಸಿದ್ಧರಾಗುವದಿಲ್ಲ. ಅಂತೆಯೆ ಅವರು ಧರ್ಮರಕ್ಷಣೆಗಾಗಿ ಪರಕೀಯರೊಡನೆ ಜೀವದ ಹಂಗುದೊರೆದು ಕಾದುತ್ತ ಬಂದಿರುವರು. ಪ್ರತಿಯೊಂದು ಧರ್ಮ ಸಂಗ್ರಾಮದಲ್ಲಿ ಆರ್ಯ ಜನರು ತಮ್ಮ ಪ್ರತಿಪಕ್ಷಿಗಳೊಡನೆ ಎದೆಗೊಟ್ಟು ಕಾದಿ, ತಮ್ಮ ಅನುಪಮ ಧರ್ಮಪ್ರಿಯತೆಯನ್ನು ತೋರಿಸಿರುವರು.

ಕಾಳಾಪಹಾಡನು ದೇವಮೂರ್ತಿಗಳನ್ನೊಡೆಯಲುಪಕ್ರಮಿಸಿದ್ದರಿಂದ ಹಿಂದುಗಳು ಕ್ಷೋಭೆಗೊಂಡರು. ರಾಜ್ಯವು ಹೋದದ್ದಕ್ಕಾಗಿ ಅವರು ಅಷ್ಟೊಂದು ಸಂತಪ್ತರಾಗಿದ್ದಿಲ್ಲ; ಖೇದಗೊಂಡಿದ್ದಿಲ್ಲ. ಭುವನೇಶ್ವರದೊಳಗಿನ ಮೂರ್ತಿಗಳು ಶತಚೂರ್ಣಮಾಡಲ್ಪಟ್ಟದ್ದರಿಂದಲೂ, ಪುರಿಯೊಳಗಿನ ಮೂರ್ತಿಗಳ,-ಅವುಗಳಲ್ಲಿಯೂ ಕ್ಷೇತ್ರದ ಅಧಿದೇವತೆಯಾದ ಜಗನ್ನಾಥನ ಮೂರ್ತಿಯ-ಅವಸ್ಥೆಯು ಅದೇ ಬಗೆಯಾಗುವದೆಂಬದು ತಿಳಿಯತೊಡಗಿದ್ದರಿಂದಲೂ ಉತ್ಕಲವಾಸಿಗಳು ಅತಿಯಾಗಿ ಪ್ರಕ್ಷುಬ್ಧತೆಯನ್ನು ಹೊಂದಿದರು. ಅವರು ಮುಕುಂದದೇವನ ಎರಡನೆಯ ಮಗನಾದ ಗೋವಿಂದದೇವನನ್ನು ಪುರಿಗೆ ಕರೆಯಿಸಿಕೊಂಡು, ಅವನಿಗೆ ರಾಜ್ಯಾಭಿಷೇಕ ಮಾಡಿದರು. ಧರ್ಮರಕ್ಷಣೆಗಾಗಿಯೂ ಜಗನ್ನಾಥದೇವಮಂದಿರವನ್ನೂ ದೇವತಾಮೂರ್ತಿಯನ್ನೂ ಯವನರ ಕೈಯೊಳಗಿಂದ ಪಾರುಮಾಡುವದಕ್ಕಾಗಿಯೂ ಎಲ್ಲ ಹಿಂದುಗಳು ಜಗನ್ನಾಥಪುರಿಗೆ ಬರಬೇಕೆಂದು ಉತ್ಕಲದೇಶದಲ್ಲೆಲ್ಲ ಡಂಗುರವು ಹೊಡೆಯಲ್ಪಟ್ಟಿತು. ಧರ್ಮಾಭಿಮಾನಿಗಳಾದ ಹಿಂದುಗಳು ತಂಡತಂಡವಾಗಿ ಪುರಿಗೆ ಬರತೊಡಗಿದರು.

ಕಾಳಾಪಹಾಡನು ತನ್ನ ಸೈನ್ಯದೊಡನೆ ಜಗನ್ನಾಥಪುರಿಗೆ ಬಂದನು. ಹಿಂದುಗಳಿಗೂ ಪಠಾಣರಿಗೂ ಯುದ್ಧವು ಪ್ರಾರಂಭವಾಯಿತು. ಹದಿನೈದು ದಿವಸಗಳ ವರೆಗೆ ನಿಕರವಾದ ಕಾಳಗವು ನಡೆದು, ಕಡೆಗೆ ಕಾಳಾಪಹಾಡನಿಗೆ ನಗರಪ್ರವೇಶ ಮಾಡಲಿಕ್ಕೆ ಮಾರ್ಗವು ದೊರೆಯಿತು. ಅವನ ಸೈನ್ಯವು ಪ್ರೇತರಾಶಿಯನ್ನು ತುಳಿಯುತ್ತ ನಗರವನ್ನು ಸೇರಿತು. ಹಿಂದುಸೈನ್ಯವು ಹೆಜ್ಜೆಹೆಜ್ಜೆಗೆ ಪಠಾಣ ಸೈನ್ಯವನ್ನು ವಿರೋಧಿಸತೊಡಗಿತ್ತು. ಕಾಳಾಪಹಾಡನು ತನ್ನ ಸೈನ್ಯದೊಡನೆ ಹೋರಾಡುತ್ತ ಹೇಗಾದರೂ ಮಾಡಿ ಜಗನ್ನಾಥೇಶ್ವರನ ಮಂದಿರದ ಮಹಾದ್ವಾರದ ಬಳಿಗೆ ಬಂದನು. ಅಲ್ಲಿ ಹಿಂದು ಸೈನ್ಯವು ಮಂದಿರವನ್ನು ಸುತ್ತುಗಟ್ಟಿ ಕಾಯುತ್ತಿತ್ತು. ಮೂರು ದಿನಗಳ ವರೆಗೆ ತುಮುಲವಾದ ಕಾಳಗವು ನಡೆಯಿತು. ಕಾಳಾಪಹಾಡನು ಮುಂದೆ ಹೆಜ್ಜೆ ಯಿಡುತ್ತ ಗರುಡಸ್ತಂಭದ ಬಳಿಗೆ ಬಂದನು.

ಸ್ತಂಭವಿದ್ದ ಪಟಾಂಗಣದಲ್ಲಿ ಸಾವಿರಾರು ಹಿಂದುವೀರರು ತಮ್ಮ ಶಿರ ಕಮಲಗಳನ್ನು ಕೈಯಲ್ಲಿ ಹಿಡಿದುಕೊಂಡು ಸಿದ್ಧರಾಗಿದ್ದರು. ಬಾಣ-ಬರ್ಚಿ-ಖಡ್ಗಗಳೇ ಮೊದಲಾದ ಆಯುಧಗಳಿಂದ ಹಿಂದುಗಳು ಯವನರನ್ನು ಹಿಂದೆ ಸರಿಸತೊಡಗಿದ್ದರು. ಯವನರು ಮುಂದೆ ಸಾಗಲಾರಂಭಿಸಿದ್ದತು. ಹೀಗೆಯೇ ಎಷ್ಟು ದಿನಗಳವರೆಗೆ ಕಾದಿದರೂ ಜಯವು ದೊರೆಯಲಾರದೆಂದು ತಿಳಿದು ಕಾಳಾಪಹಾಡನು ತನ್ನ ಅಗ್ನಿಗೋಲಕ ಯಂತ್ರಗಳನ್ನು ತರಿಸಿ ಹಿಂದು ಸೈನ್ಯದ ಮೇಲೆ ಗೋಲಕ ಪ್ರಹಾರವನ್ನು ಪ್ರಾರಂಭಿಸಿದನು. ಈಗ ಮಾತ್ರ ಹಿಂದುಗಳ ಸ್ಥಿತಿಯು ಬಹಳೇ ಶೋಚನೀಯವಾಯಿತು. ಅಗ್ನಿಗೋಲಕಗಳ ಹೊಡತಕ್ಕೆ ಹಿಂದುಗಳು ಹಿಂದೆ ಸರಿಯಲಿಲ್ಲ; ಅವರು ನಿಂತಸ್ಥಳದಲ್ಲಿಯೆ 'ಜಯಜಗನ್ನಾಥ-ಜಯಜಗನ್ನಾಥ!' ಎಂದು ಪರಮಾತ್ಮನ ನಾಮಸ್ಮರಣೆ ಮಾಡುತ್ತ ಭೂಮಿಗೆ ಬೀಳತೊಡಗಿದರು. ಆಗ ಕಾಳಾಪಹಾಡನಿಗೆ ಎರಡನೆಯ ದ್ವಾರವನ್ನು ಪ್ರವೇಶಿಸಿಲಿಕ್ಕೆ ಮಾರ್ಗವಾಯಿತು. ಪಠಾಣ ಸೈನ್ಯವು ರಾಶಿರಾಶಿಯಾಗಿ ಬಿದ್ದಿದ್ದ ಹಿಂದುಗಳ ಪ್ರೇತಗಳನ್ನು ಬದಿಗೆ ಸರಿಸಿ ಹಾದಿಮಾಡಿಕೊಳ್ಳುತ್ತ ಎರಡನೆಯ ಬಾಗಿಲವನ್ನು ದಾಟಿ, ದೇವಸ್ಥಾನದ ಮುಖ್ಯ ಮಂದಿರದ ಮುಂದಿನ ಪಟಾಂಗಣಕ್ಕೆ ಬಂದಿತು. ಅಲ್ಲಿ ಕಡೆಯ ಹಿಂದು ಯೋಧರು ಪಠಾಣರ ಪ್ರತಿಕಾರ ಮಾಡಲಿಕ್ಕೆ ಸಿದ್ಧರೇ ಆಗಿದ್ದರು. ಆ ಪಟಾಂಗಣದಲ್ಲಿ ಅಗ್ನಿಗೋಲಕ ಯಂತ್ರಗಳು ಬರುವಂತಿರಲಿಲ್ಲ. ಅಲ್ಲಿ ಖಡ್ಗ-ಬರ್ಚಿಗಳಿಂದಲೆ ಯುದ್ಧ ಮಾಡಬೇಕಾದ್ದರಿಂದ ಪಠಾಣ ಸೈನ್ಯವು ಧೈರ್ಯಗೆಟ್ಟಿತು. ಕಡೆಯ ಕಾಳಾಪಹಾಡನು ಯುದ್ಧಮಾಡಿ ದಣಿದ ಸೈನ್ಯವನ್ನು ಹಿಂದೆ ಕಳುಹಿಸುತ್ತಲೂ, ಹೊಸ ಸೈನ್ಯವನ್ನು ತರಿಸುತ್ತಲೂ ಕಾದತೊಡಗಿದ್ದರಿಂದ ಯವನ ಸೈನ್ಯಕ್ಕೆ ಅಷ್ಟೊಂದು ದಣುವಿಕೆಯಾಗುತ್ತಿದ್ದಿಲ್ಲ; ಆದರೆ ತಮ್ಮ ಮಹಾಪ್ರಭುವಿನ ರಕ್ಷಣೆಗಾಗಿ ಜೀವದ ಹಂಗಿಲ್ಲದೆ ಕಾದತೊಡಗಿದ ಹಿಂದುಗಳ ವೀರಾವೇಶದಿಂದ ಪಠಾಣರು ಹಿಂದೆ ಸರಿಯತೊಡಗಿದರು. ಯವನ ಸೈನ್ಯವು ಹಿಂದೆ ಸರಿಯತೊಡಗಿದೊಡನೆಯೆ ಹಿಂದು ವೀರರು ಹೆಚ್ಚು ವೀರಾವೇಶದಿಂದ ಅವರ ಮೇಲೆ ಮುಗಿಬಿದ್ದರು.

ಕೂಡಲೆ ಕಾಳಾಪಹಾಡನು ತನ್ನ ಆರಿಸಿಟ್ಟ ಶೂರ ದಳವನ್ನು ಸಹಾಯಕ್ಕೆ ಕರೆಯಿಸಿಕೊಂಡನು. ಎಲ್ಲ ಸೈನ್ಯದ ಆಧಿಪತ್ಯವನ್ನು ತಾನೇ ವಹಿಸಿ, ಸೈನಿಕರಿಗೆ ಪ್ರೋತ್ಸಾಹ ಕೊಡುತ್ತ ನಿಕರವಾದ ಸಂಗ್ರಾಮವನ್ನು ಪ್ರಾರಂಭಿಸಿದನು. ಈಗ ಮಾತ್ರ ಪಠಾಣ ಸೈನ್ಯದ ಗತಿಯನ್ನು ನಿರೋಧ ಗೊಳಿಸುವದು ಹಿಂದುಗಳಿಗೆ ಅಸಾಧ್ಯವಾಯಿತು. ಸುರಿತ ಎರಡು ಸಾವಿರ ಸೈನ್ಯದ ಆಧಿಪತ್ಯವನ್ನು ವಹಿಸಿದ ವಿಕ್ರಮಶಾಲಿಯಾದ ಕಾಳಾ ಪಹಾಡನು ರಭಸದಿಂದ ದೇವಮಂದಿರದ ಕಡೆಗೆ ಸಾಗಿದನು.

ಪಠಾಣ ಸೈನ್ಯದ ಗತಿಯನ್ನು ಕುಂಠಿತ ಮಾಡುವದು ಅಸಾಧ್ಯ ವೆಂದು ತಿಳಿದು ಹಿಂದು ಸೈನಿಕರು ಕರ್ತವ್ಯಪರಾಙ್ಮುಖರಾಗಲಿಲ್ಲ. ದೇವ ಮಂದಿರದ ರಕ್ಷಣೆಗಾಗಿ ಬಂದ ಹಿಂದುಗಳು ಕರ್ತವ್ಯವನ್ನು ಜರುಗಿಸದೆ ಹೋಗಲಿಕ್ಕೆ ಬಂದಿರಲಿಲ್ಲ. 'ಹೊಡೆಯಬೇಕು; ಇಲ್ಲವೆ ಮಡಿಯಬೇಕು' ಎಂಬ ದೃಢನಿಶ್ಚಯದಿಂದಲೆ ಅವರು ಪುರಿಗೆ ಬಂದಿದ್ದರು. ಅವರು ಪರಾ ಕ್ರಮದ ಪರಾಕಾಷ್ಠೆಯನ್ನು ತೋರಿಸಿದರು. ಹಿಂದುಗಳ ನಷ್ಟಚರ್ಯೆಯ ದಿವಸಗಳು ಪ್ರಾಪ್ತವಾಗಿದ್ದವು; ಭಾಗ್ಯಶಾಲಿಯಾದ ಉತ್ಕಲದ ಭಾಗ್ಯ ಚಕ್ರವು ವಿರುದ್ಧ ಗತಿಯನ್ನು ಹೊಂದಿತ್ತು. ಅಂತೆಯೆ ಜೀವದ ಪರಿವೆ ಯಿಲ್ಲದೆ ಮಾಡಿದ ಹಿಂದುಗಳ ಸಾಹಸವು ವ್ಯರ್ಥವಾಗತೊಡಗಿತು. ಕಡೆಗೆ ಪಠಾಣ ಸೇನೆಯು ಶ್ರೀಮಂದಿರದ ಬಾಗಿಲಿಗೆ ಬಂದಿತು. ಅಲ್ಲಿ ಹಿಂದು ವೀರರು ತೀರ ಕಡಿಮೆಯಿದ್ದರೂ, ಅವರು ತೋರಿಸಿದ ಪರಾಕ್ರಮವು ಅವರ್ಣನೀಯವಾದದ್ದು. ಶೌರ್ಯ-ವೀರ್ಯ-ಗರ್ವಗಳ ಪುತ್ಥಳಿಯಾದ ಕಾಳಾಪಹಾಡನು ಸಹ ಹಿಂದುಗಳ ಪರಾಕ್ರಮವನ್ನು ನೋಡಿ ಬೆರಳು ಕಚ್ಚಿದನು. ಹಿಂದುಗಳು ಎಷ್ಟು ಪರಾಕ್ರಮದಿಂದ ಕಾದಿದರೂ, ಅವರ ಸಂಖ್ಯೆಯು ತೀರ ಕಡಿಮೆಯಾದದ್ದರಿಂದ ಪಠಾಣ ಸೈನಿಕರಿಗೆ ಈಡಾಗ ಲಿಲ್ಲ. ಕಡೆಗೆ ಕಾಳಾಪಹಾಡನೂ ಯವನ ಸೈನಿಕರೂ ದೇವಮಂದಿರ ವನ್ನು ಪ್ರವೇಶಿಸಿದರು. ಕಾಳಾಪಹಾಡನು ಸೈನ್ಯದ ಮುಂಭಾಗದಲ್ಲಿ ದ್ದನು. ಶಂಖ ಚಕ್ರ ಗದಾ ಪದ್ಮಧಾರಿಯಾದ ಜಗನ್ನಾಥನನ್ನು ನೋಡುತ್ತ ಅವನು ಕೆಲವು ಹೊತ್ತಿನ ವರೆಗೆ ತಟಸ್ಥನಾಗಿ ನಿಂತುಕೊಂಡನು. ಅವನ

ಹೃದಯದಲ್ಲಿ ಹುದುಗಿಕೊಂಡಿದ್ದ ಭಕ್ತಿರಸವು ಮಿಂಚಿನಂತೆ ಹೊಳೆದು ಮಾಯವಾಯಿತು. ಅವನು ತನ್ನ ಕರ್ತವ್ಯವನ್ನು ಸ್ಮರಿಸಿ ಮೂರ್ತಿಯ ಪಾದಗಳನ್ನು ಹಿಡಿದು ಎಳೆದನು. ಅಷ್ಟರಲ್ಲಿ ಮೂರ್ತಿಯ ಹಿಂದೆ ಅಡಗಿದ್ದ ಮಹಂತನು ಮುಂದೆ ಬಂದು—

"ಯುವನವೀರಾ! ಶಾಂತನಾಗು!"

"ಯಾರು? ಮಹಂತರೇನು? ನೀವು ಇನ್ನೂ ಜೀವಿಸಿರುವಿರಾ?"

"ಮಹಾ ಪ್ರಭುವಿನ ಇಚ್ಛೆಯಂತೆ ಸರ್ವ ಕಾರ್ಯಗಳು ನೆರವೇರುವವು."

"ಮಹಾ ಪ್ರಭುವು ಸಮುದ್ರದ ಬುಡವನ್ನು ಸೇರಬೇಕೆಂದು ಇಚ್ಛಿಸಿದ್ದರಿಂದಲೆ ನಾನು ಇಷ್ಟು ಸಾಹಸ ಮಾಡಿದೆನು. ಮಹಂತರೆ! ಪುರಿಯ ಓಲಗದಲ್ಲಿ ಹಿಂದುಜನರು ಕಾಲಾಚಾಂದರಾಯನ ಅಪಮಾನ ಮಾಡಿದ್ದು ಸ್ಮರಣೆಯಲ್ಲಿರುವದಲ್ಲವೆ? ಅದೇ ಅಪಮಾನದ ಸೇಡು! ಸೇಡು! ಭಯಂಕರವಾದ ಸೇಡು! ತೀರಿಸಿಕೊಳ್ಳಬೇಕೆಂದು ಈ ಕಾಳಾಪಹಾಡನು-ಹಿಂದುಗಳ ಗಾಜಿಯು-ಪುರೀಕ್ಷೇತ್ರದಲ್ಲಿ ಅವತರಿಸಿರುವನು!" ಎಂದು ನುಡಿದು, ಕಾಳಾಪಹಾಡನು ತನ್ನ ಸೈನಿಕರನ್ನು ಕುರಿತು— "ಹೂಂ, ಮೂರ್ತಿಯನ್ನೆತ್ತಿರಿ" ಎಂದು ಆಜ್ಞಾಪಿಸಿದನು.

ಪಠಾಣ ಸೈನಿಕರು ಶ್ರೀಜಗನ್ನಾಥನ ಮೂರ್ತಿಯನ್ನು ಹೊತ್ತುಕೊಂಡು ಸಮುದ್ರತೀರಕ್ಕೆ ಸಾಗಿದ್ದರು. ಕಾಳಾಪಹಾಡನು ಸೈನ್ಯದ ಮುಂಭಾಗದಲ್ಲಿ ಒಳ್ಳೆಯ ಔತ್ಸುಕ್ಯತೆಯಿಂದ ಅಶ್ವಾರೋಹಿಯಾಗಿ ಸಾಗಿದ್ದನು. ಬೂನಾನು ಅವನ ಜೊತೆಯಲ್ಲಿಯೇ ಇದ್ದನು. ಸೈನ್ಯವು ಜಗನ್ನಾಥ ಮೂರ್ತಿಯೊಡನೆ ಸಮುದ್ರತೀರವನ್ನು ತಲುಪಿತು. ಅನಂತರದಲ್ಲಿ ಅವರು ಆ ಮೂರ್ತಿಯನ್ನು ಸಮುದ್ರತೀರದ ವಾಲುಕಾಮಯ ಪ್ರದೇಶದಲ್ಲಿರಿಸಿದರು. ಕಾಳಾಪಹಾಡನೂ ಬೂನಾನೂ ಮೂರ್ತಿಯಿಂದ ಸ್ವಲ್ಪ ಅಂತರದ ಮೇಲಿದ್ದರು. ಅವರಿದ್ದ ಸ್ಥಳದಿಂದ ಸ್ವಲ್ಪ ಅಂತರದ ಮೇಲೆ ಇಬ್ಬರು ಸ್ತ್ರೀಯರೂ ಒಬ್ಬ ಪುರುಷನೂ ನಿಂತಿದ್ದರು. ಅವರ ಸಮೀಪದಲ್ಲಿ ಒಂದು ಶವವು ಬಿದ್ದಿತ್ತು. ಈ ದೃಶ್ಯವನ್ನು ನೋಡಿದ

ಕೂಡಲೆ ಬೂನಾನು ಅಲ್ಲಿಗೆ ಹೋದನು. ಆಗ ಅಲ್ಲಿದ್ದ ತರುಣಿಯರಲ್ಲಿ ಒಬ್ಬಳು—"ಭೂಪಬಾಲೆ!" ಎಂದೆನಲು,

"ಯಾರು? ವ್ರಜಬಾಲೆಯೇನು? ಅವ್ವಾ, ನೀನು ಉಷಾಸುಂದರಿ ಯುಲ್ಲವೆ?"

"ಭೂಪಬಾಲೆ, ನೀನು ಪುರುಷವೇಷದಲ್ಲಿರುವದೇಕೆ?"

"ವ್ರಜಬಾಲೆ, ಅದನ್ನು ಹೇಳುತ್ತ ನಿಲ್ಲುವಂತಿಲ್ಲ,"

"ಕಾಳಾಪಹಾಡನು ತನ್ನ ಅಪಮಾನದ ಸೇಡು ತೀರಿಸಿಕೊಳ್ಳುವ ದಕ್ಕಾಗಿ ಜಗನ್ನಾಥನ ಮೂರ್ತಿಯನ್ನು ತಂದಿರುವಂತೆ ಕಾಣುತ್ತದೆ. ಹಾಯ! ಹಾಯ! ಅಧಃಪಾತ! ಅಧಃಪಾತ!"

"ವ್ರಜಬಾಲೆ, ನಿಯತಿಯು ಅನುಲ್ಲಂಘ್ಯನೀಯವಿರುವದು. ಹಿಂದು ಗಳು ಅನ್ಯಾಯ ಮಾಡಿರುವರು; ಅವರು ಅದರ ಫಲವನ್ನುಣ್ಣಲೇ ಬೇಕಾ ಗಿರುವದು.''

ಭೂಪಬಾಲೆಯು ಹೀಗೆ ನುಡಿಯುವಷ್ಟರಲ್ಲಿ ಕಾಳಾಪಹಾಡನೂ ಅಲ್ಲಿಗೆ ಬಂದನು. ಆಗ ಅವನು ಅಲ್ಲಿದ್ದ ಶವವನ್ನು ನೋಡಿ: "ಇವನು ಭೃಗುರಾಮನು!"

"ಈ ನೀಚನು ಪರಮ ಸಾಧ್ವಿಯವರಾದ ನಮ್ಮ ಅಮ್ಮನವರ ಮೇಲೆ ಕೈನೀಡಲುಪಕ್ರಮಿಸಿದ್ದರಿಂದ ಅವನಿಗೆ ಈ ದುರವಸ್ಥೆಯು ಪ್ರಾಪ್ತವಾಗಿರುವದು" ಎಂದು ಅಲ್ಲಿದ್ದ ನಟವರನು ಹೇಳಿದನು.

"ಕಾಲಾಚಾಂದರಾಯರೆ, ನೀವು ನಿಮ್ಮ ಅಪಮಾನದ ಸೇಡು ತೀರಿಸಿಕೊಂಡಿರಿ! ಆದರೆ ನಾನು............"

"ಇನ್ನೂ ತೀರಿಸಿಕೊಂಡಿಲ್ಲ; ಜಗನ್ನಾಥನು ಸಮುದ್ರದ ತಳವನ್ನು ಕಂಡನೆಂದರೆ ನನ್ನ ಆಕಾಂಕ್ಷೆಯು ಪೂರ್ಣವಾಗಿ ಈಡೇರಿದಂತಾಗು ವದು'' ಎಂದು ವ್ರಜಬಾಲೆಗೆ ಕಾಳಾಪಹಾಡನು ಹೇಳಿದನು.

"ಅದೂ ಪೂರ್ಣವಾಗಬಹುದು; ಆದರೆ ನನ್ನ ಆಯುಷ್ಯವನ್ನು ಮಣ್ಣು ಪಾಲು ಮಾಡಿದ ನಿಮ್ಮ ಮೇಲಿನ ಸೇಡು ತೀರಿಸಿಕೊಳ್ಳುವದು ಮಾತ್ರ ನನ್ನಿಂದಾಗಲಿಲ್ಲ. ಅಕ್ಕಾ, ಭೂಪಸುಂದರಿ, ನೀನಾದರೂ ಪತಿಯನ್ನೊಡ

ಗೂಡಿ ಸೌಖ್ಯದಲ್ಲಿದ್ದುದನ್ನು ನೋಡಿ ನನಗೆ ಆನಂದವೆನಿಸುತ್ತದೆ."

"ಭೂಪಬಾಲೆ! ಭೂಪಬಾಲೆ ಯಾರು?"

"ಇವಳೇ!" ಎಂದು ವ್ರಜಬಾಲೆಯು ಬೂನಾನನ್ನು ತೋರಿಸಿದಳು. ಬೂನಾನು ಅವನತ ಮುಖವುಳ್ಳವನಾದನು. ಆಗ ಕಾಳಾಪಹಾಡನು. "ಬೂನಾ! ಇದೇನು ವಿಚಿತ್ರವು?"

ಬೂನಾನು ನಿಜಸ್ಥಿತಿಯನ್ನು ಕಾಳಾಪಹಾಡನಿಗೆ ತಿಳಿಸಿದನು. ಬೂನಾನೇ ಭೂಪಬಾಳೆಯೆಂಬದು ಗೊತ್ತಾದ ಕೂಡಲೆ ಅವನಿಗೆ ಅತಿಶಯ ವಾದ ವಿಸ್ಮಯವಾಯಿತು. ಸಾಧ್ವೀಮಣಿಯಾದ ಭೂಪಬಾಲೆಯು ಪುರುಷ ವೇಷದಿಂದ ತನ್ನ ಮೈನೆಳಲಿನಂತಿದ್ದುದನ್ನು ನೋಡಿ, ಕಾಳಾ ಪಹಾಡನ ಆನಂದವು ಹೃದಯಾಕಾಶವನ್ನು ತುಂಬಿ ಹೊರಸೂಸ ತೊಡ ಗಿತು. ಆಗ ಅವನು ಕುದುರೆಯಿಂದಿಳಿದು ತನ್ನ ಪ್ರಿಯತಮೆಯನ್ನು ಬಿಗಿದಪ್ಪಿ ದನು. ಕೆಲವು ವೇಳೆಯ ಮೇಲೆ ಅವನು ವ್ರಜಬಾಲೆಯನ್ನು ಕುರಿತು: "ವ್ರಜಬಾಲೆ, ನಿನ್ನ ವಿಷಯದಲ್ಲಿ ನಾನು ಅಧಮತನ ಮಾಡಿದೆನು. ನಾನು ನಿನ್ನ ಯೋಗ್ಯತೆಯನ್ನರಿಯದೆ ಅನುಚಿತಕಾರ್ಯಪ್ರವೃತ್ತನಾದದ್ದ ರಿಂದ ಪಶ್ಚಾತ್ತಾಪವುಂಟಾಗಿದೆ. ನಿನ್ನ ಅನುಪಮವಾದ ಯೋಗ್ಯತೆಯ ಖ್ಯಾತಿಯನ್ನು ನಾನು ಕೇಳಿರುವೆನು. ನೀನು ಅದ್ವಿತೀಯ ನಾರೀಮಣಿ ಯಿರುವೆ. ನಿನ್ನ ಸುಖೋದಯವಾಗಬೇಕೆಂದು ಕೆಲವು ದಿನಗಳ ಹಿಂದೆ ನನ್ನ ಇಚ್ಛೆಯಿತ್ತು. ನೀನು ಒತ್ತಾಯದಿಂದ ನನ್ನೊಡನೆ ವಿವಾಹವಾಗಿ ದ್ದರೂ, ನಿನ್ನ ಹೃದಯವು ಬೇರೊಬ್ಬನಿಗೆ ಒಪ್ಪಿಸಲ್ಪಟ್ಟಿತ್ತು. ಅಂತೆಯೆ ನಿನ್ನ ಗತಸೌಖ್ಯವನ್ನು ಗಳಿಸಿಕೊಡಬೇಕೆಂದು ನಾನು ಯತ್ನಿಸತೊಡ ಗಿದ್ದೆನು; ಆದರೆ ಈಗ ಮಾಡುವದೇನು! ಕೆಲಸವು ಕೈಮೀರಿ ಹೋಗಿರು ವದು. ಗದಾಧರನು ಜೀವಂತನಾಗಿದ್ದರೆ ನಿನ್ನ ಭಾಗ್ಯೋದಯವಾಗುವ ಸಂಭವವಿತ್ತು. ನೀನು ದುರ್ದೈವಿ............"

"ಏನು? ಗದಾಧರರು ಇಹಲೋಕವನ್ನು ತ್ಯಜಿಸಿದರೆ!" ವ್ರಜ ಬಾಲೆಯು ಹೀಗೆ ನುಡಿದವಳೇ ಭೂಮಿಗೆ ಬಿದ್ದಳು. ಕೂಡಲೆ ಭೂಪ

ಬಾಲೆಯು ಅವಳನ್ನು ಹಿಡಿದೆತ್ತಿ ತನ್ನ ತೊಡೆಯ ಮೇಲೆ ಮಲಗಿಸಿ ಕೊಂಡು ಕಣ್ಣೀರು ಸುರಿಸುತ್ತ:–"ವ್ರಜಬಾಲೆ! ವ್ರಜಬಾಲೆ! ನನ್ನ ಭಗಿನಿಯಾದ ವ್ರಜಬಾಲೆ! ಪರಮಸಾಧ್ವಿಯಾದ ವ್ರಜಬಾಲೆ!" ಎಂದು ಕೂಗಿದಳು. ಅಷ್ಟು ಹೊತ್ತಿಗೆ ಅವಳ ಆತ್ಮವು ಜಡ ಶರೀರವನ್ನು ತೊಲಗಿ ಕೆಲವು ನಿಮಿಷಗಳಾಗಿ ಹೋಗಿದ್ದವು!

ಈ ದೃಶ್ಯವನ್ನು ನೋಡಿ ಎಲ್ಲರೂ ದುಃಖ-ವಿಸ್ಮಯಗಳಿಂದ ದಿಙ್ಮೂಢ ರಾದರು. ಕಲ್ಲೆದೆಯ ಕಾಳಾಪಹಾಡನ ಕಣ್ಣೊಳಗಿಂದಲೂ ಎರಡು ದುಃಖಾಶ್ರುಗಳು 'ಪಟ ಪಟ' ಎಂದು ಬಿದ್ದವು. ಭೂಪಬಾಲೆಯಂತು ಕಲ್ಲು ಕರಗುವಂತೆ ಪ್ರಲಾಪಿಸಿದಳು. ಅನಂತರದಲ್ಲಿ ಕಾಳಾಪಹಾಡನು ವ್ರಜಬಾಲೆಯ ಹಾಗು ಭೃಗುರಾಮನ ಶವದ ಕಡೆಯ ಸಂಸ್ಕಾರವನ್ನು ಪೂರ್ತಿಗೊಳಿಸಿ, ಭೂಪಬಾಲೆಯೊಡನೆ ತನ್ನ ಸೈನ್ಯವಿದ್ದ ಸ್ಥಳಕ್ಕೆ ಬಂದನು.

ಕಾಳಾಪಹಾಡನು ಜಗನ್ನಾಥನ ಮೂರ್ತಿಯನ್ನು ನೋಡಿದ ಕೂಡಲೆ ಅವನ ತಾಮಸ ಹೃದಯವು ಜಾಗ್ರತವಾಯಿತು. ಆ ಮೂರ್ತಿಯನ್ನು ಯಾವಾಗ ಸಮುದ್ರತಳವನ್ನು ಕಾಣಿಸುವೆನೋ ಎಂಬಂತೆ ಅವನಿಗಾಯಿತು. ಕೂಡಲೆ ಅವನು ತನ್ನ ಕೈಮುಟ್ಟ ಮೂರ್ತಿಯನ್ನು ಹಿಡಿದೆತ್ತಿದನು. ಪಠಾಣ ಸೈನಿಕರೂ ಅವನಿಗೆ ನೆರವಾದರು. ಕಾಳಾಪಹಾಡನು ಮೂರ್ತಿ ಯನ್ನು ತೆಗೆದುಕೊಂಡು ಸಮುದ್ರವನ್ನು ಹೊಕ್ಕನು. ಅವನು ಕುತ್ತಿಗೆಯ ವರೆಗೆ ನೀರು ಬರುವ ತನಕ ಹೋಗಿ—

"ಸೇಡು! ಸೇಡು!! ಭಯಂಕರ ಸೇಡು!!!" ಎಂದು ನುಡಿದು, ಶ್ರೀ ಜಗನ್ನಾಥನ ಮೂರ್ತಿಯನ್ನು ಸಮುದ್ರದಲ್ಲಿ ಒಗೆದನು!

\+ \+ \+ \+

ಪರಕ್ಷಣದಲ್ಲಿಯೆ ಅಶರೀರವಾಣಿಯು ಕೇಳತೊಡಗಿತು:

"ಕಾಲಾಚಾಂದ! ನೀನು ಓರಿಸಾದೇಶವನ್ನು ಪಾದಾಕ್ರಾಂತಗೊಳಿ ಸಿದೆ; ಆದರೆ ಮಹಾ ಪ್ರಭುವಿನ ಮೂರ್ತಿಯನ್ನು ನಾಶಗೊಳಿಸಬೇಕೆಂಬ ನಿನ್ನ ಮಹತ್ವಾಕಾಂಕ್ಷೆಯು ಈಡೇರಲಿಲ್ಲ. ನಿನ್ನ ಗರ್ವವು ವ್ಯರ್ಥ

ವಾಯಿತು. ಶ್ರೀ ಜಗನ್ನಾಥನು ನೀರ ಮೇಲೆ ತೇಲುತ್ತ ಹೊರಟಿರುವನು ನೋಡು!''

ಕಾಳಾಪಹಾಡನು ವಿಸ್ಮಿತನಾಗಿ ಸುತ್ತಲೂ ನೋಡಿದನು. ಅವನಿಗೆ ಒಬ್ಬ ಸಂನ್ಯಾಸಿಯು ಕಂಡನು. ಪರಕ್ಷಣದಲ್ಲಿ ಮಾಯವಾದನು!

"ಕಾಲಾಚಾಂದ! ನಿನಗೆ ನಾನು ಬಾಲ್ಯದಲ್ಲಿ ಭೆಟ್ಟಿಯಾಗಿ ನಿನ್ನ ಭವಿಷ್ಯವನ್ನು ಹೇಳಿದ್ದೆನು. ಈಗ ಎರಡನೆಯ ಬಾರಿ ಭೆಟ್ಟಿಕೊಟ್ಟೆನು. ಇನ್ನು ನೀನು ಹೆಚ್ಚಿನ ಸಾಹಸ ಮಾಡದೆ ಮರಳಿ ಹೋಗು. ಈಗ ಚನ್ನಾಗಿ ನೋಡು. ಶ್ರೀ ಜಗನ್ನಾಥನು ತನ್ನ ಮಂದಿರದಲ್ಲಿ ದಿವ್ಯವಾದ ಪೀಠದ ಮೇಲೆ ವಿರಾಜಿಸತೊಡಗಿರುವನು! ನೋಡು! ಚನ್ನಾಗಿ ನೋಡು! ಶಂಖ, ಚಕ್ರ, ಗದಾ, ಪದ್ಮಧಾರಿಯಾದ ಭಗವಂತನನ್ನು ಚನ್ನಾಗಿ ನೋಡು!''

ಕಾಳಾಪಹಾಡನು ದಂಗು ಬಡೆದನು! ದಿಗ್ಭ್ರಾಂತನಾದನು! ಅಷ್ಟರಲ್ಲಿ ಜಗನ್ನಾಥಪುರೀ ಕ್ಷೇತ್ರದೊಳಗಿನ ಹಿಂದುಗಳು ಭಕ್ತಿಭಾವದಿಂದ: ''ಜಯ ಜಗನ್ನಾಥ! ಜಯ ಜಗನ್ನಾಥ!'' ಎಂದು ಜಯಘೋಷ ಮಾಡತೊಡಗಿದರು!

ಕಾಳಾಪಹಾಡನು ತನ್ನ ಸೇನೆಯೊಡನೆ ಜಗನ್ನಾಥಪುರಿಯಿಂದ ಹೊರಟು ಗೌಡರಾಜಧಾನಿಗೆ ಬಂದನು.

ಕಾಳಾಪಹಾಡನ ಭಯಂಕರವಾದ ಸೇಡಿನ ಬೇಗೆಯಲ್ಲಿ ಸಿಲುಕಿ ಸ್ವಾತಂತ್ರ್ಯವನ್ನು ಕಳೆದುಕೊಂಡ ಉತ್ಕಲವು ಇದು ವರೆಗೂ ಪಾರತಂತ್ರ್ಯದಲ್ಲಿಯೇ ಇರುವದು!



